ಬನ್ನಂಜೆ ಗೋವಿಂದಾಚಾರ್ಯ

# ಆವೆಯ ಮಣ್ಣಿನ ಆಟದ ಬಂಡಿ

'ಮೃಚ್ಛಕಟಿಕ'ದ ಕನ್ನಡ ರೂಪಾಂತರ



# ಆವೆಯ ಮಣ್ಣಿನ ಆಟದ ಬಂಡಿ

(ಶೂದ್ರಕಕವಿಯ ಸಂಸ್ಕೃತನಾಟಕ 'ಮೃಚ್ಛಕಟಿಕ'ದ ಕನ್ನಡ ರೂಪಾಂತರ)

ಬನ್ನಂಜೆ ಗೋವಿಂದಾಚಾರ್ಯ

ಕು. ಶಿ. ಅಭಿನಂದನ ಸಮಿತಿ

ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ

ಎಂ.ಜಿ.ಎಂ. ಕಾಲೇಜು, ಉಡುಪಿ–೫೭೬೧೦೨

**1996**

**AAVEYA MAṆṆINA AAṬADA BAṆḌI** - A Translation of the Sanskrit drama '*Mrcchakaṭikam*', by Vidyavachaspati Bannanje Govindacharya Published by Ku Shi Felicitation Committee, Rashtrakavi Govinda Pai Samshodhana Kendra, M G M College, UDUPI-576 102, Karnataka

Year of Publication 1996

Pages 220

Price Rs **60**



**ISBN 81–86668–00–4**

ಬೆಲೆ: ರೂ ೬೦

## ಪ್ರಕಟಣಾ ಸಲಹಾ ಮಂಡಳಿ

**ಪ್ರೊ| ಕು. ಶಿ. ಹರಿದಾಸ ಭಟ್ಟ** (ನಿರ್ದೇಶಕರು, ಕರ್ನಾಟಕ ಜಾನಪದ ರಂಗಕಲೆಗಳ ಅಧ್ಯಯನ ಕೇಂದ್ರ), **ಡಾ| ಎನ್. ತಿರುಮಲೇಶ್ವರ ಭಟ್** (ಪ್ರಧಾನರು, ಆಂಗ್ಲ ಭಾಷಾ ವಿಭಾಗ, ಎಂ ಜಿ ಎಂ ಕಾಲೇಜು, ಉಡುಪಿ), **ಡಾ| ಉಪ್ಪಂಗಳ ರಾಮ ಭಟ್** (ಪ್ರಧಾನರು, ಕನ್ನಡ ಭಾಷಾ ವಿಭಾಗ, ಎಂ ಜಿ ಎಂ ಕಾಲೇಜು, ಉಡುಪಿ), **ಶ್ರೀ ಮುರಳೀಧರ ಉಪಾಧ್ಯ ಹಿರಿಯಡಕ** (ಪ್ರಧಾನರು, ಕನ್ನಡ ಭಾಷಾ ವಿಭಾಗ, ಪೂರ್ಣಪ್ರಜ್ಞ ಸಂಜೆ ಕಾಲೇಜು, ಉಡುಪಿ), **ಶ್ರೀ ಎಚ್. ಕೃಷ್ಣ ಭಟ್** (ನಿರ್ದೇಶಕರು, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಎಂ ಜಿ ಎಂ ಕಾಲೇಜು, ಉಡುಪಿ)

*ಕಂಪ್ಯೂಟರ್ ಅಕ್ಷರಸಂಯೋಜನೆ*

'ನವದುರ್ಗಾ ಲೇಸರ್‌ಟೆಕ್', ಕಟ್ಟೆ ಆಚಾರ್ಯ ಮಾರ್ಗ, ಕುಂಜಿಬೆಟ್ಟು, ಉಡುಪಿ–೨

ಮುದ್ರಣ

ಮಣಿಪಾಲ್ ಪವರ್ ಪ್ರೆಸ್, ಮಣಿಪಾಲ

# ಪ್ರಕಾಶಕರ ಮಾತು

ವಿದ್ಯಾವಾಚಸ್ಪತಿ ಬನ್ನಂಜೆ ಗೋವಿಂದಾಚಾರ್ಯರು ಗ್ರಂಥಸಂಪಾದಕರಾಗಿ, ಅನುವಾದಕರಾಗಿ, ಪತ್ರಿಕಾಸಂಪಾದಕರಾಗಿ ಹೇಗೆ ಪರಿಚಿತರೋ ಅದಕ್ಕೂ ಮಿಗಿಲಾಗಿ ಕರ್ನಾಟಕದ ಜನತೆಗೆ ಪರಮ ಪೂಜ್ಯರಾದ ಆಚಾರ್ಯಮಧ್ವರ ಕೃತಿಗಳನ್ನು ಮೂಲದ ಆಶಯಕ್ಕೆ ಅನುಗುಣವಾಗಿ ಪ್ರವಚನ ನೀಡುವುದರಲ್ಲಿ ಖ್ಯಾತನಾಮರು ಆಚಾರ್ಯರ ಪ್ರವಚನವೆಂದರೆ ಆಬಾಲವೃದ್ಧರ ಸಂದೋಹ; ಹೆಂಗುಸರು, ಮಕ್ಕಳೂ ಮುಂದು; ಪ್ರವಚನಾಂತ್ಯದಲ್ಲಿ ಆಚಾರ್ಯರ ವಾಗ್ಸುಧೆಯಲ್ಲಿ ಮಿಂದ ಸಂತೃಪ್ತಿ

ಪ್ರವಚನದಲ್ಲಿ ಮಿಂಚಿದಂತೆ ಆಚಾರ್ಯರು ಸಂಸ್ಕೃತ ಗ್ರಂಥಗಳ, ಕಾವ್ಯ, ನಾಟಕಗಳ ರೂಪಾಂತರದಲ್ಲಿಯೂ ಸಿದ್ಧಹಸ್ತರು; ಅಭಿನವ ಬಾಣನೆಂದೇ ಡಾ। ದ ರಾ ಬೇಂದ್ರೆಯವರಿಂದ ಗುರುತಿಸಲ್ಪಟ್ಟವರು – ಅವರು ಬಾಣಭಟ್ಟನ ಕಾದಂಬರಿಯನ್ನು ಕನ್ನಡಕ್ಕೆ ರೂಪಾಂತರಿಸಿದಾಗ ರೂಪಾಂತರವೂ ಕೂಡಾ ಅವರದೇ ಮೋಹಕ ಶೈಲಿಯಿಂದ ಕೂಡಿದ್ದು ಅದೇ ಭಾವದಲ್ಲಿ, ಶೈಲಿಯಲ್ಲಿ ಕನ್ನಡಕ್ಕೆ ರೂಪಾಂತರಗೊಂಡ ಮಗುದೊಂದು ಕೃತಿ ಶೂದ್ರಕಕವಿಯ "ಮೃಚ್ಛಕಟಿಕಂ" ಎಂಬ ಸಂಸ್ಕೃತ ರೂಪಕ ಸಾಹಿತ್ಯದಲ್ಲಿಯೇ ಅಪೂರ್ವವಾದ ಪ್ರಕರಣ ರೂಪಾಂತರಗೊಂಡು ಬಹಳಷ್ಟು ವರುಷವಾಗಿದ್ದರೂ ಅಹಲ್ಯೆಯು ರಾಮಪಾದಸ್ಪರ್ಶಕ್ಕೆ ಕಾಯ್ದು ಕುಳಿತಂತೆ ಆಚಾರ್ಯರ ಷಷ್ಟಿಪೂರ್ತಿಗೆ ಕಾಯ್ದು ನಿಂತಿತ್ತು ಆ ಹಸ್ತಪ್ರತಿ

ಆಚಾರ್ಯರಿಗೂ ನಮ್ಮ ಸಂಸ್ಥೆಗೂ ಅಪೂರ್ವ ನಂಟು; ವರುಷದಲ್ಲಿ ಒಂದೆರಡು ಪ್ರವಚನಗಳನ್ನು ನಾವು ಹಮ್ಮಿಕೊಳ್ಳದೇ ಇಲ್ಲ ಹಾಗೆ ನೇರ್ಪುಗೊಳಿಸಿದ ಪ್ರವಚನಗಳನ್ನು ಧ್ವನಿಸುರುಳಿಯಲ್ಲಿ ಸೆರೆಹಿಡಿದು ಪುಸ್ತಕರೂಪದಲ್ಲಿಯೋ, ಲೇಖನವಾಗಿಯೋ ಪ್ರಕಟಿಸುವುದು ಹವ್ಯಾಸವಾಗಿ ಬೆಳೆದುಬಂದಿದೆ ನಮಗೆ ಹಾಗೆ ಪ್ರಕಟಣಗೊಂಡ ಮೊದಲ ಕೃತಿ ಆಚಾರ್ಯಮಧ್ವರ "ಮಹಾಭಾರತತಾತ್ಪರ್ಯನಿರ್ಣಯ" ಮತ್ತೆ "ಆಚಾರ್ಯಮಧ್ವ-ಬದುಕು ಬರೆಹ" ಇದೀಗ ಮೂರನೆಯ ಪುಷ್ಪವಾಗಿ, ಅವರ ಅರುವತ್ತರ ಹಬ್ಬದ ಕಾಣಿಕೆಯಾಗಿ ಪ್ರಕಟಗೊಳ್ಳುತ್ತಿರುವುದು "ಆವೆಯ ಮಣ್ಣಿನ ಆಟದ ಬಂಡಿ" ಇದನ್ನು ಸಹೃದಯ ಓದುಗರಾದ ನಿಮ್ಮ ಮಡಿಲಲ್ಲಿರಿಸಲು ಹರ್ಷವೆನಿಸುವುದು ಆಚಾರ್ಯರ ಅಭಿಮಾನಿಗಳಾದ, ನಮ್ಮ ಕೇಂದ್ರದ ಹಿತೈಷಿಗಳಾದ ತಾವು ಆದರದಿಂದ ಸ್ವಾಗತಿಸುತ್ತೀರಿ ಎಂದು ವಿಶ್ವಾಸಪೂರ್ವಕ-

*ಈ ಹೊತ್ತಗೆಯ ನಿರ್ಮಾಣದಲ್ಲಿ ನೆರವಾದ ಕಲಾವಿದ ಶ್ರೀ ಜಯದೇವ, ಕಂಪ್ಯೂಟರ್ ಅಕ್ಷರಸಂಯೋಜಿಸಿದ 'ನವದುರ್ಗಾ ಲೇಸರ್‌ಟೆಕ್' ಕುಂಜಿಬೆಟ್ಟು, ಸುಂದರವಾಗಿ ಮುದ್ರಿಸಿದ ಮಣಿಪಾಲ ಪವರ್ ಪ್ರೆಸ್ –ಇವರಿಗೆ ನಾವು ಆಭಾರಿಗಳಾಗಿದ್ದೇವೆ*

ಉಡುಪಿ–೨
೧೦–೧೧–೧೯೯೫

**ಹೆರಂಜೆ ಕೃಷ್ಣ ಭಟ್ಟ**
ನಿರ್ದೇಶಕರು

# ಪೂರ್ವಕಥಾನುವಾದ

ಈ ಮಾತಿಗೆ ಹತ್ತಾರು ವರ್ಷಗಳೇ ಸಂದವು
ಒಮ್ಮೆ ಗೆಳೆಯ ಬಿ ವಿ ಕಾರಂತರು ಹೇಳಿದರು: "ಕಾಳಿದಾಸನ ನಾಟಕಗಳನ್ನು ರಂಗಕ್ಕೆ ಅಳವಡಿಸುವುದು ತುಂಬ ಕಷ್ಟ ಆ ಕಾಲದ ರಂಗತಂತ್ರ ಬೇರೆಯೇ ಇದ್ದಿರಬೇಕು ಇವತ್ತಿಗೂ ತುಂಬ ಸಕಾಲಿಕವಾದ ಸಂಸ್ಕೃತ ನಾಟಕವೆಂದರೆ ಶೂದ್ರಕಕವಿಯ 'ಮೃಚ್ಛಕಟಿಕ' ಅದನ್ನು ನೀವು ಕನ್ನಡಿಸಿಕೊಟ್ಟರೆ ರಂಗದಲ್ಲಿ ಪ್ರಯೋಗಿಸಬೇಕೆಂಬ ಆಸೆಯಿದೆ"
ಕಾರಂತರ ಮಾತಿನಿಂದ ನನ್ನ ಸೋಮಾರಿತನಕ್ಕೂ ಸ್ಫೂರ್ತಿ ಬಂದುಬಿಟ್ಟಿತು ಕೂತಪೆಟ್ಟಿಗೇ ಅನುವಾದಕ್ಕೆ ತೊಡಗಿದೆ ಕೆಲವೇ ದಿನಗಳಲ್ಲಿ ಅನುವಾದದ ಕೆಲಸ ಮುಗಿಯಿತು

ನನ್ನ ಕೆಲಸವೇನೋ ಆಯಿತು ಆದರೆ ಕಾರಂತರ ಕೆಲಸ ಆಗಲಿಲ್ಲ
ಅವರು ಬೇರೆ ಯಾವುದೋ ಕೆಲಸದಲ್ಲಿ ತನ್ನನ್ನು ತೊಡಗಿಸಿಕೊಂಡರು ಅವರ ವಿಕ್ಷಿಪ್ತತೆಯನ್ನು ಬಲ್ಲ ನನಗೆ ಅಚ್ಚರಿಯಾಗಲಿಲ್ಲ
ಮೃಚ್ಛಕಟಿಕದ ಕನ್ನಡ ರೂಪಾಂತರ ಕತ್ತಲೆಕೋಣೆಯಲ್ಲಿ ತಪಸ್ಸಿಗೆ ನಿಂತಿತು
ತಪಸ್ಸು ಫಲಿಸಿತೇನೋ ನಡುವೆ ನೀನಾಸಂ ಜತೆಗೆ ನಾಕೂರು ತಿರುಗಾಡಿ ರಂಗದಲ್ಲಿ ನಲಿದಾಡಿತು ಮತ್ತೆ ಕತ್ತಲೆಮನೆಯ ವಾಸ
ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರದ ನಿರ್ದೇಶಕ ಗೆಳೆಯ ಕೃಷ್ಣ ಭಟ್ಟರಿಗೆ ಈ ಅಜ್ಞಾತವಾಸದ ಸುದ್ದಿ ಕಿವಿಗೆ ಬಿತ್ತು ಅವರ ಕಿವಿ ನೆಟ್ಟಗಾಯಿತು ಅನುವಾದದ ಅದೃಷ್ಟವೂ ನೆಟ್ಟಗಾಯಿತು
ಕೃಷ್ಣ ಭಟ್ಟರ ಕಿವಿಗೆ ಹಾಕಿದವರು ಗೆಳೆಯ ಮುರಳೀಧರ ಉಪಾಧ್ಯರು ಈ ಎಲ್ಲ ಗೆಳೆಯರ ಪ್ರೀತಿಗೆ ಕಟ್ಟುಬಿದ್ದು ನಾನು ಅನುವಾದದ ಹಾಳೆಗಳ ಕಟ್ಟನ್ನು ಕತ್ತಲೆಕೋಣೆಯಿಂದ ಹುಡುಕಿ ತೆಗೆದು ಅವರ ಕೈಗೊಪ್ಪಿಸಿದೆ
ಅವರ ಕೈಗೆ ಸೇರಿದ ಮೇಲೆ ತಡವಾಗಲಿಲ್ಲ ಕತ್ತಲೆಕೋಣೆಯಿಂದ ನೇರ ಡಾ। ಪದ್ಮನಾಭ ಅವರ ಕಂಪ್ಯೂಟರ್ ಅಕ್ಷರಜೋಡಣೆಗೆ; ಅಲ್ಲಿಂದ ಅಚ್ಚಿನ ಮನೆಗೆ ಮತ್ತೂ ಕೊಂಚ ತಡವಾಯಿತು ಅದೂ ನನ್ನಿಂದಲೆ ಕರಡಚ್ಚು ತಿದ್ದಿ ಕೊಡದೆ ಹಾಗೆಯೆ ಒಳಗಿಟ್ಟುಕೊಂಡಿದ್ದೆ ಆದರೆ ಈ ಗೆಳೆಯರ ಕಾಟ ಅದಮ್ಯವಾದದ್ದು ಅವರು ಬೆನ್ನುಬಿಡಲೇ ಇಲ್ಲ ಕೊನೆಗೂ ಪುಸ್ತಕ ಅಚ್ಚಾಗಿ ರಂಗಪ್ರವೇಶ ಮಾಡಿಯೇಬಿಟ್ಟಿತು ಅಚ್ಚಾಗುವುದೇ ಅದರ ಹಣೆಯಲ್ಲಿ ಬರೆದಿದ್ದರೆ ನಾನೇನು ಮಾಡಲಿ!

* * * * *

'ಮೃಚ್ಛಕಟಿಕ'!
ಅರ್ಥವಾಗದಿದ್ದರೂ ಕಿವಿಯಲ್ಲಿ ಗುನುಗುಡುವ ರೋಚಕವಾದ ಹೆಸರು

ನಾಟಕದಂತೆಯೆ ಹೆಸರಿನಲ್ಲಿ ಹೊಸ ಬಗೆಯ ಭಾವ
'ಮೃತ್' ಎಂದರೆ (ಆಟಿಕೆಗಳನ್ನು ತಯಾರಿಸುವ) ಮಣ್ಣು; ಆವೆಯ ಮಣ್ಣು 'ಶಕಟಿಕಾ' ಎಂದರೆ ಆಟದ ಬಂಡಿ ಮೃತ್ + ಶಕಟಿಕಾವನ್ನು ಕುರಿತ ಕೃತಿ 'ಮೃತ್+ಶಕಟಿಕಮ್' ಆದರಿಂದ 'ಮೃಚ್ಛಕಟಿಕ' ಕನ್ನಡದಲ್ಲಿ 'ಆವೆಯ ಮಣ್ಣಿನ ಆಟದ ಬಂಡಿ'
ವಾಸ್ತವವಾಗಿ ಇದು ನಾಟಕವಲ್ಲ; ಪ್ರಕರಣ
ಸಂಸ್ಕೃತದಲ್ಲಿ ದೃಶ್ಯಕಾವ್ಯವನ್ನು ರೂಪಕ ಎನ್ನುತ್ತಾರೆ
ಅದರ ಹತ್ತು ಪ್ರಭೇದಗಳಲ್ಲಿ ನಾಟಕ ಒಂದು; ಪ್ರಕರಣ ಇನ್ನೊಂದು
ಆದರೆ ಕನ್ನಡದಲ್ಲಿ ದೃಶ್ಯಕಾವ್ಯದ ಎಲ್ಲ ಪ್ರಭೇದಗಳನ್ನೂ ನಾಟಕ ಎಂದೇ ಕರೆಯುವುದು ರೂಢಿ ಅದಕೆಂದೆ ನಾನು ನಾಟಕವೆಂಬ ಪದವನ್ನೆ ಬಳಸಿದ್ದೇನೆ
ರೂಪಕದ ಕಥಾವಸ್ತು ಪೌರಾಣಿಕ ಅಥವಾ ಐತಿಹಾಸಿಕವಾಗಿದ್ದರೆ ಸಂಸ್ಕೃತದಲ್ಲಿ ಅದನ್ನು ನಾಟಕ ಎನ್ನುತ್ತಾರೆ ರಾಮ–ಕೃಷ್ಣ ಇಂಥ ಲೋಕೋತ್ತರ ವ್ಯಕ್ತಿತ್ವವನ್ನು ಜನಸಾಮಾನ್ಯರಿಗೂ ಮುಟ್ಟುವಂತೆ ನಟಿಸಿ ತೋರಿಸುವ, ನಾಟ್ಯಪ್ರಧಾನವಾದ ರೂಪಕ ಎನ್ನುವುದಕ್ಕಾಗಿ
ಕಥಾವಸ್ತು ಜಾನಪದ ಅಥವಾ ಸಾಮಾಜಿಕವಾಗಿದ್ದರೆ ಸಂಸ್ಕೃತದಲ್ಲಿ ಅದನ್ನು ಪ್ರಕರಣ ಎನ್ನುತ್ತಾರೆ ಜನಸಾಮಾನ್ಯರಿಗೆ ತೀರ ಪರಿಚಿತವಾದ, ಜನಪದ ಜೀವನದ 'ಹಗರಣ'ಗಳನ್ನು ಅಭಿನಯಿಸಿ ತೋರಿಸುವ ರೂಪಕ ಎನ್ನುವುದಕ್ಕಾಗಿ
ಸಾಮಾನ್ಯವಾಗಿ ಕನ್ನಡದಲ್ಲಿ ಪೌರಾಣಿಕ ಮತ್ತು ಐತಿಹಾಸಿಕ ನಾಟಕಗಳು ಕ್ರಮೇಣ ತೆರೆಮರೆ ಸೇರಿದವು ಅಪವಾದವಾಗಿ ಬೆರಳೆಣಿಕೆಯ ಕೃತಿಗಳು ಬಂದರೂ ಕೂಡ
ನಾಟಕದ ಸ್ಥಾನವನ್ನು ಪ್ರಕರಣ ಗೆದ್ದುಕೊಂಡಿತು
ಪರಿಣಾಮವಾಗಿ ಪ್ರಕರಣ ಕನ್ನಡದಲ್ಲಿ ಬರಿಯ 'ಹಗರಣ'ವಾಗದೆ ಸಾಮಾಜಿಕ ನಾಟಕ ಎಂಬ ಹೆಸರು ಪಡೆಯಿತು
ಶೂದ್ರಕಕವಿಯ 'ಮೃಚ್ಛಕಟಿಕ' ಅಂಥ ಒಂದು ಸಾರ್ವಕಾಲಿಕ ಮೌಲ್ಯದ ಸಂಸ್ಕೃತ ಸಾಮಾಜಿಕ ನಾಟಕ

* * * * *

ಸಂಸ್ಕೃತರೂಪಕಗಳ ಸ್ಥಿತಿ–ಗತಿ ಕನ್ನಡಕ್ಕಿಂತ ತೀರ ಭಿನ್ನ
ಅಲ್ಲಿ ಪೌರಾಣಿಕ ಕಥಾವಸ್ತುಗಳಿಗೇ ಪ್ರಾಧಾನ್ಯ.
ಪೌರಾಣಿಕ ಕಥೆಗಳನ್ನಾಯ್ದುಕೊಂಡು ಆ ಪಾತ್ರಗಳ ಮೂಲಕ ತಮ್ಮ ಪ್ರಚಲಿತ ಸಮಾಜದ ಓರೆ–ಕೋರೆಗಳಿಗೆ ಕನ್ನಡಿ ಹಿಡಿಯುವ ಕೆಲಸವನ್ನು ಸಂಸ್ಕೃತ ನಾಟಕಕಾರರು ಮಾಡಿದರು; ಭಾಸ, ಕಾಳಿದಾಸ, ಭವಭೂತಿ ಇಂಥ ಮಹಾನ್ ನಾಟಕಕಾರರಿಂದ ಹಿಡಿದು ಸಾಮಾನ್ಯನಾಟಕಕಾರರ ತನಕ ಎಲ್ಲರೂ.

ಇದಕ್ಕೆ ಅಪವಾದವಾಗಿ ಸಂಸ್ಕೃತದಲ್ಲಿ ಒಂದು ಶ್ರೇಷ್ಠ ಸಾಮಾಜಿಕನಾಟಕವನ್ನು ನೀಡಿದವನು ಶೂದ್ರಕಕವಿ ಆದರೆ ಶೂದ್ರಕನೆ ಇಂಥ ಸಾಮಾಜಿಕ ನಾಟಕಗಳ ಮೊದಲ ಕವಿ ಎನ್ನುವಂತಿಲ್ಲ

ನಮಗೆ ಈಗ ಇನ್ನೊಂದು ನಾಟಕ ದೊರಕಿದೆ: "ದರಿದ್ರಚಾರುದತ್ತಮ್"

ಇದೇ ಕಥೆ, ಹಲವು ಪದ್ಯಗಳು ಸಂಭಾಷಣೆಗಳು ಕೂಡ ಇವೇ, ಇಂಥವೇ ಆದರೆ ಅದರ ಚೌಕಟ್ಟು ಸರಳ; ಇದು ಸಂಕೀರ್ಣ ಅದರಲ್ಲಿ ನಾಕೇ ಅಂಕಗಳು, ಇದರಲ್ಲಿ ಹತ್ತು

ಈಗ ತಿಳಿದಿರುವಂತೆ ಅದರ ಕರ್ತೃ ಭಾಸ ಹಾಗಿದ್ದರೆ ಅದು ಮೃಚ್ಛಕಟಿಕಕ್ಕಿಂತಲು ಪ್ರಾಚೀನವೆಂದಾಯಿತು ಅನಂತರ ಶೂದ್ರಕಕವಿ ಅದನ್ನೆ ಮೂಲವಾಗಿಟ್ಟುಕೊಂಡು ಅದರ ಅಪೂರ್ಣವಾದ ಕಥೆಯನ್ನು ಇನ್ನಷ್ಟು ವಿಸ್ತರಿಸಿ ಒಟ್ಟು ನಾಟಕಕ್ಕೆ ಹೊಸ ಆಯಾಮ ಕೊಟ್ಟ, ಹೊಸ ರೂಪ, ಹೊಸ ಮೆರುಗು ಕೊಟ್ಟ ಎನ್ನುತ್ತಾರೆ

ಮೃಚ್ಛಕಟಿಕ ಹತ್ತು ಅಂಕಗಳ ದೊಡ್ಡ ನಾಟಕವಾದ್ದರಿಂದ, ಬಯಲಾಟದಂತೆ ಬೆಳಗಿನ ಜಾವದ ತನಕ ಸಾಗುವ ಪ್ರಯೋಗವಾದ್ದರಿಂದ ಯಾರೋ ನಾಟಕ ಹವ್ಯಾಸಿಗಳು ರಂಗಪ್ರಯೋಗಕ್ಕೆ ಅನುಕೂಲವಾಗುವಂತೆ ಅದನ್ನು ಕಿರಿದುಗೊಳಿಸಿರಬೇಕು; ಮತ್ತು ಅದನ್ನು ಜನಪ್ರಿಯಗೊಳಿಸಲು ಭಾಸನ ತಲೆಗೆ ಕಟ್ಟಿರಬೇಕು ಎನ್ನುವುದು ಇನ್ನೊಂದು ಗುಮಾನಿ

ಖಚಿತವಾದ ಆಧಾರಗಳು ಸಿಗುವ ತನಕ ಈ ಬಗೆಗೆ ಕರಾರುವಾಕ್ಕಾಗಿ ಏನನ್ನಾದರೂ ಹೇಳುವುದು ಕಷ್ಟ ಏನೇ ಆದರೂ 'ಮೃಚ್ಛಕಟಿಕ'ದ ಮಹತ್ವಕ್ಕೆ ಕೊರತೆಯಿಲ್ಲ ಚಾರುದತ್ತಕ್ಕಿಂತ ಇದರ ಕಥಾಹಂದರದ ಹರವು ದೊಡ್ಡದು: ರಾಜನ 'ಪೂರ್ವಾಶ್ರಮ'ದವರ ಎಡೆಬಿಡಂಗಿತನ, ರಾಜಕೀಯ ಹಸ್ತಕ್ಷೇಪ, ನೈತಿಕ ಅಧಃಪತನ, ರಾಜ್ಯಾಂಗಕ್ಕೆ ಹೆದರಿ ನಡೆಯುವ ನ್ಯಾಯಾಂಗ, ಆಡಳಿತದ ಕುಸಿತದಿಂದ ಸಮಾಜದಲ್ಲಿ ಅರಕ್ಷಿತತೆ, ಸಂಭಾವಿತವರ್ಗದವರೂ ಕಾನೂನಿನ ಕಣ್ಣುತಪ್ಪಿಸಿ ಅಡ್ಡದಾರಿ ಹಿಡಿಯಬೇಕಾದ ಅನಿವಾರ್ಯತೆ, ಹಿರಿಯರ ಸಣ್ಣತನ, ಸಣ್ಣವರ ಹಿರಿತನ, ವರ್ಗಸಂಘರ್ಷ, ಕೆಳವರ್ಗದ ಜನರ ಬಂಡಾಯ, ಅರಸೊತ್ತಿಗೆಯ ಪತನ, ಸಮಗಾರ–ನಾಪಿತ ಇಂಥ ಅಲಕ್ಷಿತವರ್ಗದ ನೆರವಿನಿಂದ ಗೊಲ್ಲರ ಹುಡುಗನೊಬ್ಬನಿಗೆ ರಾಜಪಟ್ಟ, ಪರಿಣಾಮವಾಗಿ ಶ್ರೀಮಂತ ಮೇಲ್ವರ್ಗದ ದಬ್ಬಾಳಿಕೆಯಿಂದ ಬಿಡುಗಡೆಗೊಂಡ ಜನತೆಯ ಹಸನಾದ ಬದುಕು –ಇಂಥ ಸಾಮಾಜಿಕ ವಿಡಂಬನೆಗಳಿಂದ ಈ ನಾಟಕದ ಸಂಕೀರ್ಣತೆ ಅನನ್ಯವಾದದ್ದು

ವೇಶ್ಯೆ ವಸಂತಸೇನೆ ಮತ್ತು ಕೊಡುಗೈತನದಿಂದ ಸಂಪತ್ತನ್ನೆಲ್ಲ ಕಳಕೊಂಡ ದರಿದ್ರ ಚಾರುದತ್ತ ಇವರಿಬ್ಬರ ಪ್ರಾಮಾಣಿಕ ಪರಿಶುದ್ಧಪ್ರೇಮ ಕಥೆಯ ಮೂಲದ್ರವ್ಯ ಅದರ ಸುತ್ತ ಸಮಕಾಲೀನ ಸಾಮಾಜಿಕ ಜೀವನದ ಎಲ್ಲ

ಓರೆಕೋರೆಗಳನ್ನೂ ಪೋಣಿಸಿ ಕಥೆಯನ್ನು ಹೆಣೆದ ಕವಿಯ ಚಾತುರ್ಯ ಅಚ್ಚರಿಬರಿಸುವಂಥದು

ಅದೂ ಒಬ್ಬ ರಾಜ ಇಂಥ ನಾಟಕವನ್ನು ಬರೆದ ಎನ್ನುವುದು ಇಲ್ಲಿ ತುಂಬ ಮುಖ್ಯವಾಗುತ್ತದೆ

* * * * *

ರಾಜಾ ಶೂದ್ರಕ

ನಾಟಕದಂತೆಯೆ ಕವಿಯ ಹೆಸರೂ ರೋಚಕ

ಅವನು ಕ್ಷತ್ರಿಯ ಅರಸ; ಆದರೆ ಅವನ ಹೆಸರು ಶೂದ್ರಕ

ಇದು ಒಬ್ಬ ಕ್ಷತ್ರಿಯ ಅರಸನ ಸಹಜ ಹೆಸರಾಗಿರುವ ಸಂಭವ ಕಡಿಮೆ

ಇಂಥ ಇನ್ನೊಂದು ಉದಾಹರಣೆ ಇತಿಹಾಸದಲ್ಲಿ ಪ್ರಾಯಃ ಇಲ್ಲ

[ಸ್ಕಾಂದಪುರಾಣದ ಕುಮಾರಿಕಾ ಖಂಡದಲ್ಲಿ ಒಬ್ಬ ಶೂದ್ರಕರಾಜನ ಉಲ್ಲೇಖ ಇದೆ ಎನ್ನುತ್ತಾರೆ ಇವತ್ತಿಗೂ ಬೆಳೆಯುತ್ತಿರುವ, ಸ್ಥಳಪುರಾಣಗಳ ಭಾರದಿಂದ ಹೊಟ್ಟೆ ಉಬ್ಬರಿಸಿಕೊಳ್ಳುತ್ತಿರುವ ಸ್ಕಾಂದಪುರಾಣವನ್ನು ಕಟ್ಟಿಕೊಂಡು ನಾವೇನು ಮಾಡಲಿಕ್ಕುಂಟು

ಮತಿಪುರದ ಶೂದ್ರಕರಾಜನ ಉಲ್ಲೇಖ 'ಭರತಖಂಡದ ಪೂರ್ವವೃತ್ತ'ದಲ್ಲಿ ಬಂದಿದೆ ಎಂದು ಇನ್ನೊಂದು ಮಾತು ಅದು ಪ್ರಾಮಾಣಿಕ ದಾಖಲೆ ಎಂದು ನಂಬಬಹುದಾದರೆ ಅವನೇ ಈ ಶೂದ್ರಕರಾಜ ಆಗಿರಬಹುದು

ಆದರೆ ಈ ನಾಟಕಕಾರ ಶೂದ್ರಕ ಅವಂತಿಪುರದವ; ಮತಿಪುರದವನಲ್ಲ ಪ್ರಾಯಃ ಲಿಪಿಕಾರರ ಪ್ರಮಾದದಿಂದ 'ಅವಂತಿಪುರ'ವೇ 'ಮತಿಪುರ'ವಾಗುವ ಸಾಧ್ಯತೆ ಉಂಟು

ಬಾಣಭಟ್ಟನ ಕಾದಂಬರಿಯಲ್ಲೂ ಒಬ್ಬ ಶೂದ್ರಕರಾಜ ಬರುತ್ತಾನೆ ಆದರೆ ಅವನು ಐತಿಹಾಸಿಕ ವ್ಯಕ್ತಿಯಲ್ಲ ಜಾನಪದ ಕಥೆಯಲ್ಲಿ ಮೂಡಿಬಂದ ಚಂದ್ರಾವತಾರ

ಈ ನಾಟಕಕಾರನ ಖ್ಯಾತಿಯೆ ಆ ಜಾನಪದದ ರಾಜನಿಗೂ ಆ ಹೆಸರು ಬರಲು ಸ್ಫೂರ್ತಿಯಾಯಿತೇನೋ!]

ಪ್ರಾಯಃ ಈ ಹೆಸರು ಅವನ ನಾಮಕರಣದ ಹೆಸರಿರಲಿಕ್ಕಿಲ್ಲ ಎಂಬ ಗುಮಾನಿ ನನಗಿದೆ ಹಾಗಿದ್ದರೆ ಇದು ಅವನ ಕ್ರಾಂತಿಕಾರಿ ಮನೋವೃತ್ತಿಯನ್ನು ಬಿಂಬಿಸುವ ಕಾವ್ಯನಾಮ ಇರಬಹುದೆ?

ಶೂದ್ರ ಎಂದರೆ ಇನ್ನೊಬ್ಬರ ದುಃಖಕ್ಕೆ ಕರಗಿ ಅವರ ನೆರವಿಗೆ ಧಾವಿಸುವ ಕರುಣಾಳು ಎಂದರ್ಥ [ಶುಚಾ ದ್ರವತಿ] ತುಂಬ ರೋಚಕವಾದ ಹೆಸರಲ್ಲವೆ?

ಇಂಥ ಕಾವ್ಯನಾಮ ಇಡುವುದಕ್ಕೂ ಈ ಕವಿಗೆ ಉಪನಿಷತ್ತಿನಿಂದ ಸ್ಫೂರ್ತಿ ದೊರಕಿರಬೇಕು

*ಉಪನಿಷತ್ತಿನ ಪ್ರಸಂಗ ಹೀಗಿದೆ: ಜಾನಶ್ರುತಿ ಎಂಬ ರಾಜ ರೈಕ್ವಮುನಿಯ ಬಳಿ ಜ್ಞಾನಪಿಪಾಸುವಾಗಿ ಬಂದಾಗ ಮುನಿ ಅವನನ್ನು 'ಶೂದ್ರ' ಎಂದು ಸಂಬೋಧಿಸುತ್ತಾನೆ: "ಅಹ ಹಾರೇತ್ವಾ ಶೂದ್ರ ತವೈವ ಸಹ ಗೋಭಿರಸ್ತು" ದುಃಖದಿಂದ ಕರಗಿ ಬಂದ ರಾಜ ಎನ್ನುವುದಕ್ಕಾಗಿ ಮುನಿ ಆ ರಾಜನನ್ನು 'ಶೂದ್ರ' ಎಂದು ಕರೆದ ಎಂದು ಉಪನಿಷತ್ತಿನ ರಹಸ್ಯ ಬಲ್ಲವರು ಹೇಳುತ್ತಾರೆ*

*ಉಪನಿಷತ್‌ಕಾಲದ ಋಷಿ ರೈಕ್ವನ ಈ ವಿಚಿತ್ರ ಸಂಬೋಧನೆಯೆ ನಮ್ಮ ನಾಟಕಕಾರನ ಕಾವ್ಯನಾಮಕ್ಕೆ ಹಿನ್ನೆಲೆ ಒದಗಿಸಿರಬಹುದೇನೋ!*

* * * * *

*ಇವನ ಕಾಲದ ಬಗ್ಗೆಯೂ ಹೆಚ್ಚಿನ ವಿವರಗಳೇನೂ ಸಿಗುತ್ತಿಲ್ಲ ವಿಮರ್ಶಕರು ಇವನ ಕಾಲವನ್ನು ಕ್ರಿ ಶ ಎರಡನೇ ಶತಕದಿಂದ ಆರನೆಯ ಶತಕದ ತನಕ ಎಳೆದಾಡುತ್ತಾರೆ ಯಾವ ಕಾಲದವನೇ ಇರಲಿ ಸಾರ್ವಕಾಲಿಕವಾದ ನಾಟಕ ವೊಂದನ್ನು ನಮಗೆ ನೀಡಿದ್ದಾನೆ ಎನ್ನುವುದು ಮುಖ್ಯ*

*ಕೆಲವರು ಹೀಗೂ ಹೇಳುತ್ತಾರೆ: ಕವಿ ದಂಡಿಯೆ ಶೂದ್ರಕನ ಹೆಸರಿನಲ್ಲಿ ಈ ನಾಟಕವನ್ನು ರಚಿಸಿದ್ದ ದಂಡಿ ಆರನೆಯ ಶತಕದವನು ಆದರಿಂದ ಇವನೂ ಆರನೆಯ ಶತಕದವನು*

*ಇವುಗಳಿಗೆಲ್ಲ ನಿಖರವಾದ ದಾಖಲೆಗಳಿಲ್ಲ ಬರಿಯ ಪ್ರವಾದಗಳು ಅಕಾರಣ ವಾಗಿ ಶೂದ್ರಕನ ಮೇಲೆ ನಾವು ಹೀಗೆಲ್ಲ ಅಪವಾದ ಹಾಕಬಾರದು*

*ಅವನ ಜೀವನದ ಬಗೆಗೂ ಅವನೇ ಈ ನಾಟಕದಲ್ಲಿ ಹೇಳಿಕೊಂಡದ್ದನ್ನು ಬಿಟ್ಟರೆ ಬೇರೆ ಯಾವ ವಿವರವೂ ತಿಳಿದಿಲ್ಲ*

*ಈ ನಾಟಕದಲ್ಲಿ ಅವನ ಬಗೆಗೆ ಮೂರು ಪದ್ಯಗಳಿವೆ:*

**ದ್ವಿರದೇಂದ್ರಗತಿಶ್ಚಕೋರನೇತ್ರಃ**
**ಪರಿಪೂರ್ಣೇಂದುಮುಖಃ ಸುವಿಗ್ರಹಶ್ಚ ।**
**ದ್ವಿಜಮುಖ್ಯತಮಃ ಕವಿರ್ಬಭೂವ**
**ಪ್ರಥಿತಃ ಶೂದ್ರಕ ಇತ್ಯಗಾಧಸತ್ತ್ವಃ ॥**

**ಋಗ್ವೇದಂ ಸಾಮವೇದಂ ಗಣಿತಮಥ ಕಲಾಂ ವೈಶಿಕೀಂ ಹಸ್ತಿಶಿಕ್ಷಾಂ**
**ಜ್ಞಾತ್ವಾ ಶರ್ವಪ್ರಸಾದಾದ್ ವ್ಯಪಗತತಿಮಿರೇ ಚಕ್ಷುಷೀ ಚೋಪಲಭ್ಯ ।**
**ರಾಜಾನಂ ವೀಕ್ಷ್ಯ ಪುತ್ರಂ ಪರಮಸಮುದಯೇನಾಶ್ವಮೇಧೇನ ಚೇಷ್ಟ್ವಾ**
**ಲಬ್ಧ್ವಾ ಚಾಯುಃ ಶತಾಬ್ದಂ ದಶದಿನಸಹಿತಂ ಶೂದ್ರಕೋಽಗ್ನಿಂ ಪ್ರವಿಷ್ಟಃ ॥**

**ಸಮರವ್ಯಸನೀ ಪ್ರಮಾದಶೂನ್ಯಃ**
**ಕಕುದೋ ವೇದವಿದಾಂ ತಪೋಧನಶ್ಚ ।**
**ಪರವಾರಣಬಾಹುಯುದ್ಧಲುಬ್ಧಃ**
**ಕ್ಷಿತಿಪಾಲಃ ಕಿಲ ಶೂದ್ರಕೋ ಬಭೂವ ॥**

*ಈ ಪದ್ಯಗಳಿಂದ ಅವನ ಬಗೆಗೆ ಒಟ್ಟು ತಿಳಿದು ಬರುವ ಸಂಗತಿ ಇಷ್ಟು: ನಡಿಗೆಯಲ್ಲಿ ಆನೆಯ ಗತ್ತು; ಬೆಳುದಿಂಗಳಹಕ್ಕಿಯಂಥ ಚುರುಕುಕಣ್ಣು; ಹುಣ್ಣಿಮೆಯ ಚಂದಿರನಂಥ ಚೆಲುಮೋರೆ; ಒಟ್ಟು ಸುಂದರವಾದ, ಆಕರ್ಷಕವಾದ ಮೈಕಟ್ಟು ಇಂಥ ಈ ಕವಿ ಮಹಾವೀರನಾಗಿ ಕ್ಷತ್ರಿಯರಿಗೆಲ್ಲ ಮುಂಚೂಣಿಯಲ್ಲಿದ್ದ; ಶೂದ್ರಕ ಎಂದು ಪ್ರಖ್ಯಾತನಾಗಿದ್ದ*

*ಅವನು ಋಗ್ವೇದ–ಸಾಮವೇದಗಳಲ್ಲಿ ಪರಿಣತ ಗಣಿತದಲ್ಲು ನಿಪುಣ ವೇಶ್ಯೆಯರ ಲಲಿತಕಲೆಗಳಲ್ಲಿ ಚತುರ ಆನೆಗಳನ್ನು ಪಳಗಿಸುವುದರಲ್ಲಿ ಜಾಣ ಶಿವನ ಹಸಾದದಿಂದ ತಿಳಿಗಣ್ಣು ಪಡೆದವನು ಸಂಭ್ರಮದಿಂದ ಅಶ್ವಮೇಧ ಯಾಗ ಮಾಡಿದವನು ಮಗನನ್ನು ಪಟ್ಟದಲ್ಲಿ ಕುಳ್ಳಿರಿಸಿ ತಾನು ನೂರು ವರ್ಷ ಹತ್ತು ದಿನ ಬದುಕಿ ಕೊನೆಯಲ್ಲಿ ಅಗ್ನಿಪ್ರವೇಶ ಮಾಡಿ ದೇಹತ್ಯಾಗ ಮಾಡಿದವನು*

*ಯುದ್ಧದಲ್ಲಿ ಪ್ರವೀಣ ಎಚ್ಚರಗೆಡದೆ ಬದುಕಿದವನು ವೇದಜ್ಞರಲ್ಲಿ ಶ್ರೇಷ್ಠ ತಪಸ್ವಿ ಹಗೆಯ ಪಡೆಯ ಆನೆಗಳನ್ನು ತೋಳುಗಳಿಂದಲೆ ಹೋರಬಲ್ಲ ವೀರ ಇಷ್ಟು ಅವನ ಬಗೆಗೆ ನಾಟಕದಲ್ಲಿ ನಮಗೆ ಸಿಗುವ ಸಂಗತಿ*

*ಇದರ ಎರಡನೆಯ ಪದ್ಯ ಮತ್ತೆ ಗೊಂದಲಕ್ಕೆಡೆ ಮಾಡಿದೆ 'ನೂರು ವರ್ಷ ಹತ್ತು ದಿನ ಬದುಕಿ ಬೆಂಕಿಗೆ ಹಾರಿದೆ' ಎಂದು ಅವನೇ ಹೇಳಿಕೊಳ್ಳುವುದು ಹೇಗೆ?*

*ಪ್ರಾಯಃ ಅವನು ಸತ್ತ ಮೇಲೆ ಯಾರೋ ಈ ಪದ್ಯವನ್ನು ನಾಟಕದಲ್ಲಿ ಸೇರಿಸಿರಬೇಕು*

*ಅವನು ಶಿವನ ಅನುಗ್ರಹದಿಂದ ದಿವ್ಯದೃಷ್ಟಿ ಪಡೆದವನಾದ್ದರಿಂದ ಮೊದಲೇ ತನ್ನ ಅವಸಾನದ ಭವಿಷ್ಯವನ್ನರಿತು ದಾಖಲಿಸಿದ್ದ ಎಂದು ಹೇಳುವವರೂ ಉಂಟು*

* * * * *

*ರೂಪಾಂತರದ ಬಗೆಗೆ ಎರಡು ಮಾತು:*

*ನಾನು ಮೃಚ್ಛಕಟಿಕವನ್ನು ಈಗ ಅನುವಾದಿಸಿದರೆ ಬೇರೆಯೆ ರೀತಿಯಲ್ಲಿ ರೂಪಾಂತರಗೊಳ್ಳುತ್ತಿತ್ತೆನೋ ಆದರೆ ನಾನಾವ ಬದಲಾವಣೆಗೂ ಕೈಹಾಕಲಿಲ್ಲ ಹಿಂದೆ ಬರೆದಿಟದು ಹೇಗಿತೋ ಹಾಗೆಯೆ ಮುದಣವಾಗಿದೆ*

ಪದ್ಯಗಳನ್ನು ಮುಕ್ತಬಂಧದ ನಡೆಯಲ್ಲಿ ಅನುವಾದಿಸಿದ್ದೇನೆ ನಾಟಕಪ್ರಯೋಗದಲ್ಲಿ ಅದನ್ನು ಪದ್ಯದಂತೆ ಹೇಳಬೇಕೆಂದರೆ ಪದ್ಯದಂತೆ; ಗದ್ಯದಂತೆ ಹೇಳಬೇಕೆಂದರೆ ಗದ್ಯದಂತೆ ಹೇಗೆ ಬೇಕಿದ್ದರೂ ಬಳಸಿಕೊಳ್ಳಬಹುದು ಅದಕ್ಕಾಗಿ ತೀರ ಪದ್ಯದ ಧಾಟಿಯನ್ನು ಕೈಬಿಟ್ಟು 'ಗಪದ್ಯ'ದ ಧಾಟಿಯನ್ನು ಬಳಸಿದ್ದೇನೆ ಕುತೂಹಲಕ್ಕಾಗಿ ಮೂಲದಲ್ಲಿಲ್ಲದ ಒಂದು ಬದಲಾವಣೆಯನ್ನು ಶಕಾರನ ಮಾತುಗಾರಿಕೆಯಲ್ಲಿ ಮಾಡಿಕೊಂಡಿದ್ದೇನೆ ಅವನ ಹೆಸರಿನ ಹಿನ್ನೆಲೆಯಲ್ಲಿ ಈ ಬದಲಾವಣೆ ಬಂದಿದೆ ಅವನು ಸಕಾರ ಹೇಳುವಲ್ಲಿ ಎಲ್ಲ ಕಡೆ ಶಕಾರ ಬಳಸುತ್ತಾನೆ ವಸಂತಸೇನೆ ಅವನ ಬಾಯಲ್ಲಿ ವಶಂತಶೇನೆ ಆಗುತ್ತಾಳೆ ಮೂಲದಲ್ಲೇನೂ ಇಂಥ ಪ್ರಯೋಗವಿಲ್ಲ ಇದೊಂದು ಕುತೂಹಲದ ಬದಲಾವಣೆ – ಅಷ್ಟೆ

ನಾನು ಹೇಳಬೇಕಾದ್ದು ಇಷ್ಟು ಉಳಿದದ್ದು ನಿಮ್ಮದು

ಅಂಬಲಪಾಡಿ **– ಬನ್ನಂಜೆ ಗೋವಿಂದಾಚಾರ್ಯ**

# ರೂಪಕದ ಪಾತ್ರಗಳು

| | | | |
|---|---|---|---|
| ೧ | ಸೂತ್ರಧಾರ | : | ನಾಟಕದ ನಿರ್ವಾಹಕ |
| ೨ | ನಟಿ | : | ಸೂತ್ರಧಾರನ ಹೆಂಡತಿ |
| ೩ | ಚಾರುದತ್ತ | : | ಕಥಾನಾಯಕ ಮೊದಲು ಶ್ರೀಮಂತ ವ್ಯಾಪಾರಿಯಾಗಿದ್ದ ಬ್ರಾಹ್ಮಣ ಔದಾರ್ಯದಿಂದ ಎಲ್ಲವನ್ನೂ ಕಳಕೊಂಡ ಸಜ್ಜನ ವಸಂತಸೇನೆಯ ಪ್ರೇಮಿ ಸುಮಾರು ೪೦ ರ ಹರಯ |
| ೪ | ವಸಂತಸೇನೆ | : | ಕಥಾನಾಯಿಕೆ ಉಜ್ಜಯಿನಿಯ ಶ್ರೀಮಂತ ವೇಶ್ಯೆ ಸುಸಂಸ್ಕೃತ ಮಹಿಳೆ ಚಾರುದತ್ತನ ಗುಣಕ್ಕೆ ಮರುಳಾದ ಪ್ರೇಯಸಿ ಸುಮಾರು ೨೫ರ ಹರಯ |
| ೫ | ಶಕಾರ ಸಂಸ್ಥಾನಕ | : | ರಾಜನ ಭಾವನಂಟ ಅಸಂಸ್ಕೃತ ಮನುಷ್ಯ ಇಲ್ಲಿ ಖಳನಾಯಕ ಕೂಡ |
| ೬ | ಮೈತ್ರೇಯ | : | ವಿದೂಷಕ ಚಾರುದತ್ತನ ಬ್ರಾಹ್ಮಣ ಗೆಳೆಯ |
| ೭ | ಧೂತಾದೇವಿ | : | ಚಾರುದತ್ತನ ಧರ್ಮಪತ್ನಿ |
| ೮ | ರೋಹಸೇನ | : | ಚಾರುದತ್ತ–ಧೂತೆಯರ ಮಗ ಸುಮಾರು ೫ ರ ಹರಯ |
| ೯ | ಚೇಟಿ ರದನಿಕೆ | : | ಚಾರುದತ್ತನ ಪರಿಚಾರಿಕೆ |
| ೧೦ | ಚೇಟಿ ಮದನಿಕೆ | : | ವಸಂತಸೇನೆಯ ಪರಿಚಾರಿಕೆ |
| ೧೧ | ಚೇಟಿ | : | ವಸಂತಸೇನೆಯ ಇನ್ನೊಬ್ಬ ಪರಿಚಾರಿಕೆ |
| ೧೨ | ಕೊಡೆ ಹಿಡಿಯುವ ಹುಡುಗಿ | : | ವಸಂತಸೇನೆಯ ಮತ್ತೊಬ್ಬ ಪರಿಚಾರಿಕೆ |
| ೧೩ | ಚೇಟ ವರ್ಧಮಾನಕ | : | ಚಾರುದತ್ತನ ಪರಿಚಾರಕ, ಗಾಡಿಯ ಚಾಲಕ |
| ೧೪ | ಚೇಟ | : | ವಸಂತಸೇನೆಯ ಪರಿಚಾರಕ |
| ೧೫ | ಚೇಟ ಸ್ಥಾವರಕ | : | ಶಕಾರನ ಪರಿಚಾರಕ, ಗಾಡಿಯ ಚಾಲಕ |
| ೧೬ | ವಿಟ–೧ | : | ವಸಂತಸೇನೆಯ ಪರಿವಾರದ ಕಲಾವಿದ; ಒಂದು ಬಗೆಯ ದಲ್ಲಾಳಿ |
| ೧೭ | ವಿಟ–೨ | : | ಶಕಾರನ ಪರಿವಾರದ ಕಲಾವಿದ; ದಲ್ಲಾಳಿ |
| ೧೮ | ಬಂಧುಲರು | : | ವಸಂತಸೇನೆಯ ಪರಿವಾರದ ಉಂಡಾಡಿಗಳು |

| | | | |
|---|---|---|---|
| ೧೯ | ಮುದುಕಿ | : | ವಸಂತಸೇನೆಯ ತಾಯಿ |
| ೨೦ | ಶರ್ವಿಲಕ | : | ಬ್ರಾಹ್ಮಣರ ಹುಡುಗ ಮದನಿಕೆಯ ಪ್ರಿಯಕರ ರಾಜ್ಯದ ಬಂಡಾಯದಲ್ಲಿ ಪ್ರಮುಖ ಪಾತ್ರಧಾರಿ ಪರಿಸ್ಥಿತಿಯ ಒತ್ತಡದಿಂದ ಕಳ್ಳತನಕ್ಕೆ ಕೈಹಾಕಿದವ |
| ೨೧ | ಕರ್ಣಪೂರಕ | : | ವಸಂತಸೇನೆಯ ಪರಿವಾರದ ಒಬ್ಬ ಸಾಹಸಿ ಹುಡುಗ |
| ೨೨ | ಆರ್ಯಕ | : | ಗೊಲ್ಲರ ಹುಡುಗ ದಂಗೆಯಲ್ಲಿ ರಾಜ ಪಾಲಕನನ್ನು ಕೊಂದು ರಾಜನಾದವ |
| ೨೩ | ವೀರಕ | : | ಸೇನಾಪತಿ, ನಗರ ರಕ್ಷಕ ನಾಪಿತ ಸಮಾಜದಿಂದ ಎತ್ತರಕ್ಕೇರಿ ಬಂದವ |
| ೨೪ | ಚಂದನಕ | : | ಕಾವಲು ಪಡೆಯ ಮುಖಂಡ ಸಮಗಾರ ಸಮಾಜದಿಂದ ಮೇಲೇರಿ ಬಂದವ |
| ೨೫ | ಸಂವಾಹಕ–ಭಿಕ್ಷು | : | ಉದ್ಯೋಗವನ್ನರಸುತ್ತ ಉಜ್ಜಯಿನಿಗೆ ಬಂದ ವಲಸಿಗ ಮೊದಲು ಚಾರುದತ್ತನ ಕಾಲೊತ್ತುವ ಕೆಲಸದವ ಚಾರುದತ್ತ ದರಿದ್ರನಾದಾಗ ಜೂಜಿಗಿಳಿದು ಸರ್ವಸ್ವ ಕಳೆದುಕೊಂಡು ಬೌದ್ಧಭಿಕ್ಷುವಾದವನು |
| ೨೬ | ಮಾಥುರ | : | ಜೂಜುಕಟ್ಟೆಯ ಯಜಮಾನ |
| ೨೭ | ಜೂಜುಕೋರ | : | ಸಂವಾಹಕನನ್ನು ಜೂಜಿನಲ್ಲಿ ಸೋಲಿಸಿದವನು |
| ೨೮ | ದರ್ದುರಕ | : | ಇನ್ನೊಬ್ಬ ಜೂಜುಕೋರ ಸಂವಾಹಕನನ್ನು ಜೂಜಿನ ಜಿದ್ದಿನಿಂದ ರಕ್ಷಿಸಿದವ |
| ೨೯ | ನ್ಯಾಯಾಧೀಶ | : | ಉಜ್ಜಯಿನಿಯ ನ್ಯಾಯಾಲಯದ ಮುಖ್ಯಸ್ಥ |
| ೩೦ | ಶ್ರೇಷ್ಠಿ | :} | ನ್ಯಾಯವಿಚಾರಣೆಯ ಸಹಾಯಕರು ವಿಚಾರಣೆಯನ್ನು ಲಿಪಿಬದ್ಧಗೊಳಿಸುವವರು |
| ೩೧ | ಕಾಯಸ್ಥ | | |
| ೩೨ | ಆಹೀಂತ | :} | ನ್ಯಾಯಾಲಯದ ಮರಣದಂಡನೆಯನ್ನು ಜ್ಯಾರಿಗೊಳಿಸುವ ಕೊಲೆಗಡುಕರು |
| ೩೩ | ಗೋಹ | | |

~ ~ ~

## ಅಂಕ : ಒಂದು

# ಒಡವೆಯ ಒತ್ತೆ

ಮೊಣಗಂಟಿನಲ್ಲಿ ಹಾವುಗಳು ಸುತ್ತಿರಲು ಇಮ್ಮಡಿಯ ಬಿಗಿತದಿಂದ
ಎಡತೊಡೆಯ ಮೇಲೆ ಕಾಲ್ಮಡಚಿ ಕುಳಿತ ವೀರಾಸನದ ಬಂಧ
ಬಿಗಿಹಿಡಿದು ಉಸಿರು ಕುಂಭಕದಿ ನಿಲಿಸಿ ಒಳಬಗೆಯ ಶೂನ್ಯಗೊಳಿಸಿ
ಎಲ್ಲ ಇಂದ್ರಿಯಗಳೋಟವನ್ನು ಹೊರನೋಟವನ್ನು ತಡೆದು
ಅರಿವನಳಿಸಿ, ನಿಸ್ತಬ್ಧಗೊಳಿಸಿ ನಿರ್ಭಾವದಲ್ಲಿ ನಿಲಿಸಿ
ಕಂಡುಕೊಂಡು ನಿಜದೃಷ್ಟಿಯಿಂದ ತನ್ನನ್ನು ತಾನೆ ಪಡೆದು
ಜಗದ ಮಾಯೆ ಬಯಲಾಗೆ ಅಲ್ಲಿ ಆ ಬಟ್ಟಬಯಲಿನಲ್ಲಿ
ಶೂನ್ಯ ತುಂಬಿ ಬಗೆ ತುಂಬಿನಿಂತ ಬ್ರಹ್ಮಸ್ವರೂಪದಲ್ಲಿ
ತನ್ನಲ್ಲಿ ತಾನೆ ಮೈಮರೆತ ಶಿವನ ಆ ತಪಃಸಮಾಧಿ ದೀಕ್ಷೆ
ಪಾಲಿಸಲಿ ನಿಮಗೆ ಪಾಲಿಸಲಿ ನಮಗೆ ಎಲ್ಲರಿಗು ಶುಭದ ರಕ್ಷೆ
॥ ೧ ॥

ಅಲ್ಲದೆ–

ನೀಲಕಂಠನ ಕೊರಳು ಕಪ್ಪುಮೋಡದ ಕಂತೆ
ಪಾರ್ವತಿಯ ತೋಳ್‌ಬಳ್ಳಿ ಆ ಮೋಡದೆಡೆಯಲ್ಲಿ
ಮಿಂಚೊಂದು ಮಿಂಚಿದಂತೆ
ಅಂಥ ಆ ಚೆಲುಗೊರಳು ನಿಮ್ಮನ್ನು ಕಾಪಾಡಲಿ ॥ ೨ ॥

(ನಾಂದಿಯ ಕೊನೆಯಲ್ಲಿ)

**ಸೂತ್ರಧಾರ** · ಜನದ ನಿರೀಕ್ಷೆಗೆ ತಣ್ಣೀರೆರೆಚುವ ಈ ಕೆಲಸ ಸಾಕು ನಾನು ತಮ್ಮಲ್ಲಿ ಪ್ರಣಾಮಪೂರ್ವಕವಾಗಿ ವಿಜ್ಞಾಪಿಸಿಕೊಳ್ಳುತ್ತಿದ್ದೇನೆ ನಾವು ಇದೀಗ **“ಆವೆಯ ಮಣ್ಣಿನ ಆಟದ ಬಂಡಿ”** ಎಂಬ ಪ್ರಕರಣವನ್ನು ಆಡುವವರಿದ್ದೇವೆ ಇದನ್ನು ಬರೆದ ಕವಿ ಗೊತ್ತಾ ನಿಮಗೆ?

ಆನೆಯಂತೆ ನಡೆವ ಮಾಟ
ಚಕೋರದಂಥ ಕಣ್ಣ ನೋಟ
ಮೋರೆಯೋ ಹುಣ್ಣಿಮೆಯ ಚಂದ್ರನೇ ತೇಟ
ದ್ವಿಜರಿಗೆಲ್ಲ ಹಿರಿಯನವನು
ಲೋಕಮಹಾವೀರ ತಾನು
‘ಶೂದ್ರಕ’ ಎಂದು ಆ ಕವಿಯ ಹೆಸರು

ಅಲ್ಲದೆ-

ಋಗ್ವೇದ ಬಲ್ಲವನು, ಸಾಮಗಾನದಿ ನಿಪುಣ
ಲಲಿತಕಲೆಗಳ ತವರು, ಗಣಿತದಲ್ಲೂ ಜಾಣ
ಆನೆ ಪಳಗಿಸಲಿಕ್ಕೊ ಇವನು ಪ್ರವೀಣ
ಶಿವನನುಗ್ರಹದಿಂದ ಮಾಯೆ-ಕತ್ತಲು ಎಂಬ
ಮುಸುಕು-ಪರೆ ತೆರೆದಿರುವ ಕಣ್ಣು ಪಡೆದವನು
ಪರಮ ವೈಭವದಿಂದ ಅಶ್ವಮೇಧವ ಮಾಡಿ
ಮಗನನ್ನು ಸಾಮ್ರಾಜ್ಯಪಟ್ಟದಲಿ ಕುಳ್ಳಿರಿಸಿ
ಕಂಡು ನಲಿದವನು
ನೂರು ವರ್ಷದ ಮೇಲೆ ಮತ್ತೆಯೂ ಹತ್ತು ದಿನ
ಬದುಕಿ ಪೂರ್ಣಾಯುಷ್ಯ
ಕೊನೆಗಾಲದಲಿ ಬೆಂಕಿಯಲಿ ತನ್ನ ಮೈಚೆಲ್ಲಿ
ಕೊಂಡವನು ಈ ಶೂದ್ರಕ || ೪ ||

ಅಲ್ಲದೆ-

ಅವನಿಗೊ ಯುದ್ಧದ ಗೀಳು
ಆದರು ಎಚ್ಚರ ತಪ್ಪದ ಬಾಳು
ವೇದ ಬಲ್ಲವರಿಗವ ಮುಂದಾಳು
ಮಹಾತಪಸ್ವಿಯೂ ತಾನಾಗಿದ್ದ
ಶತ್ರುಸೇನೆಯಾನೆಗಳನು
ಎದುರಿಸಿ ತೋಳ್‌ಬಲದಿಂದಲೆ
ಹೋರುವುದೆಂದರೆ ಅವನಿಗೆ
ಮೋಜಿನೊಂದು ನಾಟಕ
ಇಂಥ ಒಬ್ಬ ರಾಜನಿದ್ದಃ
ಅವನ ಹೆಸರು ಶೂದ್ರಕ || ೫ ||

ಅವನ ಈ ಕೃತಿಯಲ್ಲಿ-

ಅವಂತಿಪುರದಲ್ಲಿ ಬ್ರಾಹ್ಮಣ ವ್ಯಾಪಾರಿ
ಆದರೂ ಕಡುಬಡವ
ಹರೆಯ ತುಂಬಿದ ಜೀವ ಚಾರುದತ್ತ
ಮತ್ತವನ ಗುಣಗಳಿಗೆ ಮನಸೋತ ವೇಶ್ಯೆ
ಋತುವಸಂತದ ತೆರದಿ
ಮೈಯರಳಿ ನಿಂತಿಹ ವಸಂತಸೇನೆ || ೬ ||

ಅವರ ಸುರತೋತ್ಸವದ ಬಿತ್ತರವಿದು
ಲೋಕನೀತಿಯ ರೀತಿಗಳು ಭಾತಿಗಳು
ವ್ಯವಹಾರದಲಿ ಕಾಂಬ ಕಪಟನಾಟಕಗಳು
ದುರ್ಜನರ ಹೂಟಗಳು
ದುರ್ವಿಧಿಯ ಮಾಟಗಳು
ಈ ಎಲ್ಲವನು ಬೆಸೆದು ನಿರ್ಮಿಸಿದನಿದನು
ಶೂದ್ರಕ ಮಹಾರಾಜ ॥ ೭ ॥

(ನಡೆದಾಡಿ, ನೋಡಿ) ಅರೆ, ನಮ್ಮ ಈ ಸಂಗೀತಶಾಲೆ ನಿರ್ಜನವಾಗಿದೆ ಹಾಡುಗಾರರ ಬಳಗ ಎಲ್ಲಿ ಹೋಯಿತು? (ಆಲೋಚಿಸಿ) ಹ್ಞಾ, ತಿಳಿಯಿತು:

ಮಕ್ಕಳಿರದವನ ಮನೆ ಬರಿದು
ಚೆಲುಗೆಳೆಯರಿರದವನ ಬಾಳೆ ಬರಿದು
ಮೂರ್ಖ ಹೋದೆಡೆಯೆಲ್ಲ ದಿಕ್ಕುಗಳೆ ಬರಿದು
ಬಡವನ ಪಾಲಿಗಂತು ಎಲ್ಲೆಡೆಯು ಎಲ್ಲವೂ ಬರಿದು ॥ ೮ ॥

ನನ್ನ ಹಾಡುಗಾರಿಕೆಯಂತು ಮುಗಿಯಿತು ಬಹಳ ಹೊತ್ತು ನಡೆದ ಈ ಹಾಡುಗಾರಿಕೆಯಿಂದಾಗಿ ಬೇಸಗೆಯ ಉರಿಬಿಸಿಲಿಗೆ ಬೆಂದ ತಾವರೆಯ ಬೀಜದಂತೆ ನನ್ನ ಕಣ್ಣುಗಳು ಹಸಿವಿನಿಂದ ಕಟಕಟಿಸುತ್ತಿವೆ; ಕಣ್ಣಬೊಂಬೆಗಳು ನಡುಗುತ್ತಿವೆ ಯಾವುದಕ್ಕೂ ಮನೆಯಾಕೆಯನ್ನು ಕರೆದು ಕೇಳುತ್ತೇನೆ: ಬೆಳಗಿನ ಉಪಾಹಾರ ಏನಾದರೂ ಇದೆಯೇ–ಎಂದು ಇದೋ ನಾನೀಗ, ಕೆಲಸದ ನಿಮಿತ್ತ, ಈ ಪ್ರಯೋಗದ ನಿಮಿತ್ತ ಆಡುಮಾತಿಗೆ ಬರುತ್ತಿದ್ದೇನೆ:

ಅಯ್ಯಯ್ಯೋ! ಸಂಗೀತ ಹಾಡಿಹಾಡಿ ಒಣಗಿದ ತಾವರೆ ಬೀಜದ್ ಹಾಗೆ ಹಸಿವ್ನಿಂದ ನನ್ನ ಮೈಕೈ ಬಾಡ್ತಾ ಇದೆ ಮನೇ ಕಡೆ ಹೋಗಿ ನೋಡ್ಬೇಕು: ಹೊಟ್ಟೆಗ್ ಹಾಕ್ಕೊಳ್ಳೋಕೆ ಮನೆಯಾಕೆ ಏನಾದ್ರೂ ಮಾಡಿದ್ದಾಳೋ ಹೇಗೇಂತ (ನಡೆದಾಡಿ, ನೋಡಿ) ಇದು ನಮ್ಮನೆ ಒಳಗ್ ಹೋಗ್ತೇನೆ (ಹೊಕ್ಕು, ಇಣಕಿ ನೋಡಿ) ಆಶ್ಚರ್ಯ! ಮನೆಯಲ್ಲಿ ಬೇರೆಯೇ ಏನೋ ಕಾರ್ಬಾರು ನಡ್ದಿದೆ ಬೀದೀಲ್ ಅಕ್ಕಿ ತೊಳ್ದ ನೀರ್ ಹರ್ದಿದೆ ನೆಲದ್ ಮೇಲೆ ಕಬ್ಬಿಣದ ಪಾತ್ರೆ ಎಳ್ದು ಕರ್‍ರಗೆ ಗೆರೆಬಿದ್ದು, ಹಣೆಬೊಟ್ಟ್ ಹಚ್ಚಿದ್ ಹೆಣ್ಣಿನ್ ಮೋರೆ ಹಾಗೆ ಕಾಣಿಸ್ತಿದೆ ಅಡಿಗೇ ಕಂಪು ಕಮ್ಮಗೆ ಮೂಗಿಗ್ ಹೊಡ್ದು ನನ್ನ ಹಸಿವು ಜೋರಾಗಿ ಕಾಡ್ತಾ ಇದೆ ಏನು ಪೂರ್ವಿಕರು ಹೂತಿಟ್ಟ್ ಕೊಪ್ಪರಿಗೆಯೇನಾದರೂ ಸಿಕ್ಕಿರ್ಬಹುದೇ? ಅಥವ, ನನಗೇ ಹಸಿವ್ನಿಂದಾಗಿ ಲೋಕವೆಲ್ಲ ಅನ್ನದಿಂದ್ ತುಂಬಿದ ಹಾಗೆ ಕಾಣ್ತಿದೆಯೆ ಹೇಗೆ? ಇಲ್ಲ, ನಮ್ಮನೇಲಿ ಬೆಳಗಿನ್ ಫರಾಳದ್ ಸುದ್ದಿ ಇಲ್ಲ ಈ ಹಾಳು ಹಸಿವಂತು ಪ್ರಾಣ ಹಿಂಡ್ತಾ ಇದೆ ಇಲ್ಲಂತು ಎಲ್ಲ ಹೊಸ ಕಾರ್ಬಾರು ನಡ್ದಿದೆ: ಒಬ್ಳು ಬಣ್ಣ ಅರೀತಿದ್ದಾಳೆ ಇನ್ನೊಬ್ಳು ಹೂ ಕಟ್ತಾ ಇದ್ದಾಳೆ

(ಯೋಚಿಸಿ) ಇದೇನಿರ್ಬಹುದು? ಇರ್ಲಿ, ಮನೆಯಾಕೆಯನ್ನು ಕರ್ದು ನಿಜ ತಿಳಿಯೋಣ (ಪರದೆಯ ಕಡೆ ನೋಡಿ) ಯಜಮಾನಿ, ಇತ್ತ ಬಾ

**ನಟಿ** . (ಪ್ರವೇಶಿಸಿ) ಅಯ್ಯ, ಇದೋ ಬಂದೆ

**ಸೂತ್ರಧಾರ** ಯಜಮಾನಿ, ಸಂಗೀತ ಹಾಡಿಹಾಡಿ ಒಣಗಿದ ತಾವರೆ ಬೀಜದ್ ಹಾಗೆ ಹಸಿವ್ನಿಂದ ನನ್ನ ಮೈಕೈ ಬಾಡ್ತಾ ಇದೆ ಹೊಟ್ಟೆಗ್ ಹಾಕ್ಕೊಳ್ಳೋಕೆ ಮನೇಲ್ ಏನಾದ್ರೂ ಉಂಟಾ ಹೇಗೆ?

**ನಟಿ** ಅಯ್ಯ, ಎಲ್ಲ ಉಂಟು

**ಸೂತ್ರಧಾರ:** ಏನೇನೆಲ್ಲ ಉಂಟು?

**ನಟಿ** · ಬೆಲ್ಲದ್ ಅಕ್ಕೀಪಾಯ್ಸ, ತುಪ್ಪ, ಮೊಸ್ರು, ಅನ್ನ– ನೀವು ತಿಂದು ಬಾಯ್ ಚಪ್ಪರ್ಸಬೇಕಾದ್ದು ಎಲ್ಲಾ ಇದೆ ನಿಮ್ಮ ದೇವ್ರು ನಿಮಗ್ ಹಾಗ್ ಹರಸ್ಲಿ

**ಸೂತ್ರಧಾರ** · ಯಜಮಾನಿ, ಏನು ನಮ್ಮನೇಲ್ ಇದೆಲ್ಲಾ ಇದೆಯೇನು? ಅಥವ, ಹಾಸ್ಯ ಮಾಡ್ತಿದೀಯಾ ಹೇಗೆ?

**ನಟಿ** (ಸ್ವಗತ) ಸದ್ಯಕ್ಕಂತು ಪರಿಹಾಸ್ಯ ಮಾಡ್ತೀನಿ (ಪ್ರಕಾಶ) ಅಯ್ಯ, ಅಂಗಡೀಲಿದೇಂದೆ

**ಸೂತ್ರಧಾರ** . (ಕೋಪದಿಂದ) ಓಹ್, ಕೆಟ್‌ಹೆಣ್ಣೆ, ನಿನ್ ಆಸೆಗಳೂ ಹೀಗೆ ಕಮರಿ ಹೋಗ್ಲಿ ಹಾಳಾಗ್ ಹೋಗು ಏತದ್ ತುದಿಗೆ ಕಟ್ಟಿದ್ ಕಲ್ನಂತೆ ನನ್ನನ್ನು ಆಸೆ ಹುಟ್ಸಿ ಮೇಲಕ್ಕೆತ್ತಿ ಕೆಳಕ್ ಹಾಕಿಬಿಟ್ಯಲ್ಲ?

**ನಟಿ** : ಕ್ಷಮ್ಸಿ, ಕ್ಷಮ್ಸಿ ಅಯ್ಯ ಬರೇ ಹಾಸ್ಯಕ್ಕಾಗಿ ಹೇಳ್ದೆ ಅಷ್ಟೆ

**ಸೂತ್ರಧಾರ** ಮತ್ತೇನಿದು, ಏನೋ ಹೊಸ ಕಾರ್ಬಾರು ನಡ್ದಿದೆ? ಒಬ್ಳು ಬಣ್ಣ ಅರೀತಿದಾಳೆ ಇನ್ನೊಬ್ಳು ಹೂ ಕಟ್ತಿದಾಳೆ ಬಣ್ಣ ಬಣ್ಣದ ಹೂವುಗಳಿಂದ ನೆಲದ ಮೇಲೆ ರಂಗೋಲೆ ಬರ್ದಿದೆ!

**ನಟಿ** : ಇವತ್ತು ಉಪವಾಸದೀಕ್ಷೆ ಹಿಡ್ದಿದ್ದೇನೆ

**ಸೂತ್ರಧಾರ** . ಏನ್ ಹೆಸ್ರು ಈ ಉಪವಾಸವ್ರತಕ್ಕೆ?

**ನಟಿ** : ಒಳ್ಳೇ ಗಂಡನ್ನ ಪಡ್‌ಯೋ ಉಪವಾಸಂತ

**ಸೂತ್ರಧಾರ** : ಯಜಮಾನಿ, ಇಲ್ಲೋ, ಅಲ್ಲ ಪರಲೋಕದಲ್ಲೊ?

**ನಟಿ** : ಅಯ್ಯ, ಪರಲೋಕದಲ್ಲಿ

**ಸೂತ್ರಧಾರ** : (ಕೋಪದಿಂದ) ನೋಡಿ ಸ್ವಾಮೀ, ನೋಡಿ ನಾನು ದುಡ್ದು ತಂದ ಅಕ್ಕಿ ದಾನಮಾಡಿ ಪರಲೋಕದ ಗಂಡನ್ನ ಹುಡುಕ್ಸಿಕ್ಕೆ ಹೊರ್ಟಿದ್ದಾಳೆ!

**ನಟಿ** : ಅಯ್ಯ, ಸಮಾಧಾನ, ಸಮಾಧಾನ ಬರೋ ಜನ್ಮದಲ್ಲೂ ನೀವೇ ಗಂಡ ಆಗ್‌ಬೇಕೂಂತ

**ಸೂತ್ರಧಾರ** ಈ ಉಪವಾಸದ್ ಕಥೆಯನ್ ನಿನ್ನ ಕಿವಿಗ್ ಹಾಕಿದವರು ಯಾರು?

**ನಟಿ** ಅಯ್ಯನ ಗೆಳೆಯ ಚೂರ್ಣವೃದ್ಧ

**ಸೂತ್ರಧಾರ** (ಕೋಪದಿಂದ) ಓಹ್, ಚೂರ್ಣವೃದ್ಧ ಸೂಳೇಮಗನೆ, ಕಂಪು ಬಳಿದ ಪ್ರಾಯದ ಹುಡುಗಿಯ ತಲೆ ಬೋಳಿಸ್ದ ಹಾಗೆ ಕೋಪಗೊಂಡ ನಮ್ಮ ರಾಜ ಪಾಲಕ ನಿನ್ ತಲೆ ಸವರ್ಬೇಕು, ನಾನದನ್ನು ನೋಡ್ಬೇಕೂಂತ ಆಸೆ ಆಗ್ತಾ ಇದೆ

**ನಟಿ** ಅಯ್ಯ, ಸಮಾಧಾನ ಜನ್ಮಜನ್ಮಾಂತರದಲ್ಲು ನೀವೇ ಗಂಡನಾಗಬೇಕು ಎಂದಲ್ಲವೆ ಈ ಉಪವಾಸ? (ಎಂದು ಕಾಲಿಗೆ ಬೀಳುತ್ತಾಳೆ )

**ಸೂತ್ರಧಾರ** · ಯಜಮಾನಿ, ಏಳು ಏಳು ಈ ಉಪವಾಸದಲ್ಲಿ ಏನೆಲ್ಲ ಆಗ್ ಬೇಕು ಹೇಳು

**ನಟಿ** · ನಮ್ಮಂಥವರಿಗೆ ಹೇಳಿಸಿದ ಒಬ್ಬ ಬ್ರಾಹ್ಮಣನಿಗೆ ಆಮಂತ್ರಣ ನೀಡ್‌ಬೇಕು

**ಸೂತ್ರಧಾರ** . ಹಾಗಾದರೆ ನೀನ್ ಹೋಗು ನಾನೂ ನಮ್ಗೆ ಹೇಳ್ಸಿದಂಥ ಬ್ರಾಹ್ಮಣನನ್ನು ಹುಡುಕಿ ಹೇಳಿಕೆ ಮಾಡ್ತೇನೆ

**ನಟಿ** · ಅಯ್ಯನ ಅಪ್ಪಣೆ (ಎಂದು ಹೋಗುತ್ತಾಳೆ )

**ಸೂತ್ರಧಾರ** · (ಸುತ್ತಾಡಿ) ಆಶ್ಚರ್ಯ! ಇಷ್ಟು ಸಂಪನ್ನವಾದ ಉಜ್ಜಯಿನಿಯಲ್ಲಿ ನಮ್ಮ ಅಂತಸ್ತಿಗೆ ಯೋಗ್ಯನಾದ ಒಬ್ಬ ಬ್ರಾಹ್ಮಣನನ್ನು ಹುಡುಕೋ ಹಾಗಾಯಿತಲ್ಲ (ದಿಟ್ಟಿಸಿ) ಇವ, ಚಾರುದತ್ತನ ಗೆಳೆಯ ಮೈತ್ರೇಯ. ಈ ಕಡೆಗೇ ಬರ್ತ್ತಿದಾನೆ ಇರಲಿ ಅವನನ್ನು ಕೇಳಿ ನೋಡ್ತೇನೆ ಆರ್ಯ ಮೈತ್ರೇಯ, ಇವತ್ತು ನಮ್ಮನೇಲಿ ಊಟಕ್ಕೆ ದಯಮಾಡಿಸ್‌ಬೇಕು

(ಪರದೆಯ ಮರೆಯಲ್ಲಿ)

ಓಯ್, ಬೇರೆ ಯಾರಾದರೂ ಬ್ರಾಹ್ಮಣನ್ನ ಕರಿಯಯ್ಯ, ನನಗೆ ಬೇರೆ ಕೆಲಸ ಇದೆ

**ಸೂತ್ರಧಾರ**. ಅಯ್ಯ, ಸೊಗಸಾದ ಅಡ್‌ಗೆ ಸಿದ್ಧವಾಗಿದೆ ನೀನೊಬ್ನೇ ಬ್ರಾಹ್ಮಣ ಬೇರೆ ಯಾರೂ ಇಲ್ಲ ಅಷ್ಟೆ ಅಲ್ಲ, ದಕ್ಷಿಣೆ ಕೂಡ ಕೊಡ್ತೇನೆ ಸ್ವಾಮಿ

(ಪರದೆಯ ಮರೆಯಲ್ಲಿ)

ಓಯ್, ಮೊದಲೇ ಹೇಳಿದೆನಲ್ಲ ಆಗೋದಿಲ್ಲಾಂತ ಮತ್ತೆ ಯಾಕೆ ಸುಮ್ಮನೆ ಮತ್ತೂ ಮತ್ತೂ ಒತ್ತಾಯ ಮಾಡ್ತಾ ಇದೀಯಾ?

**ಸೂತ್ರಧಾರ** · ಇವ ನಿರಾಕರಿಸಿಬಿಟ್ಟ ಇರಲಿ ಬೇರೆ ಬ್ರಾಹ್ಮಣನ್ನ ಕರೀತೇನೆ (ಎಂದು ಹೊರಟು ಹೋಗುತ್ತಾನೆ )

–ಆಮುಖಮ್–

**ಮೈತ್ರೇಯ** (ಕೈಯಲ್ಲಿ ಶಾಲು ಹಿಡಿದುಕೊಂಡು ಪ್ರವೇಶಿಸಿ) ಬೇರೆ ಯಾರಾದರೂ ಬ್ರಾಹ್ಮಣನ್ನ ಕರಿಯಯ್ಯ ನನಗೆ ಬೇರೆ ಕೆಲಸ ಇದೆ ಅಥವಾ, ನಾನು, ಮೈತ್ರೇಯ ಕೂಡ ಇನ್ನೊಬ್ಬರ ಮನೆಯ ಊಟಕ್ಕೆ ದಾರಿ ಕಾಯಬೇಕಾಗಿ ಬಂತು ಹಾಯ್ ಅವಸ್ಥೆಯೆ, ಹತ್ತಿಯಂತೆ ಹಗುರಾಗಿಸಿಬಿಟ್ಟೆ ನನ್ನ ಬದುಕು ಹೇಗಿತ್ತು, ಹೇಗಾಯಿತು! ಪೂಜ್ಯನಾದ ಚಾರುದತ್ತನ ಸಿರಿವಂತಿಕೆಯ ದಿನಗಳಲ್ಲಿ ಜಾಗ್ರತೆಯಿಂದ ಸಿದ್ಧಗೊಳಿಸಿದ, ಮೂಗಿಗೆ ಕಂಪು ಬಡೆಯುವ ಮೋದಕಗಳನ್ನೆ ಹಗಲೂ ರಾತ್ರಿ ತಿನ್ನುತಿದ್ದವನು ಒಳಮನೆಯ ಚೌಕಿಯ ಬಾಗಿಲಲ್ಲೆ ಕೂತು ನೂರು ಬಗೆಯ ತಿಂಡಿಯ ತಟ್ಟೆಗಳನ್ನು ಚಿತ್ರಕಾರನಂತೆ ಕೈಯಾಡಿಸಿ ಬಿಟ್ಟವನು ಪೇಟೆಯ ಬೀದಿ ಚೌಕದ ಗೂಳಿಯಂತೆ ಬಾಯಿ ಚಪ್ಪರಿಸಿ ಮೆಲುಕು ಹಾಕುತ್ತ ಬದುಕಿದವನು ಅದೇ ನಾನು, ಈಗ, ಚಾರುದತ್ತನಿಗೆ ಬಡತನ ಬಂದದ್ದೇ ಬಂದದ್ದು, ಸಾಕುಪಾರಿವಾಳದಂತೆ ಹಗಲೆಲ್ಲ ಅಲ್ಲಿ ಇಲ್ಲಿ ಸುತ್ತಾಡಿ ಸಂಜೆ ಗೂಡು ಸೇರುತ್ತೇನೆ ಇದು, ಮಲ್ಲಿಗೆಯ ಪನ್ನೀರು ಚಿಮುಕಿಸಿದ ಈ ಮೇಲುದ, ಆರ್ಯಚಾರುದತ್ತನ ಪ್ರಿಯಮಿತ್ರ ಚೂರ್ಣವೃದ್ಧ ಕಳಿಸಿಕೊಟ್ಟದ್ದು ದೇವರ ಪೂಜೆ ಮುಗಿಸಿ ಬಂದ ಚಾರುದತ್ತನಿಗೆ ಇದನ್ನು ಕೊಡಬೇಕು ಎಂದಿದ್ದಾನೆ ಯಾವುದಕ್ಕೂ ಆರ್ಯಚಾರುದತ್ತ ಎಲ್ಲಿದ್ದಾನೆ ನೋಡುತ್ತೇನೆ (ನಡೆದಾಡಿ, ದಿಟ್ಟಿಸಿ) ಇದೋ, ಆರ್ಯಚಾರುದತ್ತ ದೇವರ ಪೂಜೆ ಮುಗಿಸಿ ಮನೆ ದೈವಗಳಿಗೆ ಬಲಿಯಿಕ್ಕುತ್ತ ಇತ್ತ ಕಡೆಯೆ ಬರುತಿದ್ದಾನೆ

(ಹಿಂದೆ ಹೇಳಿದಂತೆಯೆ ಚಾರುದತ್ತನ ಪ್ರವೇಶ; ಜತೆಗೆ ರದನಿಕೆ )

**ಚಾರುದತ್ತ** (ಆಕಾಶ ದಿಟ್ಟಿಸಿ ನಿರ್ವೇದದಿಂದ ನಿಟ್ಟುಸಿರುಗರೆದು)

ನನ್ನ ಮನೆಯಂಗಳದಿ ಚೆಲ್ಲಿದ್ದ ಬಲಿಯನ್ನು
ಹಂಸ–ಸಾರಸಗಳೇ ಹೆಕ್ಕಿ
ಕುಕ್ಕಿ ತಿನುತಿದ್ದವು
ಸಂದವೋ ಅಂಥ ದಿನ ಸಂದವು
ಈಗದೇ ಅಂಗಳದಿ ಕಳೆಹುಲ್ಲು ಬೆಳೆದಿದೆ
ನಾನು ಚೆಲ್ಲಿದ ಬೊಗಸೆ ಬಲಿಧಾನ್ಯವನ್ನು
ಕೆದಕುತಿದೆ ನೆಲದೆಡೆಯ ಹುಳು–ಹುಪ್ಪಟೆ! ॥ ೯ ॥

(ಎಂದು ಮೆಲ್ಲಮೆಲ್ಲನೆ ನಡೆದು ಬಂದು ಕುಳಿತುಕೊಳ್ಳುತ್ತಾನೆ )

**ವಿದೂಷಕ** · ಇದೋ ಇಲ್ಲೆ ಇದ್ದಾನೆ ಆರ್ಯಚಾರುದತ್ತ ಯಾವುದಕ್ಕು ಬಳಿಸಾರುತ್ತೇನೆ (ಬಳಿ ಬಂದು) ಮಿತ್ರನಿಗೆ ಸ್ವಸ್ತಿ, ಬಾಳು ಹಸನಾಗಲಿ

**ಚಾರುದತ್ತ** · ಅಯೇ! ಎಲ್ಲ ಕಾಲಕ್ಕೂ ಮಿತ್ರ–ಮೈತ್ರೇಯ ಬಂದಿದ್ದಾನೆ ಮಿತ್ರ, ಸ್ವಾಗತ ಕುಳಿತುಕೋ

**ವಿದೂಷಕ** ಅಪ್ಪಣೆ (ಕುಳಿತು) ಓ ಗೆಳೆಯ, ಇದೋ ನಿನ್ನ ಪ್ರಿಯಮಿತ್ರ ಚೂರ್ಣವೃದ್ಧ ಮಲ್ಲಿಗೆಯ ಪನ್ನೀರು ಚಿಮುಕಿಸಿದ ಈ ಮೇಲುದವನ್ನು ಕಳಿಸಿಕೊಟ್ಟಿದ್ದಾನೆ ದೇವರ ಪೂಜೆ ಮುಗಿಸಿ ಬಂದ ಚಾರುದತ್ತನಿಗೆ ಇದನ್ನು ಕೊಡು ಎಂದಿದ್ದಾನೆ (ಕೊಡುತ್ತಾನೆ )

**ಚಾರುದತ್ತ** · (ತೆಗೆದುಕೊಂಡು ಚಿಂತಾಕ್ರಾಂತನಾಗಿ ಸುಮ್ಮಗಿರುತ್ತಾನೆ )

**ವಿದೂಷಕ** ಏನಯ್ಯಾ ಇದು? ಏನು ಚಿಂತೆ?

**ಚಾರುದತ್ತ** ಗೆಳೆಯ,

ದುಃಖವುಂಡಾತನಿಗೆ ಮತ್ತೆ ಸುಖ ಬಂದಾಗ
ಕಗ್ಗತ್ತಲಿನ ಮನೆಗೆ ದೀಪವಿಟ್ಟಂತೆ
ಸುಖದಲ್ಲಿ ಬೆಳೆದವಗೆ ಮತ್ತೆ ಬಡತನ ಬಂತೊ
ಅವನೊಂದು ಮೈಹೊತ್ತು ತಿರುಗುವ ಹೆಣ ॥ ೧೦ ॥

**ವಿದೂಷಕ** ಗೆಳೆಯ, ಸಾವು–ಬಡತನ ಈ ಎರಡರಲ್ಲಿ ಯಾವುದು ನಿನ್ನ ಆಯ್ಕೆ?

**ಚಾರುದತ್ತ** ಗೆಳೆಯ,

ಸಾವು ಮತ್ತು ಬಡತನ– ಈ ಎರಡರಲ್ಲಿ
ಸಾವಾದರೂ ಬೇಕು ಬಡತನವು ಬೇಡ
ಸಾವು ತತ್‌ಕಾಲಕ್ಕೆ ದುಃಖ ಕೊಟ್ಟೀತು
ಆದರೀ ಬಡತನಽಽ ಮುಗಿಯದೊಂದು ಯಾತನೆ ॥ ೧೧ ॥

**ವಿದೂಷಕ** ಗೆಳೆಯ, ಸಾಕು ಈ ಸಂತಾಪ ನಂಬಿ ಬಂದವರಿಗೆ ನಿನ್ನ ಸಂಪತ್ತನ್ನೆಲ್ಲ ಹಂಚಿದವ ನೀನು ದೇವತೆಗಳು ಕಲೆಯನ್ನೆಲ್ಲ ಕುಡಿದುಳಿದ ಪಾಡ್ಯದ ಚಂದ್ರನಂತೆ ನಿನ್ನ ಈ ಸೋಲು ಕೂಡ ಸುಂದರವಾಗಿದೆ

**ಚಾರುದತ್ತ** ಗೆಳೆಯ, ನನಗೆ ದುಡ್ಡಿನ ಬಗೆಗೆ ದೈನ್ಯವಿಲ್ಲ ನೋಡು–

ನನ್ನ ಬಗೆಯನ್ನು ಸುಡುತಿರುವ ಮಾತು ಇದುಃ
ಇಲ್ಲಿ ದುಡ್ಡಿನ ಸೆಲೆಯೆ ಬತ್ತಿತೆಂದಾದಾಗ
ಅತಿಥಿಗಳು ಈ ಮನೆಗೆ ಬೆನ್ನು ತಿರುಗಿಸಿದರು!
ಹಣೆಯಲ್ಲಿ ಮದಜಲವು ಸುರಿಯುತಿದ್ದಷ್ಟು ದಿನ
ಮದ್ದಾನೆಯ ಮೋರೆಯ ತುಂಬ
ತುಂಬಿಗಳ ಝೇಂಕಾರ
ಮದವಾರಿ ಬತ್ತಿತೋ ಕೇಳುವವರಿಲ್ಲ! ॥ ೧೨ ॥

**ವಿದೂಷಕ** . ಗೆಳೆಯ, ಈ ಹಾಳು ದುಡ್ಡು ಸೂಳೆಮಗನ್ನು, ಹೊಟ್ಟೆಬಾಯಿ ಕಟ್ಟುವವರನ್ನು ಹುಡುಕಿಕೊಂಡು ಹೋಗಿ ಅಲ್ಲೇ ವಾಸ ಮಾಡುತ್ತೆ. ಧಾರಾಳಿಗಳನ್ನು ಕಂಡರೆ ಕಾಡಿನಲ್ಲಿ ನೆತ್ತರು ಹೀರುವ ಹುಳಕ್ಕೆ ಹೆದರಿಕೊಂಡ ಗೊಲ್ಲರಂತೆ ದೂರಕ್ಕೆ ಸರಿಯುತ್ತೆ

**ಚಾರುದತ್ತ** ಗೆಳೆಯ,
ಇದ್ದ ಸಂಪತ್ತೆಲ್ಲ ಕರಗಿ ಹೋಯಿತು ಎಂದು
ನಿಜವಾಗಿಯೂ ನನಗೆ ದುಃಖವಾಗಿಲ್ಲ
ಹಣೆಯಲ್ಲಿ ಬರೆದಂತೆ ಬಂದೀತು ಹೋದೀತು
ಆದರೆ
ಕೈಯಲ್ಲಿ ಕಾಸಿಲ್ಲ ಎಂದಾಗ ಗೆಳೆಯರೂ
ದೂರ ಸರಿವರು ನೋಡು ಇದು ನನ್ನ ಸುಡುತಿದೆ ॥ ೧೩ ॥

ಅಲ್ಲದೆ–

ಬಡತನದ ಬಾಳು
ನಾಚಿ ತಲೆತಗ್ಗಿಸುವ ಬಾಳು
ನಾಣ್‌ಗೇಡಿಗೋ ಇಲ್ಲ ತಲೆ ಎತ್ತಿ ನಿಲುವಂಥ ಶಕ್ತಿ
ಶಕ್ತಿಹೀನನಿಗೆ ಹೋದಲ್ಲಿ ಸೋಲು
ಸೋತು ಸುಣ್ಣಾದವಗೆ ಬಾಳೊಂದು ಬೇಡಾದ ಗೋಳು
ಬಾಳು ಗೋಳಾದವಗೆ ಎಲ್ಲೆಡೆಯು ಬವಣೆ
ಬವಣೆಗೊಳಗಾದವಗೆ ಬುದ್ಧಿ ಕೈಕೊಡುವುದು
ಬುದ್ಧಿಕೈಕೊಟ್ಟಿತೋ ಬಾಳು ಬರಿದೋ ಬರಿದು
ಅಮಮ! ಈ ಬಡತನವು
ಎಲ್ಲ ಆಪತ್ತುಗಳಿಗು ತವರು ॥ ೧೪ ॥

**ವಿದೂಷಕ :** ಗೆಳೆಯ, ಈ ಕ್ಷುದ್ರ ಸಂಪತ್ತಿನ ಬಗೆಗೆಯೆ ಯೋಚಿಸಿ ಏಕೆ ಸುಮ್ಮನೆ ತಲೆ ಕೆಡಿಸಿಕೊಳ್ತೀಯಾ?

**ಚಾರುದತ್ತ :** ಗೆಳೆಯ, ಮನುಷ್ಯನಿಗೆ ಈ ಬಡತನವೆಂದರೆ–
ಎಲ್ಲ ಚಿಂತೆಗೆ ತವರು, ಎಲ್ಲೆಡೆಯು ಅವಮಾನ
ಒಳಗೆ ಕಾಡುವ ಶತ್ರು, ಗೆಳೆಯರಿಗು ತಾತ್ಸಾರ
ಬಂಧು ಜನರೇ ಬಂದು ಬೆನ್ನು ತಿರುಗಿಸುವರು!
ಈ ಊರನೇ ತೊರೆದು
ಕಾಡಿಗಾದರೆ ಕಾಡಿಗೋಡಿ ಬಿಡಲೇ ಎಂದು
ಮನಸು ತವಕಿಸುವುದು
ಬಡತನದ ಸೋಲಿನಲಿ
ಕೈಹಿಡಿದ ಹೆಂಡತಿಯು ಮೂಗು ಮುರಿಯುವಳಯ್ಯ
ಬಗೆಯೊಳಗೆ ಉರಿವಂಥ ಬೇಗುದಿಯ ಬೆಂಕಿಯಿದು
ಪೂರ್ತಿ ಸುಡುವುದು ಇಲ್ಲ
ಒಳಗೊಳಗೆ ಬೇಯುತ್ತ ಸಾಯುತಿರಬೇಕು ॥ ೧೫ ॥

ಅದಿರಲಿ; ಗೆಳೆಯ, ನಾನು ಮನೆಯು ದೈವಗಳಿಗೆ ಬಲಿಯನ್ನಿತ್ತಾಯಿತು ಹೋಗು, ನೀನೂ ಬೀದಿಯ ಚೌಕದಲ್ಲಿ ಮಾತೃಗಣಗಳಿಗೆ ಬಲಿ ಚೆಲ್ಲಿ ಬಾ

**ವಿದೂಷಕ** ನಾನು ಹೋಗೋದಿಲ್ಲ

**ಚಾರುದತ್ತ .** ಏಕೆ?

**ವಿದೂಷಕ.** ಅಲ್ಲ, ಇಷ್ಟು ಕಾಲ ಪೂಜಿಸಿದರೂ, ದೇವತೆಗಳಿಗೆ ನಿನ್ನ ಮೇಲೇನೂ ದಯೆ ಬರಲಿಲ್ಲ ಮತ್ತೆ ದೇವರುಗಳ ಪೂಜೆ ಮಾಡಿ ಏನು ಉಪಯೋಗಾಂತ?

**ಚಾರುದತ್ತ** ಗೆಳೆಯ, ಹಾಗನ್ನಬೇಡ ಇದು ಸಂಸಾರಿಗಳ ಕರ್ತವ್ಯಕರ್ಮ

ದೇವತೆಗಳು ಒಲಿಯಲೆಂದು
ಜಪವ–ತಪವ ಮಾಡಬೇಕು
ಮನದಿ ನೆನೆದು ಹಾಡಬೇಕು
ನಿತ್ಯ ಬಲಿಯ ನೀಡಬೇಕು
ನಿಷ್ಠೆಯಿಂದ ನಡೆವವರಿಗೆ
ದೇವತೆಗಳು ಒಲಿಯುವರು
ಏಕೆ ಇದಕೆ ಸಂಶಯ? ॥ ೧೭ ॥

ಆದರಿಂದ ಹೋಗು, ಮಾತೃಗಣಗಳಿಗೆ ಬಲಿಯನ್ನಿಕ್ಕಿ ಬಾ

**ವಿದೂಷಕ** ಮಹಾರಾಯ, ನಾನು ಹೋಗೋದಿಲ್ಲಾಂದೆ ಬೇರೆ ಯಾರನ್ನಾದರೂ ಕಳಿಸು ಈ ಬ್ರಾಹ್ಮಣ ಮಾಡಿದ್ದೆಲ್ಲ ತಿರುವು–ಮುರುವು ಆಗ್ತಾ ಇದೆ; ಕನ್ನಡಿಯಲ್ಲಿ ಕಾಣುವ ಪ್ರತಿಬಿಂಬದಂತೆ: ಎಡದ್ದು ಬಲಕ್ಕೆ ಬಲದ್ದು ಎಡಕ್ಕೆ ಅಷ್ಟೇ ಅಲ್ಲ, ಈ ಸಂಜೆ ಹೊತ್ತು, ಇಲ್ಲಿ ರಾಜಮಾರ್ಗದಲ್ಲಿ, ಸೂಳೆಯರು, ವಿಟರು, ಚೇಟರು, ರಾಜನಿಗೆ ಬೇಕಾದಂಥ ದೊಡ್ಡ ಮನುಷ್ಯರು ಎಲ್ಲ ತಿರುಗಾಡ್ತಿರ್ತಾರೆ ನಾನು ಅವರ ಕಣ್ಣಿಗೆ ಬಿದ್ದೇಂದರೆ ಕಪ್ಪೆಗೆ ಹೊಂಚು ಹಾಕುತ್ತಿರುವ ಕಾಳಸರ್ಪದ ಎದುರು ಹೋದ ಇಲಿಯಂತೆ ನನ್ನ ಕಥೆ ಮುಗಿದೇ ಹೋಯಿತು . . ನೀನು ಇಲ್ಲಿ ಕೂತು ಏನು ಮಾಡ್ತೀಯಾ?

**ಚಾರುದತ್ತ .** ಇರಲಿ, ನೀನು ಇಲ್ಲೇ ಇರು ಹಾಗಾದರೆ ನಾನು ನನ್ನ ಜಪ ಮುಗಿಸ್ತೇನೆ

(ಪರದೆಯ ಮರೆಯಲ್ಲಿ)

ನಿಲ್ಲು, ವಸಂತಸೇನೆ, ನಿಲ್ಲು.

(ಪ್ರವೇಶ: ವಿಟ, ಶಕಾರ ಮತ್ತು ಚೇಟ ಬೆಂಬತ್ತಿರುವ ವಸಂತಸೇನೆ )

**ವಿಟ :** ವಸಂತಸೇನೆ, ನಿಲ್ಲು ನಿಲ್ಲು

ನಿನ್ನ ಮೆದುಮೈಯನ್ನು ಆಯಾಸಕೊಳಪಡಿಸಿ
ನಾಟ್ಯದಲಿ ಪಳಗಿರುವ ಕಾಲುಗಳ ಕೊಡಹುತ್ತ

ಓರೆ ನೋಟವ ಬೀರಿ
ಕಣ್ತುಂಬ ಗಾಬರಿಯ ಸೂಸುತ್ತ
ಬೇಡ ಬೆನ್ನಟ್ಟಿರುವ ಹೆಣ್‌ಜಿಂಕೆಯಂತೆ
ಏಕೆ ಓಡುವೆ ಹೆಣ್ಣೆ ಭಯಚಕಿತಳಾಗಿ? ॥ ೧೭ ॥

**ಶಕಾರ** ನಿಲ್ಲು, ವಶಂತಶೇನೆ, ನಿಲ್ಲು
ಏಕೆ ಹೋಗುವೆ? ಏಕೆ ಹಾರುವೆ?
ಏಕೆ ಓಡುವೆ ತಡವುತ?
ದಯೆದೋರು ಓ ಹುಡುಗಿ,
ನಾವೇನು ಕೊಲ್ಲುವೆವೆ? ನಿಲ್ಲು ಕೊಂಚ
ನನ್ನ ಈ ಬಡಹೃದಯ ಉರಿಯುತಿದೆ ಕಾಮನಿಂದಾಗಿ
ಕೆಂಡದ ಮುದ್ದೆಯಲಿ ಬಿದ್ದಿರುವ ಮಾಂಶದ ತುಂಡಿನಂತೆ
॥ ೧೮ ॥

**ಚೇಟ**. ಅವ್ವಾ, ನಿಲ್ಲಿ ನಿಲ್ಲಿ–
ನೀವು ಹೆದರಿಕೆಯಿಂದ
ದೂರ ಸರಿಯುತ್ತೀರಿ ನನ್ನ ಬಳಿಯಿಂದ
ಗರಿ ಹರವಿನಿಂತ ಬೇಸಗೆಯ ನವಿಲಿನಂದ
ನನ್ನ ದಣಿಯವರಂತು ಬೆನ್ನು ಹತ್ತಿದ್ದಾರೆ
ಕಾಡಿನಲಿ ಬೆಳೆದಿರುವ ಕೋಳಿ–ಮರಿಯಂತೆ ॥ ೧೯ ॥

**ವಿಟ** : ವಸಂತಸೇನೆ, ನಿಲ್ಲು ನಿಲ್ಲು
ಎಳೆ ಬಾಳೆಯಂತೇಕೆ ನಡುಗುತೋಡುತ್ತಿರುವೆ?
ಗಾಳಿಗೋಲಾಡುತಿದೆ ತೊಟ್ಟ ಕೆಂಬಟ್ಟೆಯಂಚು
ತೊಟ್ಟ ಕೆಂದಾವರೆಯ ಮೊಗ್ಗು ಜಾರುತ್ತಿದೆ
ಅಲತಿಗೆಯ ಗುಹೆಗೆ ಹೊಡೆದಾಗ ಚೇಣು
ಅದು ಬಿರಿದು ಬೀಳುವಂತೆ! ॥ ೨೦ ॥

**ಶಕಾರ**. ನಿಲ್ಲು, ವಶಂತಶೇನೆ, ನಿಲ್ಲು
ನೀನು ಹೆಚ್ಚಿಶುತಿರುವೆ ನನ್ನೀ
ಮದನನನು ಕಾಮನನು ಮನ್ಮಥನನು
ರಾತ್ರಿ ಹಾಶಿಗೆಯಲ್ಲಿ ನಾನು ಮಲಗಿರುವಾಗ
ನನ್ನ ನಿದ್ದೆಯ ನೀನು ಕಶಿಯುತಿರುವೆ!
ರಾವಣನ ಕೈಯಲ್ಲಿ ಕುಂತಿ ಶಿಕ್ಕಂತೆ
ನನ್ನ ವಶವಾದರೂ ಕೂಡ ನೀನು
ಹೆದರಿ ತಡವರಿಸುತ್ತ ಜಾರುತ್ತ ಓಡುತಿರುವೆ! ॥ ೨೧ ॥

ವಿಟ ವಸಂತಸೇನೆ,
ನನ್ನ ಹೆಜ್ಜೆಗು ಮೀರಿ ದಾಪುಗಾಲಲಿ ನಡೆವೆ
ಗರುಡನಿಗೆ ಹೆದರಿರುವ ಹಾವಿನಂತೆ
ನಾನು ಜಿದ್ದಿಗೆ ನಿಂತೆನೆಂದರೆ, ನಿನಗೆ ಗೊತ್ತಿಲ್ಲ
ಓ ಚೆಲುವೆ ಗಾಳಿಯೂ ಸೋತೀತು
ಆದರೆ,
ನಿನ್ನ ಬೆನ್ನಟ್ಟುವುದು ನನಗೆ ಬೇಕಿಲ್ಲ || ೨೨ ||

ಶಕಾರ ಭಾವ ಭಾವ,
ದುಡ್ಡು ಕಶಿಯುವ, ಕಾಮದೇವನ ಕೈಯ ಚಾಟಿಯಿವಳು,
ಮೀನು ತಿನ್ನುವವಳು,
ನಾಟ್ಯ ರಾಣಿಯಿವಳು,
ಪುಟ್ಟಮೂಗಿನವಳು,
ಕುಲವ ಕೆಡಿಶಿದವಳು,
ಕೈಗೆ ಶಿಕ್ಕದವಳು,
ಕಾಮನನು ಮುಚ್ಚಿಡುವ ಪೆಟ್ಟಿಗೆಯೊ ಇವಳು,
ಇವಳು ಶೂಳೆಯ ಮಗಳು
ಶೂಳೆಗೇರಿಯ ಚೆಲುವೆ
ವೇಶ್ಯೆ–ಬೆಲೆವೆಣ್ಣು
ಈ ಹತ್ತು ನಾಮಾವಳಿಯನಿವಳಿಗಿಟ್ಟಿರುವೆ
ಆದರೂ ಇವಳೆನ್ನ ಬಯಶುತಿಲ್ಲ! || ೨೩ ||

ವಿಟ · ಕಂಪಿಸುವ ಕಿವಿಯೋಲೆ ಕೆನ್ನೆಗಳನೊರಸುತಿದೆ
ಹೆದರಿ ಗಾಬರಿಗೊಂಡು ಏಕೆ ಓಡುತ್ತಿರುವ?
ವಿಟಜನರ ಕೂರುಗುರು ತಂತಿಯನು ಮಿಡಿದಾಗ
ಕಂಪಿಸುವ ವೀಣೆಯಂತೆ
ಮುಗಿಲ ಗುಡುಗಿಗೆ ಹೆದರಿ ನಲುಗುವ
ಸಾರಸೀ ಹಕ್ಕಿಯಂತೆ! || ೨೪ ||

ಶಕಾರ : ತೊಟ್ಟ ಒಡವೆಗಳು ಝುಣಿರುಝುಣಿರೆನ್ನಲು
ರಾಮನಿಗೆ ಹೆದರಿರುವ ದ್ರೌಪದಿಯ ತೆರದಿ
ಏಕೆ ಓಡುತ್ತಿರುವೆ?
ಬಲವಂತದಿಂದ ಅಪಹರಿಶಬೇಕೇನು
ನಾನೀಗ ನಿನ್ನನ್ನು?
ವಿಶ್ವಾವಶುವಿನಕ್ಕ ಶುಂದರಿ ಶುಭದ್ರೆಯನು
ಹನುಮಂತ ಹಾರಿ ಹಿಡಿದಂತೆ! || ೨೫ ||

**ಚೇಟ .** ರಾಜರಿಗೆ ಬೇಕಾದ ದೊಡ್ಡ ಜನ ಇವರು
ಇವರ ಮನವೊಲಿಸಿದರೆ ನಿಮಗು ಗಮ್ಮತ್ತು
ಮೀನು–ಮಾಂಸದ ಅಡಿಗೆ ಎರಡು ಹೊತ್ತು
ಮೀನು–ಮಾಂಸದ ರುಚಿ ಒಮ್ಮೆ ಕಂಡರೆ ಮತ್ತೆ
ನಾಯಿಗಳು ಕೂಡ ಹೆಣವ ಮೂಸುವುದಿಲ್ಲ ॥ ೨೬ ॥

**ವಿಟ** ಅವ್ವಾ ವಸಂತಸೇನೆ,
ನಕ್ಷತ್ರಮಾಲೆಯನೆ ಬಿಗಿದು ಪೋಣಿಸಿದಂತೆ
ಕಣ್ಸೆಳೆವ ಚೆಲುವ ನಡುದಾರವನ್ನು
ಸೊಂಟದಲಿ ಜಾಲಿಸುತ,
ಕಂಪುಬೀರುವ ಕೆಂಪು ಅಲತಿಗೆಯ ಹುಡಿಯಿಂದ
ಮೋರೆಯನು ಸಿಂಗರಿಸಿ,
ನಗರದೇವತೆಯಂತೆ
ಹೆದರಿ ಹೆಜ್ಜೆಯನಿಡುತ ಏಕೆ ನೀನೋಡುತಿರುವೆ? ॥ ೨೭ ॥

**ಶಕಾರ** ಕಾಡಿನಲಿ ಹೆಣ್ನರಿಯ ಬೆನ್ನುಹತ್ತಿರುವಂಥ
ಬೇಟೆನಾಯಿಗಳಂತೆ
ನಾವು ಜೋರಾಗಿಯೇ ಬೆನ್ನುಹತ್ತಿರುವೆವು
ನೀನೊ ಓಡುತ್ತಿರುವೆ ನನ್ನ ತಪ್ಪಿಸಿಕೊಂಡು
ನನ್ನ ಹೃದಯದ ಹೂವ ತೊಟ್ಟು ಶಹ ಕೀಳುತ್ತ
ತ್ವರೆಯಿಂದ, ಶೀಘ್ರದಲಿ, ವೇಗವಾಗಿ ॥ ೨೮ ॥

**ವಸಂತಸೇನೆ .** ಪಲ್ಲವಕ, ಪಲ್ಲವಕ, ಪರಭೃತಿಕೆ ಪರಭೃತಿಕೆ

**ಶಕಾರ .** (ಹೆದರಿಕೊಂಡು) ಭಾವ ಭಾವ, ಮನುಷ್ಯರು ಮನುಷ್ಯರು

**ವಿಟ :** ಹೆದರಬೇಡ, ಹೆದರಬೇಡ

**ವಸಂತಸೇನೆ :** ಮಾಧವಿಕೆ ಮಾಧವಿಕೆ .

**ವಿಟ :** (ನಕ್ಕು) ಅಯ್ಯೋ ದಡ್ಡಾ, ಅವಳು ತನ್ನ ಪರಿಜನರನ್ನು ಕೂಗುತಿದ್ದಾಳೆ

**ಶಕಾರ ·** ಭಾವ ಭಾವ, ಯಾರೋ ಹೆಂಗಸನ್ನು ಕರೆಯುತಿದ್ದಾಳೆ!

**ವಿಟ :** ಹೌದಯ್ಯ ಹೌದು

**ಶಕಾರ** ನೂರು ಹೆಂಗಸರು ಒಟ್ಟಾಗಿ ಬಂದರೂ ಒಂದು ಕೈ ನೋಡಿಯೇ ಬಿಡೋದು ನಾನೇನು ಶೂರನಲ್ಲವಾ?

**ವಸಂತಸೇನೆ .** (ಶೂನ್ಯವಾಗಿ ದಿಟ್ಟಿಸಿ) ಹಾಯ್, ಪರಿಜನರೂ ಎಲ್ಲೊ ತಪ್ಪಿಸಿಕೊಂಡರಲ್ಲ! ಈಗ ನಾನೇ ನನ್ನನ್ನು ರಕ್ಷಿಸಿಕೊಳ್ಳಬೇಕಾಗಿದೆ

**ವಿಟ :** ಹುಡುಕು ಹುಡುಕು ಪರಿವಾರದವರನ್ನು.

**ಶಕಾರ** ವಶಂತಶೇನೆ, ಪರಭೃತಿಕೆಯನ್ನೋ ಪಲ್ಲವಕನನ್ನೊ, ಇಡಿಯ ವಶಂತ ಮಾಶವನ್ನೇ ಬೇಕಾದರೂ ಕೂಗಿ ಕರೆ ನಾನು ನಿನ್ನ ಮೈಗೆ ಕೈಹಾಕ ಬಂದಾಗ ತಡೆಯೋನು ಯಾರವನು?

ಜಮದಗ್ನಿಯ ಮಗ ಭೀಮಶೇನನೆ?
ಕುಂತಿಯ ಮಗನೆ? ರಾವಣನೆ?
ಯಾರವ ನನ್ನನು ತಡೆವವನು?
ನಾನೋ ನಿನ್ನಯ ತಲೆಮುಡಿ ಹಿಡಿದು
ಎಳೆಯತೊಡಗಿದರೆ ದುಃಶಾಶನನ
ಕಥೆ ಮತ್ತೊಮ್ಮೆಯು ಮರುಕಳಿಶೀತು ॥ ೨೯ ॥

ಏಯ್, ನೋಡು ನೋಡು–

ಶಾಣೆ ಹಿಡಿದ ಕತ್ತಿಯಿದೋ
ನಿನ್ನ ತಲೆಯು ಬಗ್ಗಿದೆ
ತರಿದು ಬಿಡಲೆ ತಲೆಯನು?
ಅಥವಾ, ಕೊಂದು ಬಿಡಲೆ ನಿನ್ನನು?
ಓಡ ಬೇಡ ಶುಮ್ಮನೆ
ಶಾಯಲಿಕ್ಕೆ ಗಳಿಗೆ ಬಂದವರು
ಮತ್ತೆ ಬದುಕುವುದು ಶಾಧ್ಯವಿಲ್ಲ ॥ ೩೦ ॥

**ವಸಂತಸೇನೆ** ಅಯ್ಯ, ನಾನು ಹೆಣ್ಣು ಹೆಂಗಸು

**ವಿಟ** ಅದರಿಂದಲೇ ಉಳಕೊಂಡಿದ್ದೀಯಾ

**ಶಕಾರ** ಅದರಿಂದಲೇ ನಿನ್ನನ್ನು ಕೊಂದಿಲ್ಲ

**ವಸಂತಸೇನೆ** (ಸ್ವಗತ) ಇವನನ್ನು ಸಂತೈಸುವುದೂ ಅಪಾಯವೆ ಇರಲಿ, ಹೀಗೆ ಮಾಡ್ತೇನೆ (ಪ್ರಕಾಶ) ಅಯ್ಯ, ಏನು ನನ್ನ ಮೈಯ ಬಂಗಾರಕ್ಕಾಗಿ ಬೆನ್ನು ಹತ್ತಿದ್ದೀರಾ?

**ವಿಟ** ಶಾಂತಂ ಪಾಪಂ ಅವ್ವಾ ವಸಂತಸೇನೆ, ಹೂದೋಟದ ಬಳ್ಳಿಯಲ್ಲಿ ಅರಳಿದ ಹೂವನ್ನು ಯಾರಾದರೂ ಕೀಳುತ್ತಾರೇನು? ಚಿನ್ನ ನಿನ್ನ ಮೈಯಲ್ಲಿ ಇದ್ದರೆಯೆ ಚಂದ.

**ವಸಂತಸೇನೆ** . ಮತ್ತೇಕೆ ಹೀಗೆ ಕಾಡುತಿದ್ದೀರಿ?

**ಶಕಾರ** : ನಾನು ದೇವತಾಮನುಷ್ಯ, ವಾಶುದೇವ ನನ್ನನ್ನು ನೀನು ಪ್ರೀತಿಶ ಬೇಕೂಂತ.

**ವಸಂತಸೇನೆ** : (ಕೋಪದಿಂದ) ಶಾಂತಂ ಶಾಂತಂ ತೊಲಗು ಕೆಟ್ಟಯೋಚನೆ ಮಾಡ್ತಾ ಇದ್ದೀಯಾ

**ಶಕಾರ** (ಕೈತಟ್ಟಿ ನಗುತ್ತ) ಭಾವ ಭಾವ, ನೋಡಿದೆಯಾ? ಈ ಶೂಳೆಯ ಹೆಣ್ಣಿಗೆ ಒಳಗಿಂದೊಳಗೆ ನನ್ನ ಬಗ್ಗೆ ಪ್ರೀತಿ ಉಂಟಯ್ಯ, ಹೇಳ್ತಾ ಇದಾಳಲ್ಲ: "ಶಾಂತನಾಗು, ಮಲಗು, ಬಾ ವಿಶ್ರಾಂತಿ ತಗೋ" ಹಾಗೇಂತ ನಾನೂ ದೂರದ ಹಳ್ಳಿಗೋ ಊರಿಗೋ ಎಲ್ಲಿಗೂ ಹೋಗಿಲ್ಲ ಮಹಾರಾಣಿ, ಭಾವನ ತಲೇ ಮೇಲೆ ಕಾಲಿಟ್ಟು ಆಣೆಮಾಡಿ ಹೇಳ್ತೀನಿ: ನಿನ್ನ ಬೆನ್ನ ಹಿಂದೆಯೆ ಬೀದಿಯಿಂದ ಬೀದಿಗೆ ಅಂಡಲೆಯುತ್ತ ಆಯಾಸಗೊಂಡಿದ್ದೇನೆ; ಶ್ರಾಂತನಾಗಿದ್ದೇನೆ

**ವಿಟ** · (ಸ್ವಗತ) ಈ ಮೂರ್ಖನಿಗೆ ಹೇಳಿದ್ದೂ ತಲೆಗೆ ಹತ್ತೋದಿಲ್ಲ ಶಾಂತಂ ಶಾಂತಂ ಅಂದರೆ ಶಾಂತನಾಗು ವಿಶ್ರಾಂತಿ ತಗೋ ಅಂತ ತಿಳ್ಕೋತಾನೆ ತೊಲಗು ಅಂದರೆ ಮಲಗು ಅಂತ ಅರ್ಥ ಮಾಡ್ಕೊಂಡು ಜೊಲ್ಲು ಸುರಿಸ್ತಾನೆ (ಪ್ರಕಾಶ) ವಸಂತಸೇನೆ, ಸೂಳೆಯರ ಕೇರಿಗೆ ಸಲ್ಲದ ಮಾತನ್ನಾಡುತಿದ್ದೀಯಾ. ನೋಡು–

ಸೂಳೆಯ ಕೇರಿಗೆ ಭೂಷಣವಲ್ಲವೆ
ಹರೆಯದ ಹುಡುಗರ ಬೆಂಗಾವಲು
ಯೋಚಿಸು, ನೀನೂ ಒಬ್ಬಳು ಸೂಳೆಯೆ
ಬೀದಿಯ ಬದಿಯಲಿ ಬೆಳೆದಿಹ ಬಳ್ಳಿ!
ಬೆಲೆ ತೆತ್ತವರಿಗೆ ಮಾರಲಿಕೆಂದೇ
ಇರುವುದು ನಿನ್ನ ಶರೀರ
ಬೇಕಾಗಿರಲಿ, ಬೇಡಾಗಿರಲಿ
ದುಡ್ಡು ತೆತ್ತವರನ್ನು ತಣಿಸಬೇಕು ॥ ೩೦ ॥

ಅಲ್ಲದೆ,

ಮಡಿವಂತ ಬ್ರಾಹ್ಮಣನು ಮಿಂದ ಕೆರೆಯಲ್ಲೆ
ಹೆಡ್ಡ ಹೊಲೆಗಾರನೂ ಮುಳುಗು ಹಾಕುವನು
ನವಿಲೊಂದು ಬಂದು ಕೂತು ಬಗ್ಗಿಸಿದ ಹೂಬಳ್ಳಿಯಲ್ಲೆ
ಕಾಗೆಯೂ ಕೂಡ ಬಂದು ಕೂಡುವುದು
ಬ್ರಾಹ್ಮಣರು ಕ್ಷತ್ರಿಯರು ವೈಶ್ಯರೂ ದಾಟಿರುವ ದೋಣಿಯಲ್ಲೆ
ಕುಲಗೆಟ್ಟವರು ಕೂಡ ಕೂತು ದಾಟುವರು
ಸೂಳೆಯಾದ ನೀನು ಕೂಡ ಹಾಗೆಯೇ
ಕೆರೆಯಂತೆ ಬಳ್ಳಿಯಂತೆ ದೋಣಿಯಂತೆ
ಯಾರು ಮುಟ್ಟಿದರೂನು ಸೂಳೆ ಮೈಲಿಗೆಯಲ್ಲ
ಸೂಳೆ ಎಲ್ಲರ ಸೊತ್ತು ॥ ೩೧ ॥

**ವಸಂತಸೇನೆ** . ಗುಣದಿಂದ ಪ್ರೀತಿ ಬೀಳಬೇಕು ಹೊರತು ಬಲಾತ್ಕಾರ ದಿಂದಲ್ಲವಲ್ಲ

**ಶಕಾರ .** ಭಾವ ಭಾವ, ಈ ಹುಟ್ಟು ತೊತ್ತಿನ ಹೆಣ್ಣು ಕಾಮದೇವಾಲಯದ ಉದ್ಯಾನಕ್ಕೆ ಭೇಟಿ ಕೊಟ್ಟಂದಿನಿಂದ ಆ ದರಿದ್ರ ಚಾರುದತ್ತನ ಮೇಲೆ ಮನಶು ಹಾಕಿದ್ದಾಳೆ ನನ್ನನ್ನೀಗ ಪ್ರೀತಿಶ್ತಾನೇ ಇಲ್ಲ ಇಲ್ಲೆ ಎಡಗಡೆ ಅವನ ಮನೆ ಅದರಿಂದ ನಿನ್ನ ಮತ್ತು ನನ್ನ ಕೈಯಿಂದ ಈಕೆ ನುಣುಚಿಕೊಳ್ಳದ ಹಾಗೆ ಎಚ್ಚರವಾಗಿ ನೋಡಿಕೋ

**ವಿಟ ·** (ಸ್ವಗತ) ಯಾವುದನ್ನು ಮುಚ್ಚಿಡಬೇಕೊ ಅದನ್ನೆ ಆಡ್ತಾ ಇದಾನೆ ಈ ಮೂರ್ಖ ವಸಂತಸೇನೆ ಚಾರುದತ್ತನೆಡೆಗೆ ಏಕೆ ಆಕರ್ಷಿತಳಾದಳು? ರತ್ನ ರತ್ನವನ್ನೆ ಹೋಗಿ ಸೇರುತ್ತದೆ ಎನ್ನುವ ಮಾತು ನಿಜ ಅದರಿಂದ ಅಲ್ಲಿಗೇ ಹೋಗಲಿ ಈ ಮೂರ್ಖನನ್ನು ಕಟ್ಟಿಕೊಂಡು ಏನು ಮಾಡೋದು? (ಪ್ರಕಾಶ) ಕಾಣೇಲಿಯ ಮಗನೆ, ಹೌದು, ಎಡಗಡೆಯಲ್ಲೆ ಇದೆ ಆ ವ್ಯಾಪಾರಿಯ ಮನೆ

**ಶಕಾರ :** ಹೌದು, ಎಡಗಡೆಯಲ್ಲೆ ಇದೆ

**ವಸಂತಸೇನೆ ·** (ಸ್ವಗತ) ಅಮ್ಮಯ್ಯ, ಎಡಗಡೆಯಲ್ಲಿ ಆತನ ಮನೆಯಿದೆಯೆಂದು ಹೇಳಿ ಈ ದುಷ್ಟ ಅಪಕಾರದ ನಡುವೆಯೂ ಉಪಕಾರ ಮಾಡಿದ ನನ್ನ ಪ್ರಿಯತಮನ ಸಂಗಮ ನನಗೆ ದೊರಕುವಂತಾಯಿತು

**ಶಕಾರ .** ಭಾವ ಭಾವ, ಈ ಕಗ್ಗತ್ತಲಿನಲ್ಲಿ ಕಾಣಕಾಣುತಿದ್ದಂತೆಯೆ, ಉದ್ದಿನ ರಾಶಿಯಲ್ಲಿ ಶೇರಿ ಹೋದ ಮಶಿಯ ತುಂಡಿನಂತೆ ವಶಂತಶೇನೆ ಮಾಯವಾಗಿಬಿಟ್ಟಳು.

**ವಿಟ :** ಓಹ್, ಎಂಥ ಕಗ್ಗತ್ತಲು–

ಬೆಳಕಿನಲಿ ಬಹುದೂರ ಹರಿವಂಥ ಈ ಕಣ್ಣು
ಒಮ್ಮೆಲೇ ಕತ್ತಲೆಯ ಬಲೆಯೊಳಗೆ ಬಿದ್ದು
ತೆರೆದುಕೊಂಡರು ಒಂದೆ ಮುಚ್ಚಿದರು ಒಂದೆ
ಏನು ಕಾಣಿಸದಂತೆ ಕತ್ತಲೆಯ ಪರದೆ || ೩೩ ||

ಅಲ್ಲದೆ–

ಕತ್ತಲೆಯೆ ಮೈತುಂಬ ತುಂಬಿಕೊಂಡಂತೆ
ಆಕಾಶ ಅಂಜನದ ಮಳೆಯಗರೆದಂತೆ
ಹಾಳು ದುರ್ಜನರ ಸಹವಾಸದಂತೆ
ಇದ್ದ ಕಣ್ಣೂ ಕೂಡ ವ್ಯರ್ಥವಾಯ್ತು || ೩೪ ||

**ಶಕಾರ .** ಭಾವ ಭಾವ, ವಶಂತಶೇನೆಯನ್ನು ಹುಡುಕುತಿದ್ದೇನೆ

**ವಿಟ .** ಕಾಣೇಲಿಯ ಮಗನೆ, ಆಕೆಯ ಪತ್ತೆ ಹಚ್ಚುವ ಸುಳಿವು ಏನಾದರೂ ಸಿಕ್ಕಿತೇನು?

**ಶಕಾರ ·** ಭಾವ ಭಾವ, ಎಂಥ ಶುಳಿವು?

**ವಿಟ** ಕಾಲ ಗೆಜ್ಜೆಯ ಸದ್ದು, ತೊಟ್ಟ ಹೂವಿನ ಕಂಪು

**ಶಕಾರ** ಹೂವಿನ ಕಂಪು ಕೇಳಿಶ್ತಾ ಇದೆ ಕತ್ತಲು ಕವಿದ ಮೂಗಿಗೆ ಗೆಜ್ಜೆಯ ಶದ್ದು ಮಾತ್ರ ಕಾಣಿಶ್ತಾ ಇಲ್ಲ

**ವಿಟ** (ಜನಾಂತಿಕ) ವಸಂತಸೇನೆ,

ಈ ಇರುಳ ಕತ್ತಲಲಿ ನೀನು ಮರೆಯಾಗಿರುವೆ
ಮೋಡದೆಡೆಯಲಿ ಅವಿತ ಮಿಂಚಿನಂತೆ
ಆದರೂ ನೀ ತೊಟ್ಟ ಹೂವುಗಳ ಕಂಪು
ಮತ್ತು ಝುಣಝುಣಿಸುವೀ ನಿನ್ನ ಕಾಲ್‌ಗೆಜ್ಜೆ
ಬಯಲು ಮಾಡುತ್ತಿಹವು ನಿನ್ನ ಇರವನ್ನು ॥ ೩೫ ॥

ಕೇಳಿತೇನು ವಸಂತಸೇನೆ?

**ವಸಂತಸೇನೆ** (ಸ್ವಗತ) ಕೇಳಿತು ಅರ್ಥವೂ ಆಯಿತು (ನಾಟ್ಯದಿಂದ ಗೆಜ್ಜೆಯನ್ನು ಬಿಚ್ಚಿ, ಹೂವುಗಳನ್ನು ತೆಗೆದು, ಎರಡು ಹೆಜ್ಜೆ ನಡೆದು, ಕೈಯಲ್ಲಿ ತಡವರಿಸುತ್ತ) ಇಲ್ಲೆ ಗೋಡೆಯ ಪಕ್ಕದಲ್ಲೆ ಆತನ ಮನೆಯ ಬಾಗಿಲು ಇದು ಆದರೆ ಬಾಗಿಲು ಮುಟ್ಟಿನೋಡಿದರೆ ಮುಚ್ಚಿಕೊಂಡಂತಿದೆ.

**ಚಾರುದತ್ತ** · ಗೆಳೆಯ, ನನ್ನ ಜಪ ಮುಗಿಯಿತು ಇನ್ನು ಹೋಗು. ಮಾತೃಗಣಗಳಿಗೆ ಬಲಿಯನ್ನು ಚೆಲ್ಲಿ ಬಾ

**ವಿದೂಷಕ** ಓಹೋಯ್, ನಾನು ಹೋಗೋದಿಲ್ಲ

**ಚಾರುದತ್ತ** ಹಾಯ್, ಕಷ್ಟವೆ–

ಬಡವನಾಡಿದ ಮಾತು ಬಂಧುಜನರೂ ಕೂಡ
ಲೆಕ್ಕಿಸುವುದಿಲ್ಲ; ಹತ್ತಿರದ ಗೆಳೆಯರು ಕೂಡ
ಬೆನ್ನು ತೋರಿಸುವರಯ್ಯ;
ಎಲ್ಲ ಆಪತ್ತುಗಳು ದಾಳಿ ನಡೆಸುವವತ್ತ;
ವ್ಯಕ್ತಿತ್ವ ಕುಗ್ಗುವುದು; ನಡತೆ ಕಳೆಗುಂದುವುದು;
ಯಾರು ಯಾರೋ ಎಲ್ಲ
ಊರಲ್ಲಿ ಮಾಡಿರುವ ಪಾಪಕ್ಕೆ ತಲೆಗೊಟ್ಟು
ಅಪವಾದ ಹೊರಬೇಕು ಬಡವನಾದವನು ॥ ೩೬ ॥

ಅಲ್ಲದೆ–

ಯಾವನೂ ಇವನತ್ತ ಸುಳಿವುದೂ ಇಲ್ಲ
ವಿಶ್ವಾಸದಿಂದೆರಡು ಮಾತನಾಡುವುದಿಲ್ಲ
ದುಡ್ಡಿದ್ದವರ ಮನೆಯ ಹಬ್ಬದೌತಣಗಳಿಗೆ
ಬಂದಾಗ 'ಈ ಪ್ರಾಣಿ ಯಾಕಾಗಿ ಬಂದನೋ'
ಎನುವಂಥ ಬಿರುನೋಟ

ಮೈತುಂಬ ಉಡಲುಂಟೆ
ಊರಜನರೊಡನೆ ಬೆರೆಯಲುಂಟೇ ನಾಚಿ
ಅಯ್ಯೋ ಈ ಬಡತನಃಬಡತನಃ
ಇದು ಆರನೆಯ ಮಹಾಪಾತಕವಲಾ ॥ ೩೭ ॥

ಅಲ್ಲದೆ–

ಓ ನನ್ನ ಬಡತನವೆ,
ನಿನ್ನ ಬಗೆಗೆಯೆ ನನಗೆ ಮರುಕವುಂಟಾಗುತಿದೆ
ಈ ನನ್ನ ಮೈಯಲ್ಲಿ ನೀನು ನೆಲೆನಿಂತಿರುವೆ
ಚೆಂದುಳ್ಳ ಗೆಳೆಯನಂತೆ
ಈ ಭಾಗ್ಯಹೀನ ತಾನೊಂದು ದಿನ ಸತ್ತಾಗ
ಎಲ್ಲಿ ಹೋಗುವೆ ನೀನು, ನಿನ್ನ ಗತಿಯೇನೆಂದು
ನನಗದೇ ಚಿಂತೆ! ॥ ೩೮ ॥

**ವಿದೂಷಕ** : (ಸಂಕೋಚದಿಂದ) ಓ ಗೆಳೆಯ, ನಾನು ಹೋಗುವುದೇ ಹೌದಾದರೆ ಈ ರದನಿಕೆಯಾದರೂ ನನ್ನ ಸಹಾಯಕ್ಕೆ ಜತೆಗಿರಲಿ

**ಚಾರುದತ್ತ** ರದನಿಕೆ, ಮೈತ್ರೇಯನ ಜತೆ ಹೋಗಮ್ಮ

**ಚೇಟಿ** ಅಯ್ಯನ ಅಪ್ಪಣೆ

**ವಿದೂಷಕ** : ಅವ್ವಾ ರದನಿಕೆ, ಬಲಿದ್ರವ್ಯವನ್ನೂ ದೀಪವನ್ನೂ ಹಿಡಿದುಕೋ ನಾನು ಬಾಗಿಲು ತೆಗೆಯುತ್ತೇನೆ (ಹಾಗೆಯೆ ಮಾಡುತ್ತಾನೆ)

**ವಸಂತಸೇನೆ** ನನ್ನನ್ನು ಸ್ವಾಗತಿಸುವುದಕ್ಕಾಗಿಯೆ ಎನುವಂತೆ ಬಾಗಿಲು ತೆರೆದುಕೊಂಡಿತು ಒಳಗೆ ಹೋಗುತ್ತೇನೆ (ನೋಡಿ) ಹಾಯ್ ಹಾಯ್, ಇಲ್ಲಿ ದೀಪವುಂಟಲ್ಲ!

(ಸೆರಗಿನ ತುದಿಯಿಂದ ದೀಪವನ್ನಾರಿಸಿ ಒಳಗೆ ಬರುತ್ತಾಳೆ)

**ಚಾರುದತ್ತ** : ಮೈತ್ರೇಯ, ಏನಿದು?

**ವಿದೂಷಕ** : ಬಾಗಿಲು ತೆರೆದಾಗ ಒಮ್ಮೆಲೆ ಗಾಳಿ ಒಳಗೆ ನುಗ್ಗಿದಂತಾಗಿ ದೀಪ ನಂದಿತು ಅವ್ವಾ, ರದನಿಕೆ, ನೀನು ಮುಂದೆ ಹೋಗು ನಾನೂ ಒಳಮನೆಗೆ ಹೋಗಿ ದೀಪ ಹಚ್ಚಿ ತರ್ತೀನಿ. (ಎಂದು ಹೋಗುತ್ತಾನೆ)

**ಶಕಾರ** : ಭಾವ ಭಾವ, ವಶಂತಶೇನೆಯನ್ನು ಹುಡುಕುತಿದ್ದೇನೆ

**ವಿಟ** ಹುಡುಕು ಹುಡುಕು.

**ಶಕಾರ** . (ಹಾಗೆಯೆ ಮಾಡಿ) ಭಾವ ಭಾವ, ಶಿಕ್ಕಿದಳು ಶಿಕ್ಕಿದಳು

**ವಿಟ** : ಆಯ್ಯೋ ಮೂರ್ಖ, ಇದು ನಾನಲ್ಲವಾ?

**ಶಕಾರ** ಭಾವ, ನೀನು ಈ ಬದಿಯಲ್ಲಿ ಒತ್ತರೆಯಲ್ಲಿ ನಿಲ್ಲು (ಪುನಃ ಹುಡುಕಿ ಚೇಟನನ್ನು ಹಿಡಿದು) ಭಾವ ಭಾವ, ಶಿಕ್ಕಿದಳು ಶಿಕ್ಕಿದಳು

**ಚೇಟ** ಅಯ್ಯ ಇದು ನಾನಲ್ಲವೆ? ಚೇಟ.

**ಶಕಾರ** · ಅಲ್ಲಿ ಭಾವ, ಇಲ್ಲಿ ಚೇಟ ಭಾವ, ಚೇಟ; ಚೇಟ, ಭಾವ ನೀವಿಬ್ಬರೂ ಒಂದು ಬದಿಯಲ್ಲಿ ಒತ್ತಟ್ಟಿಗೆ ನಿಲ್ಲಿ ನೋಡೋಣ (ಪುನಃ ಹುಡುಕಿ, ರದನಿಕೆಯುನ್ನು ಕೂದಲಲ್ಲಿ ಹಿಡಿದು) ಭಾವ ಭಾವ, ಈಗಂತು ಶಿಕ್ಕಿದಳು ಶಿಕ್ಕಿದಳು ವಶಂತಶೇನೆ–

ಕತ್ತಲೆಯಲ್ಲಿ ಓಡುತಿದ್ದಳು
ಹೂವಿನ ಕಂಪು ಶೂಶುತಿದ್ದಳು
ಹಿಡಿದೇ ಬಿಟ್ಟೆ ಇವಳನ್ನು
ತಲೆಮುಡಿಯಲ್ಲಿ ದ್ರೌಪದಿಯನ್ನು
ಹಿಡಿದ ಹಾಗೆ ಆ ಚಾಣಕ್ಯ || ೩೯ ||

**ವಿಟ** ಎಳೆವರೆಯದ ಮದದಲ್ಲಿ
ನೀನೊಳ್ಳೆಯ ಕುಲವಂತರ
ಹುಡುಗರ ಹಿಡಿಯುತಿದ್ದೆಯಲ್ಲ?
ಮುದ್ದಾದಂಥ, ಮುದ್ದಿಸಬೇಕಾದಂಥ,
ಹೂವು ಮುಡಿದ ಆ ತಲೆಮುಡಿಯಿಾಗ
ಸೆಳೆತಕ್ಕೆ ಸಿಕ್ಕಿತಲ್ಲ || ೪೦ ||

**ಶಕಾರ** ಓ ಹುಡುಗಿ, ನಿನ್ನನ್ನು ಹಿಡಿದು ಬಿಟ್ಟಿದ್ದೇನೆ
ತಲೆಯಲ್ಲೆ, ಮುಡಿಯಲ್ಲೆ, ಕೂದಲಲ್ಲೆ
ಶಂಭುವೋ ಶಿವನೊ ಶಂಕರನೊ ಈಶ್ವರನೊ
ಯಾರನ್ನು ಬೇಕಾದರೂ
ಕೂಗಿಕರೆ, ಅತ್ತುಬಿಡು, ಜೋರಾಗಿ ಬೊಬ್ಬೆಯಿಡು
ಏನು ಬೇಕದನು ಮಾಡು || ೪೧ ||

**ರದನಿಕೆ** : (ಹೆದರಿಕೊಂಡು) ಅಯ್ಯ, ಏನು ಮಾಡಹೊರಟದ್ದೀರಿ?

**ವಿಟ** · ಕಾಣೇಲಿಯ ಮಗನೆ, ಯಾರದೋ ಬೇರೆಯೆ ಸ್ವರ ಇದ್ದಂತಿದೆ!

**ಶಕಾರ** : ಭಾವ ಭಾವ, ಕೆನೆಮೊಶರು ತಿಂದ ಮೇಲೆ ಬೆಕ್ಕಿನ ಶ್ವರ ಬೇರಾಗುತ್ತಂತೆ ಹಾಗೆಯೆ ಈ ತೊತ್ತಿನ ಮಗಳು ತನ್ನ ಶ್ವರ ಬದಲಿಶಿಕೊಂಡಿರಬೇಕು.

**ವಿಟ** ಏಕೆ ಸ್ವರ ಬದಲಾಯಿತು? ಆಶ್ಚರ್ಯ! ಅಥವಾ ಇದರಲ್ಲಿ ಅದ್ಭುತವಾದದ್ದೇನೂ ಇಲ್ಲ–

ಇವಳು ಒಳ್ಳೆಯ ನಟಿ
ಕಲೆಗಳಲಿ ಜಾಣೆ

ಮೋಸಗಾರಿಕೆಯಂತು ಇವರ ಕುಲವಿದ್ಯೆ
ಅದರಿಂದ ಬೇರೆಯೇ ಸ್ವರದಿಂದ ನುಡಿವಂಥ
ಹೂಟ ಹೂಡಿರಬೇಕು ಇವಳು! || ೪೨ ||

**ವಿದೂಷಕ** (ಪ್ರವೇಶಿಸಿ) ಓಹೋಹೋ ಈ ರಾತ್ರಿಯ ಹೊತ್ತಿನ ಮೆಲು ಗಾಳಿಯಿಂದಾಗಿ, ವಧಸ್ತಂಭಕ್ಕೆ ಒಯ್ಯುತ್ತಿರುವ ಆಡಿನ ಹೃದಯದಂತೆ ಈ ದೀಪ ಚಡಪಡಿಸುತ್ತಿದೆ (ಹತ್ತಿರ ಹೋಗಿ, ರದನಿಕೆಯ ಪಾಡನ್ನು ಕಂಡು) ಅರೆ! ರದನಿಕೆ?

**ಶಕಾರ** ಭಾವ ಭಾವ, ಯಾರೋ ಮನುಷ್ಯ ಮನುಷ್ಯ

**ವಿದೂಷಕ** ಇದು ನ್ಯಾಯವಲ್ಲ; ಇದು ತರವಲ್ಲ ಆರ್ಯಚಾರುದತ್ತನಿಗೆ ಬಡತನ ಬಂತು ಎಂದ ಮಾತ್ರಕ್ಕೆಯೆ ಪರಪುರುಷರು ಅವನ ಮನೆಗೆ ಹೀಗೆ ಮುತ್ತಿಗೆಯಿಡಬೇಕಾ?

**ರದನಿಕೆ** ಅಯ್ಯ ಮೈತ್ರೇಯ, ನೋಡು ನನ್ನ ಸೋಲನ್ನು

**ವಿದೂಷಕ** ನಿನ್ನ ಸೋಲೋ, ಅಥವ ನಮ್ಮದೊ?

**ರದನಿಕೆ** ಹೌದು, ನಿಮ್ಮದೇ ಸೋಲು

**ವಿದೂಷಕ** ಏನು, ಇದು ಬಲಾತ್ಕಾರವೆ?

**ರದನಿಕೆ** ಮತ್ತೆಂಥದು

**ವಿದೂಷಕ** ನಿಜವಾಗಿ?

**ರದನಿಕೆ** ನಿಜವಾಗಿ

**ವಿದೂಷಕ** (ಕೋಪದಿಂದ ದಂಡೆಯೆತ್ತಿ) ಬೇಡಾ ಬೇಡಾ, ಓಹೋಯ್, ತನ್ನ ಮನೆಯೊಳಗೆ ನಾಯಿ ಕೂಡ ಗುರ್ ಎನ್ನುತ್ತೆ ನಾನು ಬ್ರಾಹ್ಮಣ ಸುಮ್ಮನಿದ್ದೇನಾ? ನಮ್ಮ ಅದೃಷ್ಟದಂತೆಯೆ ಡೊಂಕಾದ ಈ ದಂಟೆಯಿಂದ ಕುಂಬುಬಿದಿರಿನ ತುಂಡಿನಂತೆ ನಿನ್ನ ತಲೆಯನ್ನು ಹೊಡೆದು ಮುರಿದು ಬಿಡ್ತೇನೆ

**ವಿಟ** · ಮಹಾಬ್ರಾಹ್ಮಣ, ಸಮಾಧಾನ ಸಮಾಧಾನ

**ವಿದೂಷಕ** . (ವಿಟನನ್ನು ಕಂಡು) ಇಲ್ಲಿ ಇವನದೇನೂ ತಪ್ಪಿಲ್ಲ (ಶಕಾರನನ್ನು ಕಂಡು) ಇವ ತಾನೆ ಇಲ್ಲಿ ಅಪರಾಧಿ. ಏಯ್, ರಾಜನ ಭಾವನಂಟ, ಸಂಸ್ಥಾನಕ, ದುಷ್ಟ, ದುರ್ಮನುಷ್ಯ, ನ್ಯಾಯವೇನಯ್ಯಾ ಇದು? ಹೌದು, ಆರ್ಯಚಾರುದತ್ತ ಬಡವನಾಗಿರೋದು ಹೌದು ಆದರೆ ಅವನ ಗುಣವಂತಿಕೆ ಇಡಿಯ ಉಜ್ಜಯಿನಿಗೆ ಅಲಂಕಾರವಾಗಿಲ್ಲವೆ? ಅಂಥವನ ಮನೆಗೆ ಹೊಕ್ಕು ಅವನ ಪರಿವಾರದವರಿಗೆ ಹೀಗೆ ಉಪಟಳ ಕೊಡ್ತಾ ಇದೀಯಲ್ಲ ಇದು ಸರಿಯೇನಯ್ಯ?

ಬಡವನೆಂದು ಅಷ್ಟೊಂದು ತಾತ್ಸಾರ ಬೇಡ
ಅದೃಷ್ಟದಾಟದ ಮುಂದೆ ಬಡವನೆಂಬುದಿಲ್ಲ
ನಡತೆಗೇಡಿ ಜನದ ಬಳಿ
ಎಷ್ಟು ಹಣ ಇದ್ದರೇನು
ಬಡವಗಿಂತ ಕಡೆ ಅವನು || ೪೩ ||

ವಿಟ (ಸಂಕೋಚದಿಂದ) ಮಹಾಬ್ರಾಹ್ಮಣ, ಸೈರಿಸಿಕೊ ಸೈರಿಸಿಕೊ ಬೇರೊಬ್ಬ ವ್ಯಕ್ತಿಯ ಭ್ರಾಂತಿಯಿಂದ ಇದು ನಡೆಯಿತು ದರ್ಪದಿಂದಲ್ಲ ನೋಡು- ಬಯಸಿದಂಥ ಒಬ್ಬಳನ್ನು ನಾವು ಹುಡುಕುತಿದ್ದೆವು

ವಿದೂಷಕ : ಇವಳೆ ಏನವಳು?

ವಿಟ · ಶಾಂತಂ ಪಾಪಂ–

ಅವಳೊಬ್ಬಳು ಹರೆಯವನ್ನು ಗೆದ್ದ ಚೆಲುವೆ
ಹರೆಯದವರನ್ನೆಲ್ಲ ಕೈಯಲ್ಲಿ ಕುಣಿಸಿದವಳು
ಅವಳು ಕೈತಪ್ಪಿದಳು; ಇವಳು ಸೆರೆಸಿಕ್ಕಿದಳು
ಅವಳೆ ಇವಳೆನುವಂಥ ತಪ್ಪು ಕಲ್ಪನೆಯಿಂದ
ನಡೆದುಹೋಯಿತು ಇಂಥ ಕೆಟ್ಟ ಕೆಲಸ || ೪೪ ||

ಏನಿದ್ದರೂ ಎಲ್ಲವನ್ನೂ ಮರೆತು ಕ್ಷಮಿಸಬೇಕು (ಎಂದು ಖಡ್ಗವನ್ನು ತೆಗೆದಿಟ್ಟು, ಕೈಮುಗಿದು ಕಾಲಿಗೆ ಬೀಳುತ್ತಾನೆ )

ವಿದೂಷಕ : ನೀನು ಒಳ್ಳೆಯ ಜನ ಏಳು ಏಳು ನನಗೂ ವಿಷಯ ತಿಳಿಯದೆ ನಿನ್ನನ್ನು ಬೈದೆ ಅಷ್ಟೆ ಈಗ ವಿಷಯ ಗೊತ್ತಾಯಿತು ನಾನೆ ನಿನ್ನ ಕ್ಷಮೆ ಕೇಳಬೇಕಾಗಿದೆ

ವಿಟ · ಛೆ, ಛೆ, ನಾನೆ ನಿನ್ನ ಕ್ಷಮೆ ಕೇಳಬೇಕು ಮತ್ತೆ, ನಾನು ಏಳಬೇಕಾದರೆ ನನಗೊಂದು ಮಾತು ಕೊಡಬೇಕು

ವಿದೂಷಕ : ಏನು ಹೇಳಲ್ಲ?

ವಿಟ : ಈ ಸಂಗತಿಯನ್ನು ದಯವಿಟ್ಟು ಆರ್ಯಚಾರುದತ್ತನ ಕಿವಿಗೆ ಹಾಕ ಬಾರದು

ವಿದೂಷಕ : ಇಲ್ಲ, ಹೇಳೋದಿಲ್ಲ

ವಿಟ : ಬ್ರಾಹ್ಮಣನೆ, ನಿನ್ನ ಈ ವಿಶ್ವಾಸವನ್ನು
ಹೊತ್ತು ತಿರುಗುವೆ ನಾನು ತಲೆಯ ಮೇಲೆ
ಕತ್ತಿ ಹಿಡಿದು ತಲೆಯೆತ್ತಿ ನಡೆವವರು ನಾವು
ಆದರೂ
ಗುಣವಂತರನು ಕಂಡು ತಲೆಬಾಗುವವರು || ೪೫ ||

**ಶಕಾರ** (ಅಸಹನೆಯಿಂದ) ಭಾವ, ಈ ಕೆಟ್ಟ ಬ್ರಾಹ್ಮಣನಿಗೆ ನೀನು ಏಕೆ ಇಷ್ಟು ದೈನ್ಯದಿಂದ ಕೈ ಮುಗಿದು ಕಾಲಿಗೆ ಅಡ್ಡ ಬೀಳುತಿದ್ದೀಯಾ?

**ವಿಟ** ಹೆದರಿಕೆಯಾಯಿತು

**ಶಕಾರ** . ಯಾರಿಂದ ಹೆದರಿಕೆ?

**ವಿಟ** ಆ ಚಾರುದತ್ತನ ಸಜ್ಜನಿಕೆಯಿಂದ

**ಶಕಾರ** ಮನೆಯಲ್ಲಿ ಒಪ್ಪತ್ತು ಊಟಕ್ಕೂ ಗತಿಯಿಲ್ಲದ ಆ ಪರದೇಶಿಯಲ್ಲಿ ಏನು ಅಂಥ ಶಜ್ಜನಿಕೆ?

**ವಿಟ** ಹಾಗನ್ನಬೇಡ–

ನನ್ನ–ನಿನ್ನಂಥವರ ಸ್ನೇಹಕ್ಕೆ ಬಲಿಯಾಗಿ
ಅವನು ಬಡವನಾದ
ಸಿರಿ ಅವನ ಮನೆಯಲ್ಲಿ ಚೆಲ್ಲಾಡುತಿದ್ದಾಗ
ಕೈ ಚಾಚಿ ಬಂದವನಿಗಿಲ್ಲ ಎಂದವನಲ್ಲ
ಯಾರನೂ ನೋಯಿಸಿಲ್ಲ
ತುಂಬಿ ತುಳುಕಿದ ಕೆರೆ ಜನರ ನೀರಡಿಕೆಯನು
ಬೇಕಷ್ಟು ನೀರುಣಿಸಿ ತಣಿಸಿ ಮತ್ತೆ
ಬತ್ತಿ ಬರಡಾದಂತೆ ಈಗವನ ಪಾಡಾಗಿದೆ ॥ ೪೬ ॥

**ಶಕಾರ** (ಸಿಟ್ಟಿನಿಂದ) ಯಾರವನು ಹುಟ್ಟು ತೊತ್ತಿನ ಮಗ–

ಶೂರವೀರ ಪಾಂಡುಪುತ್ರ ಶ್ವೇತಕೇತುವೆ?
ಅಥವ ರಾಧೆಯ ಪುತ್ರ ರಾವಣಾಶುರನೆ?
ಅಥವ ಇಂದ್ರದತ್ತನೇನು?
ರಾಮನಿಂದ ಕುಂತಿಯಲ್ಲಿ ಹುಟ್ಟಿದಶ್ವತ್ಥಾಮನೆ?
ಅಥವ ಧರ್ಮಪುತ್ರನಾದ ಶ್ರೀ ಜಟಾಯುವೆ? ॥ ೪೭ ॥

**ವಿಟ** - ಮೂರ್ಖ, ಆರ್ಯ ಚಾರುದತ್ತನಲ್ಲವೆ?

ಬಡವರ ಪಾಲಿಗೆ ಒದಗಿಬಂದ ಕಲ್ಪವೃಕ್ಷ ಇವನು
ಗುಣವಂತಿಕೆಯ ಹಣ್ಗಳಿಂದ ಬಗ್ಗಿದವನು
ಸಜ್ಜನರ ಬಂಧು ಇವನು, ಬಲ್ಲವರಿಗೆ ಮಾದರಿ
ಸಜ್ಜನಿಕೆಯ ಸಾಣೆಗಲ್ಲು
ಶೀಲವೆಂಬ ತಡಿಯ ಎಲ್ಲೆ ಮೀರದಂಥ ಕಡಲು ಇವನು
ಎಲ್ಲರನು ಉಪಚರಿಸುವವನು
ಯಾರನೂ ನೋಯಿಸಿದ್ದಿಲ್ಲ
ಮಾನವೀಯತೆಯ ತವರು
ಕಪಟವರಿಯದ ಹಿರಿಯ ಜೀವ

ತನ್ನ ಗುಣವಂತಿಕೆಯ ಹೆಚ್ಚಳಿಕೆಯಿಂದ
ಮೆಚ್ಚಿಕೆಯ ನಿಜವಾದ ಬಾಳನ್ನು
ಬಾಳುವವನವನೊಬ್ಬನೆ
ಉಳಿದವರು ಉಸಿರಾಡುತಿದ್ದಾರೆ ಅಷ್ಟೆ ॥ ೪೮ ॥

ಆದರಿಂದ ಬಾ, ನಾವಿಲ್ಲಿಂದ ಹೊರಟು ಹೋಗೋಣ

**ಶಕಾರ** · ವಶಂತಶೇನೆಯನ್ನು ಬಿಟ್ಟು ಹೋಗೋದಾ?

**ವಿಟ** : ವಸಂತಸೇನೆ ನಿನ್ನ ಪಾಲಿಗೆ ಇಲ್ಲವಾದಳು

**ಶಕಾರ** : ಹೇಗೆ?

**ವಿಟ** ಕುರುಡನ ಕಣ್ಣಿನಂತೆ,
ರೋಗಿಯ ದೇಹಪುಷ್ಟಿಯಂತೆ,
ದಡ್ಡನ ಬುದ್ಧಿಯಂತೆ,
ಸೋಮಾರಿಯ ಕಾರ್ಯಸಿದ್ಧಿಯಂತೆ,
ಚಟಗಳಿಗೆ ಬಲಿಯಾಗಿ ನೆನಪು ಕಳಕೊಂಡವನ
ಪರವಿದ್ಯೆಯಂತೆ,
ಹಗೆಜನರ ಕೆಳೆಯಂತೆ
ನಿನ್ನ ಪಾಲಿಗೆ ಅವಳು ಇನ್ನಿಲ್ಲವಾದಳು ॥ ೪೯ ॥

**ಶಕಾರ** . ವಶಂತಶೇನೆಯನ್ನು ಹಿಡಿಯದೆ ನಾನು ಹೋಗೋದಿಲ್ಲ

**ವಿಟ** : ಇದನ್ನು ಕೇಳಲಿಲ್ಲವಾ ನೀನು?—
ಆನೆಯನು ಹಿಡಿಯಲಿಕೆ ಸಂಕಲೆಯೆ ಬೇಕು
ಕುದುರೆಯನು ಹಿಡಿಯಲಿಕೆ ಕಡಿವಾಣ ಬೇಕು
ಹೆಣ್ಣನ್ನು ಹಿಡಿಯಲಿಕೆ ಹೃದಯವಂತಿಕೆ ಬೇಕು
ಇಲ್ಲವೆಂದಾದರಿದು ಹೊರಟು ಹೋಗು ॥ ೫೦ ॥

**ಶಕಾರ** : ನೀನು ಹೋಗೋದಾದರೆ ಹೋಗು. ನಾನು ಹೋಗೋದಿಲ್ಲ

**ವಿಟ** : ಆಗಲಿ, ಇರು ನಾನು ಹೋಗುತ್ತೇನೆ (ಎಂದು ಹೋಗುತ್ತಾನೆ)

**ಶಕಾರ** : ಭಾವ ಅಭಾವವಾಗಿ ಬಿಟ್ಟ (ವಿದೂಷಕನನ್ನು ಕುರಿತು) ಏ ಸೊಟ್ಟ ತಲೆಮಂಡೆಯವನೆ, ಕೆಟ್ಟ ಬ್ರಾಹ್ಮಣನೆ, ಕೂಡು ಕೂಡು.

**ವಿದೂಷಕ** : ನಮ್ಮನ್ನು ಎಂದೋ ಕೆಳಕ್ಕೆ ಕೂಡಿಸಿಯಾಗಿದೆಯಲ್ಲ

**ಶಕಾರ** : ಯಾರು?

**ವಿದೂಷಕ** · ಪಡೆದು ಬಂದ ವಿಧಿ

**ಶಕಾರ** : ಏಳು ಏಳು

**ವಿದೂಷಕ** ಏಳುತ್ತೇವೆ

**ಶಕಾರ** . ಯಾವಾಗ?

**ವಿದೂಷಕ** · ಎಂದು ಮತ್ತೆ ವಿಧಿ ಕಣ್ಣು ತೆರೆಯುತ್ತೊ ಆಗ

**ಶಕಾರ** · ಅರೆ, ಕೂಗು ಕೂಗು

**ವಿದೂಷಕ** : ಕೂಗಿಸ್ತಾನೇ ಇದೆಯಲ್ಲ

**ಶಕಾರ** : ಯಾವುದು?

**ವಿದೂಷಕ** . ನಮ್ಮ ದುರ್ಗತಿ

**ಶಕಾರ** : ಅರೆ, ನಗುನಗು

**ವಿದೂಷಕ** . ನಗುತ್ತೇವೆ

**ಶಕಾರ** : ಯಾವಾಗ?

**ವಿದೂಷಕ** ಆರ್ಯಚಾರುದತ್ತ ಮತ್ತೆ ಸಮೃದ್ಧಿಯನ್ನು ಕಂಡಾಗ

**ಶಕಾರ** . ಅರೆ ಕೆಟ್ಟಹುಡುಗ, ನಾನು ಹೇಳಿದ್ದೇನೇಂತ ಆ ದರಿದ್ರ ಚಾರುದತ್ತನ ಹತ್ರ ಹೇಳುಃ ಈ ಶೂಳೆಯರ ಹುಡುಗಿ ವಶಂತಶೇನೆ, ಹೊಶ ನಾಟಕದ ಶಿದ್ಧತೆಗೆ ಹೊರಟ ಶೂತ್ರಧಾರನ ಹೆಂಡತಿಯಂತೆ, ಬಂಗಾರ ತೊಟ್ಟು, ಚಿನ್ನ ಧರಿಶಿ, ಕಾಮದೇವಾಲಯದ ಉದ್ಯಾನಕ್ಕೆ ಬಂದಂದಿನಿಂದ ನಿನ್ನಲ್ಲಿ ಅನುರಕ್ತ ಳಾಗಿ ನಾವು ಬಲಾತ್ಕಾರವಾಗಿ ಶಂತೈಶುತಿದ್ದರೂ ಕೂಡ ನಿನ್ನ ಮನೆಗೆ ಹೊಕ್ಕಿದ್ದಾಳೆ ಆದರಿಂದ ಈಗ ನೀನೇ ಖುದ್ದಾಗಿ ಅವಳನ್ನು ಹೊರಡಿಶಿ ಕೂಡಲೆ ನನ್ನ ಕೈಗೆ ಒಪ್ಪಿಶಿದೆ ಎಂದರೆ ನ್ಯಾಯಾಲಯದಲ್ಲಿ ವಿಚಾರಣೆ ಗೊಳಪಡಿಶದೆ ನಿನ್ನನ್ನು ಬಿಡುತ್ತೇನೆ ಅಷ್ಟೆ ಅಲ್ಲ, ನಾನು ನಿನ್ನ ಗೆಳೆಯ ನಾಗುತ್ತೇನೆ ಇಲ್ಲ, ಅವಳನ್ನು ಕಳಿಶಿಲ್ಲ ಎಂದರೆ, ಶಾಯೋ ತನಕ ಈ ವೈರ ಮುಂದುವರೀತದೆ ಅಲ್ಲದೆ ನೋಡು ನೋಡು–

"ತೊಟ್ಟಿಗೆ ಗೋಮಯ ಬಳಿದ ಕುಂಬಳದ ಕಾಯಿ,
ಒಣಗಿಶಿದ ತರಕಾರಿ ಮತ್ತು ಹುರಿದ ಮಾಂಶ,
ಹೇಮಂತದ ಚಳಿಯ ಇರುಳಿನಲಿ ಅಟ್ಟ ಅನ್ನ
ಇವು ಎಷ್ಟು ದಿನ ಶಂದರೂ ಹಳಶುವುದೆ ಇಲ್ಲ" ॥ ೫೧ ॥

ಇಷ್ಟು ಮಾತನ್ನು ಶರಿಯಾಗಿ ಹೇಳಬೇಕು ಕವಡುದನಿಯಲ್ಲಿ ಹೇಳಬೇಕು ನಾನು ನಮ್ಮ ಉಪ್ಪರಿಗೆಯ ಕಡೆಗಟ್ಟಿನಲ್ಲಿ ಕೂತು ಕೇಳುತ್ತೇನೆ. ಎಲ್ಲಿಯಾದರೂ ಹೆಚ್ಚುಕಡಮೆ ಮಾಡಿ ಹೇಳಿದರೆ ಬಾಗಿಲೆಡೆಗೆ ಶಿಕ್ಕ ಶೀಬೇಕಾಯಿಯಂತೆ ನಿನ್ನ ತಲೆ ಶೀದು ಹೋದೀತು–ಜಾಗ್ರತೆ.

**ವಿದೂಷಕ** : ಆಯಿತು, ಹೇಳುತ್ತೇನೆ

**ಶಕಾರ** : (ಚೇಟನಿಗೆ ಮಾತ್ರ ತಿಳಿಯುವಂತೆ) ಚೇಟ, ನಿಜವಾಗಿಯೂ ಭಾವ ಹೋದನೆ?

**ಚೇಟ** ಹೌದು

**ಶಕಾರ** ಹಾಗಾದರೆ ಬೇಗ ಹೋಗೋಣ

**ಚೇಟ** ಹಾಗಾದರೆ ಅಯ್ಯನವರು ಕತ್ತಿ ತೊಗೊಳ್ಳಿ

**ಶಕಾರ** ಇರಲಿ, ನಿನ್ನ ಕೈಯಲ್ಲೆ ಇರಲಿ

**ಚೇಟ** ಇದು ಅಯ್ಯನವರ ಕತ್ತಿ ಅಯ್ಯನವರ ಕೈಯಲ್ಲಿ ಇರಲಿ ತೊಗೊಳ್ಳಿ

**ಶಕಾರ** (ತಿರುವು ಮುರುವಾಗಿ ಹಿಡಿದುಕೊಂಡು)

ಬಟ್ಟೆ ಬಿಚ್ಚಿದ ಬತ್ತಲೆಯಾದ
ಮುಲ್ಲಂಗಿಯಂತೆ ನಶುಕೆಂಪಾದ
ಕತ್ತಿಯನು ಪೊರೆಯೊಳಗೆ ಮಲಗಿಶುತ
ಹೆಗಲಲ್ಲಿ ಹೊತ್ತುಕೊಂಡು
ಹೆಣ್ಣುನಾಯಿಗಳು ಗಂಡುನಾಯಿಗಳು
ಶುತ್ತ ಊಳಿಡುತಿರಲು
ನಾನು ಹೋಗುವೆನು ಮನೆಗೆ ನರಿಯಣ್ಣನಂತೆ! ॥ ೫೨ ॥

(ಇಬ್ಬರೂ ಹೋಗುತ್ತಾರೆ.)

**ವಿದೂಷಕ** ಅವ್ವಾ ರದನಿಕೆ, ನಿನಗಾದ ಈ ಅವಮಾನದ ಸುದ್ದಿಯನ್ನು ಆರ್ಯಚಾರುದತ್ತನ ಬಳಿ ಹೇಳೋದು ಬೇಡ ಮೊದಲೇ ತನ್ನ ದೌರ್ಭಾಗ್ಯಕ್ಕಾಗಿ ದುಃಖಿಸುತ್ತಿರುವ ಆತನಿಗೆ ಇನ್ನಷ್ಟು ಇಮ್ಮಡಿ ಪೀಡೆಯಾದೀತು

**ರದನಿಕೆ** ಅಯ್ಯ ಮೈತ್ರೇಯ, ರದನಿಕೆಯಲ್ಲವಾ ನಾನು? ಬಾಯಿ ಬಿಡೋಲ್ಲ

**ವಿದೂಷಕ** ಅದು ಸರಿ.

**ಚಾರುದತ್ತ** (ವಸಂತಸೇನೆಯನ್ನು ಕುರಿತು) ರದನಿಕೆ, ಕತ್ತಲುಹೊತ್ತು ಗಾಳಿಯಲ್ಲಿ ಆಡುತ್ತಿರುವ ರೋಹಸೇನನಿಗೆ ಶೀತ–ಗೀತ ಆದೀತು ಅವನನ್ನು ಒಳಕ್ಕೆ ಕರೆದುಕೊಂಡು ಹೋಗಿ ಮಲಗಿಸು ಇದನ್ನು ಅವನಿಗೆ ಹೊದೆಸು (ಎಂದು ಶಾಲನ್ನು ಕೊಡುತ್ತಾನೆ )

**ವಸಂತಸೇನೆ** : (ಸ್ವಗತ) ನಾನು ತನ್ನ ಪರಿವಾರದವಳೆಂದೆ ಭಾವಿಸಿಕೊಂಡಂತಿದೆ (ಹೊದಿಕೆಯನ್ನು ತೆಗೆದುಕೊಂಡು, ಮೂಸಿನೋಡಿ, ಬಯಕೆ ತುಂಬಿದ ದನಿಯಲ್ಲಿ ಸ್ವಗತ) ಆಶ್ಚರ್ಯ, ಮಲ್ಲಿಗೆಯ ಕಂಪು ಬಳಿದ ಶಾಲು ಈತನ ಯೌವನದಲ್ಲಿ ಇನ್ನೂ ಹುಮ್ಮಸ ತುಂಬಿಕೊಂಡಂತಿದೆ (ಆತನಿಗೆ ಕಾಣಿಸದಂತೆ ಹೊದ್ದುಕೊಳ್ಳುತ್ತಾಳೆ )

**ಚಾರುದತ್ತ** . ರದನಿಕೆ, ರೋಹಸೇನನನ್ನು ಕರೆದುಕೊಂಡು ಒಳಗೆ ಹೋಗು ಎಂದೆನಲ್ಲ?

**ವಸಂತಸೇನೆ** : (ಸ್ವಗತ) ಒಳಗೆ ಪ್ರವೇಶಿಸುವ ಭಾಗ್ಯ ನನಗೆಲ್ಲಿದೆ?

**ಚಾರುದತ್ತ** ಏನು ರದನಿಕೆ, ಒಂದು ಉತ್ತರ ಕೂಡ ಇಲ್ಲ! ಕಷ್ಟ–
ದೈವ ಮುನಿದಾಗ
ನರನ ಭಾಗ್ಯ ಬರಿದಾದಾಗ
ಹಗೆಗಳಾಗುತ್ತಾರೆ ಗೆಳೆಯರೂ ಕೂಡ
ಮುನಿದುಕೊಳ್ಳುತ್ತಾವೆ ಒಲಿದ ಬಗೆಗಳೂ ಕೂಡ ॥ ೫೩ ॥

(ಪ್ರವೇಶ: ರದನಿಕೆ ಮತ್ತು ವಿದೂಷಕ)

**ವಿದೂಷಕ** . (ಹತ್ತಿರ ಬಂದು) ಓಯ್, ರದನಿಕೆ ಇವಳು, ಇಲ್ಲಿದ್ದಾಳೆ

**ಚಾರುದತ್ತ** : ಇವಳು ರದನಿಕೆ! ಮತ್ತೆ ಈಕೆ ಯಾರು?
ತಿಳಿಯದೆ ನೀಡಿದ ಮೇಲುದದಿಂದ
ದೂಷಿತವಾಯಿತು ಈಕೆಯ ಮೈ

**ವಸಂತಸೇನೆ** (ಸ್ವಗತ) ಇಲ್ಲ, ಭೂಷಿತವಾಯಿತು

**ಚಾರುದತ್ತ** · ಶರತ್‌ಕಾಲದ ಮೋಡ ಮುಚ್ಚಿದ
ಚಂದ್ರಕಲೆಯಂತೆ ಕಾಣುತಿಹಳು ॥ ೫೪ ॥

ಅಥವಾ ಹೆರವರ ಹೆಣ್ಣನ್ನು ಕಾಣುವುದು ತರವಲ್ಲ

**ವಿದೂಷಕ** ಅಯ್ಯಾ, ಹೆರವರ ಹೆಣ್ಣು ಅನ್ನೋ ಭ್ರಾಂತಿ ಬೇಡ ಈಕೆ ವಸಂತಸೇನೆ ಕಾಮದೇವಾಲಯದ ಉದ್ಯಾನದಲ್ಲಿ ನಿನ್ನನ್ನು ಕಂಡಂದಿನಿಂದ ನಿನಗೆ ಮನಸೋತವಳು

**ಚಾರುದತ್ತ** · ಅರೆ, ಇವಳು ವಸಂತಸೇನೆ!

(ಸ್ವಗತ) ನನ್ನ ಸಿರಿಯ ಬಿತ್ತರವೆಲ್ಲ
ಕರಗಿ ಕಣ್ಮರೆಯಾದ ಮೇಲೆ
ಇವಳು ನನ್ನೆದೆಯಲ್ಲಿ ಬಿತ್ತಿದಳು
ಬಯಕೆಯ ಬೀಜವನ್ನು
ನನ್ನೊಳಗೆಯೆ ಕಮರುತ್ತಿದೆ ಅದು
ಕೈಲಾಗದ ತಿಳಿಗೇಡಿಯ ಹೇಡಿಯ ಸಿಟ್ಟಿನಂತೆ ॥ ೫೫ ॥

**ವಿದೂಷಕ** : ಅಯ್ಯ ಗೆಳೆಯ, ಈ ರಾಜನ ಭಾವನಂಟ ಹೇಳುತ್ತಾನೆ:

**ಚಾರುದತ್ತ** : ಏನೆಂದು?

**ವಿದೂಷಕ** : "ಹೊಶ ನಾಟಕದ ಶಿದ್ಧತೆಗೆ ಹೊರಟ ಶೂತ್ರಧಾರನ ಹೆಂಡತಿಯಂತೆ, ಭಂಗಾರ ತೊಟ್ಟು, ಚಿನ್ನ ಧರಿಶಿ, ಈ ಶೂಳೆಯರ ಹುಡುಗಿ ವಶಂತಶೇನೆ ಕಾಮದೇವಾಲಯದ ಉದ್ಯಾನಕ್ಕೆ ಬಂದಂದಿನಿಂದ ನಿನ್ನಲ್ಲಿ ಅನುರಕ್ತಳಾಗಿ, ನಾವು ಬಲಾತ್‌ಕಾರವಾಗಿ ಶಂತೈಶುತ್ತಿದ್ದರು ಕೂಡ ನಿನ್ನ ಮನೆಗೆ ಹೊಕ್ಕಿದ್ದಾಳೆ.. "

**ವಸಂತಸೇನೆ** (ಸ್ವಗತ) "ಬಲಾತ್ಕಾರವಾಗಿ ಸಂತೈಸುತಿದ್ದರು ಕೂಡ!" ಸತ್ಯಕ್ಕೂ ಈ ಮಾತುಗಳಿಂದ ನನಗೆ ಗೌರವ ಸಂದಂತಾಯಿತು

**ವಿದೂಷಕ** "ಅದರಿಂದ ಈಗ ನೀನೇ ಖುದ್ದಾಗಿ ಅವಳನ್ನು ಹೊರಡಿಶಿ ಕೂಡಲೇ ನನ್ನ ಕೈಗೆ ಒಪ್ಪಿಶಿದೆ ಎಂದರೆ ನ್ಯಾಯಾಲಯದಲ್ಲಿ ವಿಚಾರಣೆ ಗೊಳಪಡಿಶದೆ ನಿನ್ನನ್ನು ಬಿಡುತ್ತೇನೆ ಅಷ್ಟೆ ಅಲ್ಲ, ನಾನು ನಿನ್ನ ಗೆಳೆಯ ನಾಗುತ್ತೇನೆ ಇಲ್ಲ, ಅವಳನ್ನು ಕಳಿಶಿಲ್ಲ ಎಂದರೆ ಶಾಯೋ ತನಕ ಈ ವೈರ ಮುಂದುವರೀತದೆ."

**ಚಾರುದತ್ತ** (ತಿರಸ್ಕಾರದಿಂದ) ಅವ ಬರೇ ಹೆಡ್ಡ (ಸ್ವಗತ) ಆಹ್, ದೇವತೆ ಯಂತೆ ಉಪಚರಿಸಬೇಕಾದ ಹೆಣ್ಣು ಈಕೆ ಅದರಿಂದಲೇ ಆಗ–

ಮನೆಯೊಳಗೆ ಹೋಗೆಂದು
ಒತ್ತಾಯ ಪಡಿಸಿದರು ಹೆಜ್ಜೆಯಿಡಲಿಲ್ಲ
ನನ್ನ ಈ ದುರವಸ್ಥೆಯನ್ನು ಕಂಡು
ಗಂಡಸರ ಬಳಿ ತುಂಬ ಸಲುಗೆಯಿಂದ
ಬೇಕಷ್ಟು ಮಾತಾಡಬಲ್ಲವಳು ಆದರೂ
ಸುಮ್ಮನೆಯೆ ನಿಂತಿಹಳು ಮಾತು ಮೂಕವಾಗಿ ॥ ೫೬ ॥

(ಪ್ರಕಾಶ) ವಸಂತಸೇನೆ, ತಿಳಿಯದೆ, ಮನೆಯ ಪರಿಜನರ ಜತೆ ಹೇಗೆ ಹಾಗೆ ನಿನ್ನೊಡನೆ ನಡೆದುಕೊಂಡು ತಪ್ಪು ಮಾಡಿದ್ದೇನೆ ತಲೆ ಬಾಗಿಸಿ ಕ್ಷಮೆ ಕೇಳುತಿದ್ದೇನೆ

**ವಸಂತಸೇನೆ** ಅನುಚಿತವಾದ ಹೆಜ್ಜೆಯಿಟ್ಟು ಮುಂದೆ ಸಾಗಿದ ನಾನೆ ತಪ್ಪು ಗಾರಳು ಅದರಿಂದ ನಾನೆ ನಿನ್ನ ಕ್ಷಮೆ ಕೇಳಬೇಕು

**ವಿದೂಷಕ** . ಓಯ್, ನೀವಿಬ್ಬರೂ ಸುಖವಾಗಿ, ತೂಗಿ ತೊನೆಯುವ ಭತ್ತದ ತೆನೆಯಂತೆ ತಲೆಗೆ ತಲೆ ತಾಗಿಸಿಕೊಂಡಿರಿ ನಾನೂ ಕೂಡ ಒಂಟೆಯ ಮೊಣ ಗಂಟಿನಂತಿರುವ ನನ್ನ ಮೊಂಡುತಲೆಯಿಂದ ನಿಮ್ಮಿಬ್ಬರನ್ನೂ ಸಂತೈಸುತ್ತೇನೆ (ಎಂದು ಏಳುತ್ತಾನೆ )

**ಚಾರುದತ್ತ** : ಇರಲಿ, ಸಾಕು ಸ್ನೇಹದ ಪ್ರದರ್ಶನ

**ವಸಂತಸೇನೆ** : (ಸ್ವಗತ) ಏನು ಚೆಲುವು, ಎಂಥ ಜಾಣ್ಮೆಯ ಮಾತುಗಾರಿಕೆ ಇಂಥ ಸಮಯದಲ್ಲಿ ನಾನು ಇಲ್ಲಿ ಬಂದು ನಿಲ್ಲುವುದು ತರವಲ್ಲ ಇರಲಿ ಹೀಗೆ ಹೇಳುತ್ತೇನೆ. (ಪ್ರಕಾಶ) ಆರ್ಯ, ನಾನು ಅಂಥ ಅನುಗ್ರಹಕ್ಕೆ ಪಾತ್ರಳು ನಿಜವಾದರೆ, ಈ ಚಿನ್ನದ ಒಡವೆಗಳನ್ನು ಆರ್ಯನ ಮನೆಯಲ್ಲಿ ಇಡಬಯಸುತ್ತೇನೆ ಈ ಒಡವೆಗಾಗಿ ಈ ಪಾಪಿಗಳು ನನ್ನ ಬೆನ್ನುಹತ್ತಿವೆ

**ಚಾರುದತ್ತ** : ಒಡವೆಗಳ ನ್ಯಾಸಕ್ಕೆ ಈ ಮನೆ ಯೋಗ್ಯವಲ್ಲ.

**ವಸಂತಸೇನೆ** ಆರ್ಯ, ಇದು ಸುಳ್ಳು ಒಡವೆ ನ್ಯಾಸ ಇಡೋದು ಮನುಷ್ಯರನ್ನು ನೋಡಿ ಹೊರತು ಮನೆಯ ಮೋರೆ ನೋಡಿ ಅಲ್ಲ

**ಚಾರುದತ್ತ** ಮೈತ್ರೇಯ, ತೆಗೆದುಕೊ ಆ ಒಡವೆಗಳನ್ನು

**ವಸಂತಸೇನೆ** ಅನುಗೃಹೀತಳಾದೆ (ಎಂದು ಒಡವೆಗಳನ್ನು ಒಪ್ಪಿಸುತ್ತಾಳೆ)

**ವಿದೂಷಕ** (ತೆಗೆದುಕೊಂಡು) ನಿನಗೆ ದೇವರು ಒಳ್ಳೇದು ಮಾಡಲಿ

**ಚಾರುದತ್ತ** ಮೂರ್ಖ, ಇದು ನ್ಯಾಸ; ನಿನಗೆ ದಾನ ಕೊಟ್ಟದ್ದಲ್ಲ

**ವಿದೂಷಕ** (ಚಾರುದತ್ತನಿಗೆ ಮಾತ್ರ ಕೇಳಿಸುವಂತೆ) ಹಾಗಾದರೆ ಕಳ್ಳರು ಕದ್ದುಕೊಂಡು ಹೋಗಲಿ

**ಚಾರುದತ್ತ** ಸದ್ಯದಲ್ಲೇ–

**ವಿದೂಷಕ** ನೀನಿಟ್ಟ ಈ ಒಡವೆ–

**ಚಾರುದತ್ತ** ನಿನ್ನ ಕೈ ಸೇರುತ್ತದೆ

**ವಸಂತಸೇನೆ** ಆರ್ಯ, ನಾನು ಮನೆ ಸೇರುವ ತನಕ ಈತ ನನ್ನ ಜತೆ ಬಂದಿದ್ದರೆ ಉಪಕಾರವಾಗುತಿತ್ತು

**ಚಾರುದತ್ತ** · ಮೈತ್ರೇಯ, ಆಕೆಯ ಜತೆ ಹೋಗಿ ಬಾ

**ವಿದೂಷಕ** · ಹಂಸಗಾಮಿನಿಯಾದ ಈಕೆಯ ಜತೆ ರಾಜಹಂಸದಂತೆ ನೀನೇ ಹೋದರೆ ಚೆಂದ ನಾನೊ ಹೇಳಿಕೇಳಿ ಬ್ರಾಹ್ಮಣ; ನಾನು ಹೋದರೆ ಬೀದಿಯ ಚೌಕದಲ್ಲಿ ಅಲ್ಲಿ ಇಲ್ಲಿ ಜನ ಎಸೆದ ತಿಂಡಿಯ ಚೂರನ್ನು ಸುತ್ತ ಮುತ್ತಿ ನಾಯಿಗಳು ಕಿತ್ತು ತಿನ್ನುವ ಹಾಗೇ ಆಗುತ್ತೆ ನನ್ನ ಪಾಡು ಕೂಡ

**ಚಾರುದತ್ತ** ಆಗಲಿ, ನಾನೇ ಈಕೆಯ ಜತೆ ಹೋಗುತ್ತೇನೆ ರಾಜ ಮಾರ್ಗದಲ್ಲಿ ಓಡಾಡಲು ಯೋಗ್ಯವಾದಂಥ ದೀವಟಿಗೆಗಳನ್ನು ಹೊತ್ತಿಸು

**ವಿದೂಷಕ** : ವರ್ಧಮಾನಕ, ದೀವಟಿಗೆಗಳನ್ನು ಹೊತ್ತಿಸು

**ಚೇಟಿ** (ಜನಾಂತಿಕ) ಅರೆ, ಎಣ್ಣೆ ಇಲ್ಲದೆಯೆ ದೀವಟಿಗೆ ಉರಿಯುತ್ತೇನು?

**ವಿದೂಷಕ** . (ಜನಾಂತಿಕ) ಆಶ್ಚರ್ಯ! ಅಪಮಾನಕ್ಕೆ ಬಲಿಯಾದ ಬಡವರು ಬಯಸಿ ಬಂದ ಸೂಳೆಯರಂತೆ ನಮ್ಮ ದೀವಟಿಗೆಗಳಲ್ಲು ಪಸೆಯಿಲ್ಲವಾಗಿದೆ!

**ಚಾರುದತ್ತ** . ಮೈತ್ರೇಯ, ಇರಲಿ, ದೀವಟಿಗೆಗಳ ಗೋಜು ಬೇಡ ನೋಡು–

ಹುಡುಗೆಯರ ಕೆನ್ನೆಯೊಲು
ಬೆಳ್ಳನೆಯ ಚಂದ್ರಮನೆ
ಮೂಡಿಬಂದಿದ್ದಾನೆ
ಹೆದ್ದಾರಿಯ ಹಿರಿಯ ದೀಪವಾಗಿ.
ಸುತ್ತ ತಾರಕೆಗಳ ಕಿರು ಹಣತೆಯುಂಟು
ಕತ್ತಲೆಯ ಮೊತ್ತದಲವನ

ಬಿಳಿಕಿರಣ ತೂರುತಿದೆ
ನೀರಿಂಗಿದ ಕೆಸರ ಮುದ್ದೆಯ ಮೇಲೆ
ಹಾಲಿನ ತೊರೆ ಹರಿದಂತೆ! ॥ ೫೭ ॥

(ನಲ್ಮೆಯಿಂದ) ವಸಂತಸೇನೆ, ಇದೊ ನಿನ್ನ ಮನೆ ಒಳಗೆ ಹೋಗಮ್ಮ

**ವಸಂತಸೇನೆ** : (ಪ್ರೀತಿತುಂಬಿದ ನೋಟದಿಂದ ಚಾರುದತ್ತನನ್ನೆ ನೋಡುತ್ತ ಹೋಗುತ್ತಾಳೆ )

**ಚಾರುದತ್ತ** ಗೆಳೆಯ, ವಸಂತಸೇನೆ ಹೋದಳು ಬಾ, ನಾವೂ ಮನೆಗೆ ಹೋಗೋಣ

ಹೆದ್ದಾರಿಯೊ ಬರಿದಾಗಿದೆ
ಕಾವಲುದಳ ತಿರುಗುತ್ತಿದೆ
ಮೋಸಕೆ ಬಲಿ ಬೀಳದ ತೆರ
ಎಚ್ಚರವಾಗಿರಬೇಕು
ಯಾವಾಗಲು ಇರುಳೆಂದರೆ
ತೊಂದರೆಗಳ ತವರು ॥ ೫೮ ॥

(ಎರಡು ಹೆಜ್ಜೆ ನಡೆದು) ಈ ಚಿನ್ನದ ಒಡವೆಗಳನ್ನು ರಾತ್ರಿಯೆಲ್ಲ ನೀನು ಕಾಯಬೇಕು ಹಗಲು ಕಾಯುವ ಹೊಣೆ ವರ್ಧಮಾನಕನದ್ದು

**ವಿದೂಷಕ** : ನಿನ್ನ ಅಪ್ಪಣೆಯಂತೆಯೆ ಆಗಲಿ

(ಎಂದು ಇಬ್ಬರೂ ಹೋಗುತ್ತಾರೆ )

**'ಒಡವೆಯ ಒತ್ತೆ' ಎನ್ನುವ**

**ಮೊದಲನೆಯ ಅಂಕ**

**ಮುಗಿಯಿತು**

## ಅಂಕ : ಎರಡು

## ಜೂಜುಕೋರ ಸಂವಾಹಕ

**ಚೇಟಿ** (ಪ್ರವೇಶಿಸಿ) ಅಮ್ಮನವರು ಒಡತಿಗೊಂದು ಸಂದೇಶ ಕೊಟ್ಟು ಕಳಿಸಿದ್ದಾರೆ ಯಾವುದಕ್ಕು ಒಡತಿಯ ಬಳಿ ಹೋಗ್ತೀನಿ (ನಡೆದು ಹೋಗಿ, ನೋಡಿ) ಒಡತಿ ಇಲ್ಲೆ ಮನದ ಪುಟದಲ್ಲಿ ಏನನ್ನೊ ಬರೆಯುತ್ತ ಕುಳಿತಿದ್ದಾಳೆ ಬಳಿಗೆ ಹೋಗುತ್ತೇನೆ

(ಪ್ರವೇಶ: ಆಸನದಲ್ಲಿ ಕುಳಿತಿರುವ, ಉತ್ಕಂಠಿತಳಾದ ವಸಂತಸೇನೆ ಮತ್ತು ಮದನಿಕೆ )

**ವಸಂತಸೇನೆ** ಚೇಟಿ, ಆಮೇಲೆ? ಆಮೇಲೆ?

**ಮದನಿಕೆ** ಒಡತಿ, ಯಾವುದರ ಬಗ್ಗೆಯೂ ನಾವು ಮಾತನಾಡುತ್ತಿರಲಿಲ್ಲ ಯಾವುದರ 'ಆಮೇಲೆ'?

**ವಸಂತಸೇನೆ** · ನಾನು ಏನು ಹೇಳಿದೆ?

**ಮದನಿಕೆ** ಆಮೇಲೆ ಆಮೇಲೆ ಎಂದೆ

**ವಸಂತಸೇನೆ** : (ಗಂಭೀರವಾಗಿ ಹುಬ್ಬು ಗಂಟಿಕ್ಕಿಕೊಂಡು) ಹ್ಞಾ, ಹೌದು

**ಚೇಟಿ** (ಬಳಿ ಬಂದು) ಒಡತಿ, ಅಮ್ಮನವರು ಹೇಳುತ್ತಾರೆ: ಮಿಂದು ದೇವರ ಪೂಜೆ ಮುಗಿಸಬೇಕಂತೆ

**ವಸಂತಸೇನೆ** : ಚೇಟಿ, ತಾಯಿಗೆ ಹೇಳು: ಇವತ್ತು ನಾನು ಮಿಯೋದಿಲ್ಲ ಅದರಿಂದ ಬ್ರಾಹ್ಮಣನೆ ಪೂಜೆಮಾಡಿ ಮುಗಿಸಲಿ

**ಚೇಟಿ** · ಅಪ್ಪಣೆ (ಎಂದು ಹೋಗುತ್ತಾಳೆ.)

**ಮದನಿಕೆ** : ಒಡತಿ, ತಪ್ಪು ಹುಡುಕುವುದಕ್ಕಾಗಿ ಅಲ್ಲ, ಸ್ನೇಹಕ್ಕಾಗಿ ಕೇಳ್ತಿದೇನೆ ಏನಿದು?

**ವಸಂತಸೇನೆ** . ಮದನಿಕೆ, ನನ್ನನ್ನು ಕಂಡಾಗ ನಿನಗೆ ಹೇಗೆ ಅನ್ನಿಸುತ್ತೆ?

**ಮದನಿಕೆ** : ಒಡತಿಯ ಶೂನ್ಯವಾದ ಬಗೆಯನ್ನು ನೋಡಿದರೆ ಒಡತಿಯ ಹೃದಯ ಯಾರನ್ನೊ ಬಯಸುತ್ತಿರುವಂತಿದೆ

**ವಸಂತಸೇನೆ** ಸರಿಯಾಗಿ ತಿಳಿದುಕೊಂಡೆ ಇನ್ನೊಬ್ಬರ ಬಗೆಯ ಸೂಕ್ಷ್ಮವನ್ನು ಅರಿಯಬಲ್ಲ ಚದುರೆ ಮದನಿಕೆಯಲ್ಲವೆ ನೀನು?

**ಮದನಿಕೆ** . ನನಗೆ ಪ್ರಿಯವಾದ ಸುದ್ದಿ. ಪ್ರಾಯದ ಹುಡುಗರಿಗೆ ಮಹೋತ್ಸವದ ಸಂತಸ ಉಣಿಸುವ ಭಗವಾನ್ ಕಾಮದೇವನ ಮೇಲೆ ಅನುಗ್ರಹ ಮಾಡಿದಂತಾಯಿತು ಯಾರು ಒಡತಿ ನಿನ್ನ ಬಗೆಯನ್ನು ಕದ್ದವನು? ರಾಜ?

ಅಥವ, ರಾಜನಿಗೆ ಹತ್ತಿರದ ಬಂಧುಗಳು ಯಾರಾದರೂ? ಯಾರನ್ನು ಸೇವಿಸ ಬಯಸುವೆ?

**ವಸಂತಸೇನೆ** . ಚೇಟಿ, ಸೇವೆ ಮಾಡೋದಕ್ಕಲ್ಲ ನಾನು ಬಯಸೋದು ಗಂಡನ್ನು ರಮಿಸಬೇಕೂಂತ ಬಯಕೆ

**ಮದನಿಕೆ** : ಭಾರೀ ವಿದ್ವಾಂಸನಾದ ಬ್ರಾಹ್ಮಣರ ಹುಡುಗ ಯಾರಾದರೂ ಕಣ್ಣಿಗೆ ಬಿದ್ದನೆ?

**ವಸಂತಸೇನೆ** : ಬ್ರಾಹ್ಮಣರು ನನಗೆ ಪೂಜಾರ್ಹರು

**ಮದನಿಕೆ** . ಹಾಗಾದರೆ ದೊಡ್ಡ ದೊಡ್ಡ ಊರುಗಳಲ್ಲಿ ತಿರುಗಾಡಿ ಬೇಕಷ್ಟು ಸಂಪತ್ತು ಗಳಿಸಿದ ಯಾರಾದರೂ ವ್ಯಾಪಾರೀ ತರುಣ?

**ವಸಂತಸೇನೆ** : ಚೇಟಿ, ಒಲವು ತುಂಬಿದ ನಲ್ಲೆಯನ್ನು ಮನೆಯಲ್ಲಿ ಬಿಟ್ಟು ಊರಿಂದೂರಿಗೆ ಅಲೆಯುವ ಈ ವ್ಯಾಪಾರೀ ಜನ ಹೆಣ್ಮಕ್ಕಳಿಗೆ ವಿರಹದ ಅಸಹ್ಯವೇದನೆಯನ್ನಷ್ಟೆ ನೀಡಬಲ್ಲರು

**ಮದನಿಕೆ** . ರಾಜನಲ್ಲ; ರಾಜನಿಗೆ ಬೇಕಾದ ದೊಡ್ಮನುಷ್ಯರೂ ಅಲ್ಲ; ಬ್ರಾಹ್ಮಣ ಅಲ್ಲ; ವ್ಯಾಪಾರೀ ಮಂದಿಯೂ ಅಲ್ಲ ಮತ್ತೆ ಒಡತಿಯ ಬಗೆ ಕದ್ದವನು ಯಾರವನು?

**ವಸಂತಸೇನೆ** : ಚೇಟಿ, ನೀನು ನನ್ನ ಜತೆಗೆ ಕಾಮದೇವಾಲಯದ ಉದ್ಯಾನಕ್ಕೆ ಹೋಗಿದ್ದೆಯಲ್ಲ?

**ಮದನಿಕೆ** : ಹೌದು, ಹೋಗಿದ್ದೆ.

**ವಸಂತಸೇನೆ** ಮತ್ತೇಕೆ ಗೊತ್ತಿದ್ದೂ ಏನೂ ತಿಳಿಯದವಳಂತೆ ನನ್ನನ್ನು ಕೇಳುತ್ತಿರುವೆ?

**ಮದನಿಕೆ** ತಿಳಿಯಿತು ಒಡತಿ ಅಂದು ಆತನ ಮನೆಯಲ್ಲಿ ಶರಣಾದಾಗ ಸತ್ಕರಿಸಿದವನಲ್ಲವೆ?

**ವಸಂತಸೇನೆ** : ಆತನ ಹೆಸರೇನೆ?

**ಮದನಿಕೆ** : ಸಾವುಕಾರ್‍ರ ಕೇರಿಯಲ್ಲಿ ಅಲ್ಲವಾ ಆತ ಇರೋದು!

**ವಸಂತಸೇನೆ** : ಅಲ್ಲಾ, ಆತನ ಹೆಸರೇನೂಂತ ಕೇಳಿದೆ.

**ಮದನಿಕೆ** : ಒಡತಿ, ಆರ್ಯಚಾರುದತ್ತ ಎಂದಲ್ಲವೆ? ಆತನ ಹೆಸರು ಯಾರಿಗೆ ಗೊತ್ತಿಲ್ಲ?

**ವಸಂತಸೇನೆ** : (ಆನಂದದಿಂದ) ಚೆನ್ನು ಚೆನ್ನು. ನಿನ್ನೂಹೆ ಸರಿ.

**ಮದನಿಕೆ** : (ಸ್ವಗತ) ಹೀಗೆ ಮಾತು ಬೆಳೆಸ್ತೇನೆ (ಪ್ರಕಾಶ) ಒಡತಿ, ಆತ ತೀರ ಬಡವ ಎಂದು ಕೇಳಿದ್ದೇನೆ.

**ವಸಂತಸೇನೆ** · ಅದರಿಂದಲೇ ಆತನ ಮೇಲೆ ನನಗೆ ಪ್ರೀತಿ ಬಡವನನ್ನು ಸೂಳೆ ಬಯಸಿದಾಗ ಜನ ಆಡಿಕೊಳ್ಳೋದಕ್ಕೆ ಅವಕಾಶ ಇರೋದಿಲ್ಲ

**ಮದನಿಕೆ** ಒಡತಿ, ಹೂವುದುರಿದ ಮಾವಿನ ಗಿಡದತ್ತ ಮರಿದುಂಬಿ ಮತ್ತೆ ಸುಳಿವುದುಂಟಾ?

**ವಸಂತಸೇನೆ** : ಅವುಗಳಿಗೆ ಕೂಡಿಟ್ಟು ಗೊತ್ತು; ಸವಿದು ಗೊತ್ತಿಲ್ಲ

**ಮದನಿಕೆ** : ಒಡತಿ, ಅವನೆ ಬೇಕೆಂದಿದ್ದರೆ ನೇರವಾಗಿ ಅವನ ಬಳಿಗೆಯೆ ಏಕೆ ಹೋಗಿಬಿಡಬಾರದು?

**ವಸಂತಸೇನೆ** . ಚೇಟಿ, ನಾನು ನೇರ ಹೋದೆನೆಂದರೆ, ಒಂದು ವೇಳೆ ಆತನಿಗೆ ನನ್ನ ಕೊಡುಗೆಯನ್ನು ಒಪ್ಪಿ ನಡೆಯಲು ಸಾಧ್ಯವಾಗದೆ ಆ ಸಂಕೋಚದಿಂದ ಆತ ದೂರ ಸರಿದು ಎಂದೆಂದಿಗೂ ನಾನು ಆತನಿಂದ ವಂಚಿತಳಾಗುವಂತಾದರೆ?

**ಮದನಿಕೆ** : ಅದಕೆಂದೆ ಆ ಆಭರಣವನ್ನು ಆತನ ಕೈಯಲ್ಲಿ ಒಪ್ಪಿಸಿದ್ದೇನು?

**ವಸಂತಸೇನೆ** : ಚೇಟಿ, ಸರಿಯಾಗಿಯೆ ಊಹಿಸಿದೆ

* * * * *

(ತೆರೆಯ ಮರೆಯಲ್ಲಿ)

ಅಯ್ಯೋ, ಹತ್ತು ರೂಪಾಯಿ ಪಣಕ್ಕಿಟ್ಟು ಸೋತ ಜೂಜುಕೋರ ಓಡ್ತಾ ಇದಾನೆ, ಓಡ್ತಾ ಇದಾನೆ ಹಿಡಿ, ಹಿಡಿ, ನಿಲ್ಲು, ನಿಲ್ಲು ದೂರದಲ್ಲಿ ಕಾಣಿಸ್ತಾ ಇದೀಯಾ!

(ಪರದೆಯನ್ನು ತಳ್ಳಿ ಸಂವಾಹಕನ ಪ್ರವೇಶ)

**ಸಂವಾಹಕ** : (ಸಂಭ್ರಾಂತನಾಗಿ) ಓಹ್, ಈ ಜೂಜು ಭಾರೀ ತಾಪತ್ರಯದ ಕೆಲಸವಯ್ಯಾ –

ಹೊಸದಾಗಿ ಕಟ್ಟು ಕಳಚಿದ ಕತ್ತೆಯಂತೆ
ಆಟದ ಕತ್ತೆ ಕವಡೆ ಕೂಡ ಲತ್ತೆ ಕೊಟ್ಟಿತು ನನಗೆ!
ಕರ್ಣನೆಸೆದ ಶಕ್ತ್ಯಾಯುಧಕ್ಕೆ
ಉರುಳಿದಂತೆ ಘಟೋತ್ಕಚ
ಶಕ್ತಿಕವಡೆಯ ಹೊಡೆತ ತಿಂದು ಬಂದೆ! ॥ ೧ ॥

ಜೂಜಿನ ಮನೆಯ ಯಜಮಾನ
ಲೆಕ್ಕ ಹಾಕುವುದನ್ನು ಕಂಡು
ಕಣ್ಣು ತಪ್ಪಿಸಿ ಓಡಿಬಂದೆ!
ಈಗಂತು ಬೀದಿಪಾಲಾಗಿರುವೆ ನಾನು
ಇಂಥಲ್ಲಿ ಯಾರನ್ನು ಮರೆಹೋಗಲಿ ॥ ೨ ॥

ಈ ಜೂಜುಗಾರ ಮತ್ತು ಈ ಜೂಜುಕೋರ ಇಬ್ಬರೂ ಬೇರೆಡೆ ನನ್ನನ್ನು ಹುಡುಕುತ್ತಿರುವಷ್ಟರಲ್ಲಿ ನಾನು ತಿರುವುಮುರುವಾಗಿ ನಡೆದು ಈ ಹಾಳು ದೇವಾಲಯವನ್ನು ಹೊಕ್ಕು ದೇವರ ಪ್ರತಿಮೆಯಾಗಿ ಬಿಡುತ್ತೇನೆ (ನಾಟ್ಯದಿಂದ ಹೆಜ್ಜೆಯಿಡುತ್ತ ಹಾಗೆ ನಿಲ್ಲುತ್ತಾನೆ )

(ಪ್ರವೇಶ: ಮಾಥುರ ಮತ್ತು ಜೂಜುಕೋರ)

**ಮಾಥುರ** ಅಯ್ಯೋ, ಹತ್ತು ರೂಪಾಯಿ ಪಣಕ್ಕಿಟ್ಟು ಸೋತ ಜೂಜುಕೋರ ಓಡ್ತಾ ಇದಾನೆ, ಓಡ್ತಾ ಇದಾನೆ ಹಿಡಿ, ಹಿಡಿ, ನಿಲ್ಲು, ನಿಲ್ಲು ದೂರದಲ್ಲಿ ಕಾಣಿಸ್ತಾ ಇದೀಯಾ

**ಜೂಜುಕೋರ** · ಬೇಕಿದ್ದರೆ ಪಾತಾಲಕೆ ಹೋಗು
ಇಲ್ಲ, ದೇವೇಂದ್ರನಿಗೆ ಶರಣಾಗು
ಜೂಜುಕೋರನೊಬ್ಬನನ್ನು ಬಿಟ್ಟರೆ
ರುದ್ರ ಕೂಡ ನಿನ್ನನೀಗ ಕಾಯಲಾರನು! ॥ ೩ ॥

**ಮಾಥುರ** ಎಲ್ಲಿ ಎಲ್ಲಿ ಓಡುತಿರುವೆ ಹೆದರಿ ನಡುಗುತ
ಜೂಜುಗಾರನಾದ ನನಗೆ ವಂಚನೆಯ ಮಾಡುತ
ತತ್ತರಿಸುವ ಹೆಜ್ಜೆಗಳನು ಮುಂದು ಹಿಂದಕೆಳೆಯುತ
ನಿನ್ನ ಕುಲದ ಕೀರ್ತಿಗಷ್ಟು ಕಪ್ಪು ಮಸಿಯ ಬಳಿಯುತ?
॥ ೪ ॥

**ಜೂಜುಕೋರ** (ಹೆಜ್ಜೆ ಗುರುತು ನೋಡಿ)ಇಲ್ಲಿ ನಡೆದ ಗುರುತುಂಟು ಇಲ್ಲಿ ಹೆಜ್ಜೆ ಮಾಯವಾಗಿದೆ

**ಮಾಥುರ** . (ನೋಡಿ, ತರ್ಕಿಸುತ್ತ)ಅರೆ, ಕಾಲುಗುರುತು ತಿರುವು ಮುರುವಾಗಿದೆ ಇದಂತು ಪ್ರತಿಮೆಯಿಲ್ಲದ ಹಾಳು ದೇವಾಲಯ. (ಆಲೋಚಿಸಿ) ಧೂರ್ತನಾದ ಜೂಜುಕೋರ ತಿರುವು ಮುರುವಾಗಿ ನಡೆದು ದೇವಾಲಯ ಹೊಕ್ಕಿದ್ದಾನೆ

**ಜೂಜುಕೋರ** : ಹಾಗಾದರೆ ಅಲ್ಲಿಗೇ ಹೋಗೋಣ

**ಮಾಥುರ** : ಹಾಗೆಯೆ ಆಗಲಿ

(ಇಬ್ಬರೂ ದೇವಾಲಯವನ್ನು ಪ್ರವೇಶಿಸುವಂತೆ ನಟಿಸುತ್ತಾರೆ ನೋಡಿ ಪರಸ್ಪರ ಸಂಕೇತ ಮಾಡಿಕೊಂಡು-)

**ಜೂಜುಕೋರ** : ಏನು, ಇದು ಬರೀ ಮರದ ಬೊಂಬೆ!

**ಮಾಥುರ** ಅಲ್ಲವಯ್ಯ ಅಲ್ಲ ಕಲ್ಲಿನ ಬೊಂಬೆ (ಬಹುವಿಧವಾಗಿ ನಲುಗಿಸಿ ನೋಡಿ, ಸನ್ನೆ ಮಾಡುತ್ತ) ಇರಲಿ, ಬಾ, ಜೂಜಾಡೋಣ. (ಎಂದು ವಿಧವಿಧವಾಗಿ ಜೂಜಾಡುತ್ತಾರೆ )

**ಸಂವಾಹಕ** · (ಜೂಜಿನ ಬಯಕೆಯನ್ನು ಬಹುಕಷ್ಟದಿಂದ ತಡೆಹಿಡಿದು, ಸ್ವಗತ) ಅರೇ,

ಈ ದಾಳದ ಕವಡೆಯ ಸದ್ದು
ಕೈಯಲಿ ಕಾಸಿಲ್ಲದ ಜನದ ಕಿವಿಗೆ ಬಿದ್ದು
ಗಾಸಿಗೊಳಿಸುತಿದೆ ಒಳಬಗೆಯನ್ನು
ರಾಜ್ಯ ಕೈತಪ್ಪಿರುವ ರಾಜನೊಬ್ಬನ ಮುಂದೆ
ಭೇರಿ ಬಾರಿಸಿದಂತೆ!
ಈ ಜೂಜಿನಾಟ—
ಮೇರುವಿನ ಮೇಲೇರಿ
ಶಿಖರದೆತ್ತರದಿಂದ ಕೆಳಗೆ ಹಾರುವ ಹೂಟ
ನಾ ಬಲ್ಲೆ—
ಇನ್ನದನು ಎಂದಿಗೂ ಆಡಲೊಲ್ಲೆ
ಆದರೂ ಕೋಗಿಲೆಯ ಕೊರಳಿನಂತೆ
ಇಂಪಾದ ಈ ಕವಡೆದಾಳದ ದನಿ
ಬಗೆಯನ್ನು ಕದಿಯುತಿದೆ || ೬ ||

**ಜೂಜುಕೋರ** ನನ್ನ ಕಡೆಗೆ ಬಿತ್ತು; ನನ್ನ ಕಡೆಗೆ

**ಮಾಥುರ** · ಅಲ್ಲ, ನನ್ನ ಕಡೆಗೆ, ನನ್ನ ಕಡೆಗೆ

**ಸಂವಾಹಕ** (ಪಕ್ಕನೆ ಮುಂದೆ ಬಂದು) ನಿಜವಾಗಿಯಾದರೆ ನನ್ನ ಕಡೆಗೆ

**ಜೂಜುಕೋರ** . ಮನುಷ್ಯ ಸಿಕ್ಕಿದ

**ಮಾಥುರ** (ಹಿಡಿದುಕೊಂಡು) ಅರೇ ಪೆದ್ದಣ್ಣಾ, ಸಿಕ್ಕಿಬಿದ್ದೆ ಆ ಹತ್ತು ರೂಪಾಯಿ ಕೊಡು

**ಸಂವಾಹಕ** ಈಗ ಕೊಡ್ತೇನೆ

**ಮಾಥುರ** · ಈ ಕ್ಷಣ ಕೊಡು

**ಸಂವಾಹಕ** : ಕೊಡ್ತೇನೆ ಕೊಂಚ ಕೃಪೆ ಮಾಡು

**ಮಾಥುರ** · ಅರೆ, ಈಗಲೇ ಕೊಡಯ್ಯ.

**ಸಂವಾಹಕ** · ತಲೆ ತಿರುಗ್ತಾ ಇದೆ (ಎಂದು ನೆಲದಲ್ಲಿ ಕುಸಿಯುತ್ತಾನೆ )

(ಇಬ್ಬರೂ ಬಹಳವಾಗಿ ಹೊಡೆಯುತ್ತಾರೆ.)

**ಮಾಥುರ** ಜೂಜುಕೋರ ಮಂಡಲಿಯಿಂದ ನೀನೀಗ ಬಂಧನಕ್ಕೊಳಗಾಗಿರುವೆ

**ಸಂವಾಹಕ** : (ಎದ್ದು, ವಿಷಾದದಿಂದ) ಜೂಜುಕೋರ ಮಂಡಲಿಯಿಂದ ಬಂಧನಕ್ಕೊಳಗಾದೆನೆ? ಕಷ್ಟ! ಇದು ಜೂಜುಕೋರರಿಗೆ ಉಲ್ಲಂಘಿಸಲಾಗದ ನಿಯತ್ತು ಆದರೆ ನಾನೆಲ್ಲಿಂದ ಕೊಡಲಿ?

**ಮಾಥುರ** : ಅರೇ, ಒತ್ತೆಯಿಡಯ್ಯ ಒತ್ತೆ.

**ಸಂವಾಹಕ** ಹಾಗೇ ಮಾಡ್ತೇನೆ (ಜೂಜುಕೋರನನ್ನು ಮುಟ್ಟಿಕೊಂಡು) ಅರ್ಧ ನಿನಗೆ ಕೊಡ್ತೇನೆ ಅರ್ಧ ನನಗೆ ಬಿಟ್ಬಿಡು

**ಜೂಜುಕೋರ** ಹಾಗೇ ಆಗಲಿ

**ಸಂವಾಹಕ** . (ಜೂಜುಗಾರನ ಬಳಿ ಬಂದು) ಅರ್ಧ ಒತ್ತೆಯಿಡ್ತೇನೆ ಅರ್ಧವನ್ನು ನನಗೆ ಮಾಫಿ ಮಾಡಿಬಿಡಯ್ಯ

**ಮಾಥುರ** ತಪ್ಪೇನು? ಹಾಗೇ ಆಗಲಿ

**ಸಂವಾಹಕ** (ಗಟ್ಟಿಯಾಗಿ) ಅಯ್ಯ, ನೀನು ಅರ್ಧ ಬಿಟ್ಬಿದ್ದೀಯಾ

**ಮಾಥುರ** · ಬಿಟ್ಬಿದ್ದೇನೆ

**ಸಂವಾಹಕ** (ಜೂಜುಕೋರನನ್ನು ಕುರಿತು) ನೀನೂ ಅರ್ಧ ಬಿಟ್ಬಿದ್ದೀಯಾ

**ಜೂಜುಕೋರ** : ಬಿಟ್ಬಿದ್ದೇನೆ

**ಸಂವಾಹಕ** · ಹಾಗಾದರೆ ನಾನೀಗ ಹೋಗ್ತೇನೆ

**ಮಾಥುರ** . ಆ ಹತ್ತು ರೂಪಾಯಿ ಕೊಡು ಹಾಗೇ ಎಲ್ಲಿಗೆ ಹೋಗೋದು?

**ಸಂವಾಹಕ** . ನೋಡಿ ಸ್ವಾಮಿ, ನೋಡಿ ಅಯ್ಯಯ್ಯೋ, ಈಗಷ್ಟೆ ಅರ್ಧಕ್ಕೆ ಒತ್ತೆ ಮಾಡಿದ್ದು, ಇನ್ನರ್ಧ ಬಿಟ್ಟದ್ದು ಈಗ ಮತ್ತೆ ಕೈಸಾಗದ ನನ್ನ ಬಳಿ ದುಡ್ಡು ಕೇಳ್ತಾ ಇದಾನೆ

**ಮಾಥುರ** . (ರಟ್ಟೆ ಹಿಡಿದು) ಧೂರ್ತ, ನೆನಪಿರಲಿ ನಾನು ಮಾಥುರ ನಿನ್ನ ಕೈಯಲ್ಲಿ ಬೇಸ್ತು ಬೀಳುವಷ್ಟು ದಡ್ಡ ಅಲ್ಲ. ಮೋಸಗಾರ, ಮೊದಲು ಆ ಹತ್ತು ರೂಪಾಯಿಗಳನ್ನು ಪೂರಾ ಕೊಟ್ಬುಬಿಡು

**ಸಂವಾಹಕ** . ಎಲ್ಲಿಂದ ಕೊಡೋದು?

**ಮಾಥುರ** : ನಿನ್ನಪ್ಪನನ್ನು ಮಾರಿ ಕೊಡು

**ಸಂವಾಹಕ** · ನನ್ನಪ್ಪನನ್ನು ಎಲ್ಲಿಂದ ತರೋದು?

**ಮಾಥುರ** : ಹಾಗಾದರೆ ತಾಯಿಯನ್ನು ಮಾರಿ ಕೊಡು.

**ಸಂವಾಹಕ** . ತಾಯಿಯನ್ನು ಮತ್ತೆ ಎಲ್ಲಿಂದ ತರೋದು?

**ಮಾಥುರ** · ಹಾಗಾದರೆ ನಿನ್ನನ್ನೆ ಮಾರಿಕೊಡು.

**ಸಂವಾಹಕ** : ನನ್ನ ಮೇಲೆ ಕೊಂಚ ದಯಮಾಡಿ ನನ್ನನ್ನು ಹೆದ್ದಾರಿಗೆ ಕರಕೊಂಡು ಹೋಗಿ

**ಮಾಥುರ** : ನಡಿ ಮುಂದೆ.

**ಸಂವಾಹಕ** : ಆಗಲಿ (ನಡೆಯುತ್ತಾನೆ.) ಸ್ವಾಮಿ ಅಯ್ಯಾ, ಈ ಜೂಜುಗಾರನ ಕೈಯಿಂದ ಹತ್ತು ರೂಪಾಯಿಗಳಿಗೆ ನನ್ನನ್ನು ಕೊಂಡು ಕೊಳ್ಳಿರಿ (ನೋಡಿ, ಆಕಾಶದತ್ತ ಮೊರೆ ಮಾಡಿ) ಏನೆಂದಿರಿ? ಏನು ಕೆಲಸ ಮಾಡುತ್ತಿ ಎಂದಿರಾ?

ನಿಮ್ಮ ಮನೆ ಕೆಲಸ ಮಾಡ್ತೇನೆ ಏನು? ಉತ್ತರ ಕೊಡದೆಯೆ ಹೊರಟು ಹೋದರೆ? ಇರಲಿ ಈತನನ್ನು ಕೇಳುತ್ತೇನೆ: ಸ್ವಾಮಿ ಅಯ್ಯ, ಈ ಜೂಜುಗಾರನ ಕೈಯಿಂದ ಹತ್ತು ರೂಪಾಯಿಗಳಿಗೆ ನನ್ನನ್ನು ಕೊಂಡುಕೊಳ್ಳಿರಿ ಏನು, ಈತನೂ ನನ್ನ ಮಾತು ಕೇಳಿಸದವರಂತೆ ಹೊರಟು ಹೋದನೆ? ಹಾಯ್, ಆರ್ಯ ಚಾರುದತ್ತನ ಸಂಪತ್ತು ಹೋದದ್ದೇ ನನ್ನ ಅವಸ್ಥೆ ಇಲ್ಲಿಗೆ ಬಂತು!

**ಮಾಥುರ** ಕೊಡಯ್ಯ

**ಸಂವಾಹಕ** ಎಲ್ಲಿಂದ ಕೊಡೋದು? (ಎಂದು ಅಡ್ಡಬೀಳುತ್ತಾನೆ)

(ಮಾಥುರ ಎಳೆಯುತ್ತಾನೆ)

**ಸಂವಾಹಕ** ಸ್ವಾಮಿ, ಕಾಪಾಡಿ, ಕಾಪಾಡಿ

(ದರ್ದುರಕನ ಪ್ರವೇಶ)

**ದರ್ದುರಕ** . ಓಯ್, ಈ ಜೂಜೆಂದರೆ ಮನುಷ್ಯನಿಗೆ ಸಿಂಹಾಸನವಿಲ್ಲದ ಸಾಮ್ರಾಜ್ಯ–

ಯಾರಿಂದಲೂ ಸೋಲನ್ನು ಲೆಕ್ಕಿಸುವುದಿಲ್ಲ
ಪಡೆವುದು ಕೊಡುವುದು ದಿನವು ಹಣದ ರಾಶಿಯನ್ನು
ರಾಜನಂತನುದಿನವು ಆದಾಯದಲಿ ಕಣ್ಣು
ದುಡ್ಡಿದ್ದ ದೊಡ್ಡವರ ಮೋಜು ಈ ಜೂಜು ॥ ೭ ॥

ಅಲ್ಲದೆ–

ಹಣ ದೊರಕಿದ್ದೂ ಜೂಜಿನಿಂದ
ಹೆಂಡತಿ–ಗೆಳೆಯರೂ ಜೂಜಿನಿಂದ
ಕೊಟ್ಟದ್ದು ತಿಂದದ್ದು ಜೂಜಿನಿಂದ
ಎಲ್ಲ ಕಳಕೊಂಡದ್ದೂ ಜೂಜಿನಿಂದ ॥ ೮ ॥

ಅಲ್ಲದೆ,

ಮೂರನೆಯ ಕವಡೆ ಆಟದಲಿ ಕೈಕೊಡಲು ಎಲ್ಲವನು ಕಳೆದುಕೊಂಡೆ
ಎರಡನೆಯ ಕವಡೆ ತಪ್ಪಿಬೀಳಲು ಮೈಯ ಕಸುವನ್ನೆ ಕಳೆದುಕೊಂಡೆ
ಕೊನೆಗೆ ಎಕ್ಕದ ದಾರಿ ಹಿಡಿದು ಸಾಗುತ್ತಿರಲು
ನಾಲ್ಕನೆಯ ಕವಡೆ ಸಂಪೂರ್ಣವಾಗಿ ಕೆಡವಿಹಾಕಿತ್ತು! ॥ ೯ ॥

(ಎದುರುಗಡೆ ನೋಡಿ) ಇವನು ನಮ್ಮ ಹಳೆಯ ಜೂಜುಮನೆಯ ಯಜಮಾನ ಮಾಥುರ ಇತ್ತ ಕಡೆಯೆ ಬರುತಿದ್ದಾನೆ ಇರಲಿ ತಪ್ಪಿಸಿಕೊಂಡು ಹೋಗೋದಂತು ಶಕ್ಯವಿಲ್ಲ ಅದರಿಂದ ಮೋರೆಗೆ ಬಟ್ಟೆ ಮರೆ ಮಾಡಿಕೊಳ್ಳುತ್ತೇನೆ. (ಬಹು ವಿಧವಾಗಿ ನಾಟ್ಯವಾಡುತ್ತ ನಿಲ್ಲುತ್ತಾನೆ ಮೇಲುದವನ್ನು ಕಂಡು–)

ಈ ಬಟ್ಟೆಯ ನೂಲುಗಳೆಲ್ಲ ಕದಲುತ್ತಿವೆಯಲ್ಲ!
ಈ ಬಟ್ಟೆಯ ಎಲ್ಲೆಡೆಯಲ್ಲು ತೂತಿನ ಸಿಂಗಾರ!
ಈ ಬಟ್ಟೆಯ ಮೈ ತುಂಬಾ ಹೊದೆಯುವುದೂ ಕಷ್ಟ
ಈ ಬಟ್ಟೆಯನೊಟ್ಟನಲ್ಲಿ ಸುತ್ತಿಟ್ಟರೆಯೇ ಚೆಂದ ॥ ೧೦ ॥

ಅಥವಾ ಈ ಪ್ರಾಣಿ ಏನು ಮಾಡ್ತಾನಂತೆ? ನಾನೋ–

ಒಂದು ಕಾಲು ನೆಲದಲಾದರೆ
ಇನ್ನೊಂದು ಕಾಲು ಮುಗಿಲಲಿ
ಹೀಗೆ ಜೋತಾಡಬಲ್ಲವನು
ಸೂರ್ಯ ಮುಳುಗುವನಕವೂ ॥ ೧೧ ॥

**ಮಾಥುರ** . ಕೊಡಿಸಯ್ಯ ಕೊಡಿಸು

**ಸಂವಾಹಕ** : ಎಲ್ಲಿಂದ ಕೊಡೋದು?

**ಮಾಥುರ** · (ಹಿಡಿದೆಳೆಯುತ್ತಾನೆ )

**ದರ್ದುರಕ** ಅರೆ, ಇದೇನಿದು ಎದುರುಗಡೆ? (ಆಕಾಶದಲ್ಲಿ ಆಲಿಸಿ) ಏನೆಂದಿರಿ? ಈ ಜೂಜುಕೋರ ಜೂಜುಗಾರನಿಂದ ತೊಂದರೆಗೊಳಗಾಗಿದ್ದಾನೆ. ಯಾರೂ ಬಿಡಿಸ್ತಾ ಇಲ್ಲ ಎಂದಿರಾ? ಈ ದರ್ದುರಕ ಇದ್ದಾನೆ ಬಿಡಿಸ್ಲಿಕ್ಕೆ (ಬಳಿ ಬಂದು) ದಾರಿ ಬಿಡಿ, ದಾರಿ (ನೋಡಿ) ಅರೆ, ಧೂರ್ತ ಮಾಥುರ! ಇವನೋ ಪಾಪದ ಪ್ರಾಣಿ ಸಂವಾಹಕ!

ಬೆಳಗಿನಿಂದ ಸಂಜೆಯ ತನಕ
ನಲುಗದೆ ತಲೆ ಬಗ್ಗಿಸಿ ನಿಂತು
ಸಹಿಸೋದಕ್ಕೆ ಇವನಿಗೆ ಗೊತ್ತಿಲ್ಲ
ಮಣ್ಣ ಹೆಂಟೆಯ ಹೊಡೆತ ದಿನವೂ ತಿಂದುತಿಂದು
ಇವನ ಬೆನ್ನೊಳಗಿನ್ನೂ ಗೀರು ಬಿದ್ದಿಲ್ಲ
ಇವನ ಈ ಮೊಣಕಾಲ ಗಂಟಿನೆಡೆಯನ್ನು
ದಿನದಿನವು ನಾಯಿಗಳು ಕುಕ್ಕಿ ನೆಕ್ಕಿದ್ದಿಲ್ಲ
ಇಂಥ ಈ ಮೆದು ಮೈಯ ಮಳ್ಳನಿಗೆ
ಏಕೆ ಬೇಕಿತ್ತು ಈ ಜೂಜಿನ ಕೆಲಸ ॥ ೧೨ ॥

ಇರಲಿ, ಮಾಥುರನನ್ನು ಮೊದಲು ಸಂತೈಸುತ್ತೇನೆ. (ಬಳಿ ಬಂದು) ಮಾಥುರ, ನಮಸ್ಕಾರ ಮಾಡ್ತಿದೇನೆ

**ಮಾಥುರ** : (ಪ್ರತಿನಮಸ್ಕಾರ ಮಾಡ್ತಾನೆ )

**ದರ್ದುರಕ** : ಇದೇನಿದು?

**ಮಾಥುರ** : ಇವ ಹತ್ತು ರೂಪಾಯಿ ಕೊಡೋದು ಬಾಕಿ ಇದೆ.

ದರ್ದುರಕ  ಅಷ್ಟೇನಾ! ಬೆಳಗಿನ ತಿಂಡಿಯ ಪುಡಿಗಾಸು ಬಿಡು

ಮಾಥುರ  (ದರ್ದುರಕನ ಕಂಕುಳಲ್ಲಿ ಮಡಚಿಟ್ಟ ಬಟ್ಟೆಯನ್ನು ಎಳೆದು) ನೋಡಿ ಸ್ವಾಮಿ, ನೋಡಿ ಈ ಹರಕು ಕಂತೆ ಬಟ್ಟೆ ತೊಟ್ಟ ಈ ಮನುಷ್ಯನಿಗೆ ಹತ್ತು ರೂಪಾಯಿ ಅಂದರೆ ಬೆಳಗಿನ ತಿಂಡಿಯ ಪುಡಿಗಾಸಂತೆ!

ದರ್ದುರಕ  ಅಯ್ಯಾ ದಡ್ಡ ಶಿಖಾಮಣಿ, ನಾನು ಒಂದು ಕಟದಾಳ ಎಸೆದು ಹತ್ತು ರೂಪಾಯಿ ಸಂಪಾದಿಸಿ ಕೊಡಬಲ್ಲೆ ಗೊತ್ತಾ? ದುಡ್ಡಿದ್ದವರೆಲ್ಲ ಮಡಿಲಲ್ಲಿಟ್ಟು ತೋರಿಸ್ತಾ ತಿರುಗ್ತಾರೇನು? ಅರೆ–

ಜಾತಿಗೆಟ್ಟವ ನೀನು
ಹಾಳುಗೇಡಿಯೆ ನೀನು
ಹತ್ತು ರೂಪಾಯಿಗಳ ಕಾರಣಕ್ಕಾಗಿ
ಎಲ್ಲ ಇಂದ್ರಿಯಗಳೂ
ನೆಟ್ಟಗಿರುವಂಥ ಈ
ಆಸಾಮಿಯನು ಕೊಲ್ಲಹೊರಟಿರುವೆಯಲ್ಲ || ೧೩ ||

ಮಾಥುರ : ಅಯ್ಯಾ, ನಿನಗೆ ಹತ್ತು ರೂಪಾಯಿ ಅಂದರೆ ಬೆಳಗಿನ ತಿಂಡಿಯ ಪುಡಿಗಾಸು ಇರಬಹುದು ನನಗದೇ ದೊಡ್ಡ ಸಂಪತ್ತು

ದರ್ದುರಕ  ಹಾಗಾದರೆ ಕೇಳು: ಇವನಿಗೆ ನೀನು ಇನ್ನು ಹತ್ತು ರೂಪಾಯಿಗಳನ್ನು ಕೊಡು ಇವ ಪುನಃ ಜೂಜಾಡಲಿ

ಮಾಥುರ : ಆಡಿದರೆ ಮುಂದೆ?

ದರ್ದುರಕ . ಗೆದ್ದರೆ ಪೂರ್ತಿ ಹಣ ಮರಳಿಸ್ತಾನೆ

ಮಾಥುರ : ಒಂದು ವೇಳೆ ಗೆಲ್ಲದಿದ್ದರೆ?

ದರ್ದುರಕ . ಕೊಡೋದಿಲ್ಲ– ಅಷ್ಟೆ

ಮಾಥುರ : ಸುಮ್ಮನೆ ಮಾತು ಬೆಳಸಿ ಉಪಯೋಗ ಇಲ್ಲ ಹೀಗೆ ಮಾತಾಡೋ ಮುಟ್ಠಾಳ ನೀನೇ ಯಾಕೆ ಕೊಡಬಾರದು? ನಾನು ಮಾಥುರ ಗೊತ್ತಾಯಿತಾ! ನನ್ನ ಧೂರ್ತತನ ಎಲ್ಲರಿಗೂ ಗೊತ್ತುಂಟು ನಾನು ಜೂಜಿನ ಮನೆ ನಡೆಸೋದು ಸುಳ್ಳೇ ಚಂದಕ್ಕೇನು? ನಾನು ಯಾರಿಗೂ ಹೆದರೋನಲ್ಲ ನೀನು ಯಾರಯ್ಯ ಮರ್ಯಾದೆ ಗೆಟ್ಟ ಮುಟ್ಠಾಳ ಬುದ್ಧಿವಾದ ಹೇಳೋದಕ್ಕೆ?

ದರ್ದುರಕ : ಯಾರೋ ಮರ್ಯಾದೆಗೆಟ್ಟವ?

ಮಾಥುರ : ಮರ್ಯಾದೆಗೆಟ್ಟವ ನೀನೆ

ದರ್ದುರಕ . ನಿನ್ನಪ್ಪ ಮರ್ಯಾದೆಗೆಟ್ಟವ (ಸಂವಾಹಕನಿಗೆ ಹೋಗುವಂತೆ ಸನ್ನೆ ಮಾಡುತ್ತಾನೆ.)

ಮಾಥುರ : ಸೂಳೇಮಗನೆ, ಹೀಗೆಯೆ ಅಲ್ಲವಾ ನೀನು ಜೂಜಾಡೋದೆಂದರೆ?

**ದರ್ದುರಕ** · ಹೌದು, ನಾನು ಹೀಗೇ ಜೂಜಾಡೋದು

**ಮಾಥುರ** ಏಯ್, ಸಂವಾಹಕ, ಆ ಹತ್ತು ರೂಪಾಯಿ ಬಿಚ್ಚು

**ಸಂವಾಹಕ** . ಇವತ್ತೆ ಕೊಡ್ತೇನೆ ಕೊಡ್ತೇನಪ್ಪ

**ಮಾಥುರ** · (ಎಳೆದಾಡುತ್ತಾನೆ )

**ದರ್ದುರಕ** : ಮುಟ್ಠಾಳ, ನನ್ನ ಹಿಂದೆ ಮಾಡಿದೇಂತ ನನ್ನೆದುರು ಅವನಿಗೆ ತೊಂದರೆ ಕೊಡಲಾರೆ ಗೊತ್ತಾಯಿತಾ?

(ಮಾಥುರ ಸಂವಾಹಕನನ್ನು ಎಳೆದು ಮೂಗಿಗೆ ಗುದ್ದುತ್ತಾನೆ ಸಂವಾಹಕ ಮೂಗಿನಲ್ಲಿ ನೆತ್ತರು ಸುರಿಸುತ್ತ ಮೂರ್ಛೆ ಬಂದವರಂತೆ ನೆಲದ ಮೇಲೆ ಕುಸಿಯುತ್ತಾನೆ ದರ್ದುರಕ ಹತ್ತಿರ ಬಂದು ತಡೆಯುತ್ತಾನೆ ಮಾಥುರ ದರ್ದುರಕನಿಗೆ ಹೊಡೆಯುತ್ತಾನೆ ದರ್ದುರಕ ಪ್ರತಿಯಾಗಿ ಹಿಂದಕ್ಕೆ ಹೊಡೆಯುತ್ತಾನೆ )

**ಮಾಥುರ** : ಏ ಏ, ಕೆಟ್ಟ ಸೂಳೇಮಗನೆ, ಇದರ ಫಲ ತಿನ್ತಿ ನೋಡು.

**ದರ್ದುರಕ** ಏ ಮುಟ್ಠಾಳ, ನೀನು ನನಗೆ ನಡುದಾರಿಯಲ್ಲೆ ಹೊಡೆದೆ ನಾಳೆ ಎಲ್ಲಾದರೂ ಅರಮನೆ ಹತ್ತಿರ ಹೊಡೆದೆಯೆಂದರೆ ಆಗ ನೋಡ್ತೀಯಂತೆ!

**ಮಾಥುರ** : ನೋಡ್ತೇನೆ, ನೋಡ್ತೇನೆ

**ದರ್ದುರಕ** : ಹೇಗೆ ನೋಡ್ತಿ?

**ಮಾಥುರ** · (ಕಣ್ಣುಗಳನ್ನಗಲಿಸಿ)ಹೀಗೆ ನೋಡ್ತೇನೆ

(ದರ್ದುರಕ ಮಾಥುರನ ಕಣ್ಣುಗಳಿಗೆ ಹೊಯಿಗೆ ಚೆಲ್ಲಿ ಸಂವಾಹಕನಿಗೆ ಹೊರಟು ಹೋಗುವಂತೆ ಸನ್ನೆ ಮಾಡ್ತಾನೆ ಮಾಥುರ ಕಣ್ಣು ಮುಚ್ಚಿಕೊಂಡು ನೆಲದಲ್ಲಿ ಬೀಳ್ತಾನೆ ಸಂವಾಹಕ ಹೊರಟು ಹೋಗುತ್ತಾನೆ.)

**ದರ್ದುರಕ** : (ಸ್ವಗತ) ಜೂಜುಗಾರರ ಮುಂದಾಳು ಮಾಥುರನೊಡನೆ ನಾನು ವಿರೋಧ ಕಟ್ಟಿಕೊಂಡೆ ಅದರಿಂದ ಇಲ್ಲಿ ನಿಲ್ಲೋದು ಸರಿಯಲ್ಲ. ನನ್ನ ಪ್ರಿಯಮಿತ್ರ ಶರ್ವಿಲಕ ಈಗ ತಾನೆ ಹೇಳಿದ: ಸಿದ್ಧಪುರುಷರೊಬ್ಬರ ಭವಿಷ್ಯದ ಪ್ರಕಾರ ಆರ್ಯಕನೆಂಬ ಗೊಲ್ಲರ ಹುಡುಗ ರಾಜನಾಗುತ್ತಾನೆ–ಎಂದು ನನ್ನಂಥ ಮಂದಿಯೆಲ್ಲ ಅವನ ಪಕ್ಷದಲ್ಲಿ ನಿಂತಿದ್ದಾರೆ. ಅದರಿಂದ ನಾನೂ ಅವನಿದ್ದೆಡೆಗೇ ಹೋಗುತ್ತೇನೆ. (ಎಂದು ಹೋಗುತ್ತಾನೆ.)

**ಸಂವಾಹಕ** : (ಹೆದರಿ ಹೆದರಿ ಹೆಜ್ಜೆಯಿಡುತ್ತ, ನೋಡಿ) ಇಲ್ಲಿ ಯಾರದೋ ಮನೆಯಿದೆ ಬಾಗಿಲೂ ತೆರೆದು ಕೊಂಡಿದೆ. ಒಳಗೆ ಹೋಗುತ್ತೇನೆ. (ಪ್ರವೇಶವನ್ನು ನಟಿಸಿ, ವಸಂತಸೇನೆಯನ್ನು ಕಂಡು) ಅವ್ವಾ, ಶರಣು ಶರಣು.

**ವಸಂತಸೇನೆ** : ಶರಣಾಗತನಿಗೆ ಅಭಯವಿರಲಿ. ಚೇಟಿ, ಹೆಬ್ಬಾಗಿಲು ಮುಚ್ಚು.

(ಚೇಟಿ ಹಾಗೆಯೇ ಮಾಡುತ್ತಾಳೆ.)

**ವಸಂತಸೇನೆ** : ನಿನ್ನ ಭಯಕ್ಕೆ ಕಾರಣವೇನು?

**ಸಂವಾಹಕ** ಅವ್ವಾ, ಒಬ್ಬ ಸಾಲಿಗನಿಂದ ಹೆದರಿಕೊಂಡಿದ್ದೇನೆ

**ವಸಂತಸೇನೆ** · ಚೇಟಿ, ಹಾಗಾದರೆ ಹೆಬ್ಬಾಗಿಲು ತೆರೆದುಬಿಡು

**ಸಂವಾಹಕ** · (ಸ್ವಗತ) ಸಾಲಿಗನಿಂದ ಭಯ ಎಂದ ಕೂಡಲೆ ಈಕೆ ಅಳೆದು ಬಿಟ್ಟಳು ಜನ ಆಡೋ ಮಾತು ನಿಜ–

ತನ್ನ ಶಕ್ತಿಯನರಿತು
ಕೈ ಸಾಗುವಷ್ಟೇ
ಭಾರವನು ಹೊತ್ತವನು
ಜಾರಿ ಬೀಳುವುದಿಲ್ಲ
ಕಾಡಿನಲ್ಲಿದ್ದರೂ
ಅವನಿಗಾಪತ್ತಿಲ್ಲ ॥ ೧೪ ॥

ಇದಕ್ಕೆ ವಿಪರೀತವಾದರೆ ನಾನೇ ಉದಾಹರಣೆ

**ಮಾಥುರ**: (ಕಣ್ಣು ತಿಕ್ಕಿಕೊಂಡು ಜೂಜುಕೋರನನ್ನು ಕುರಿತು) ಏಯ್, ಕೊಡು ಕೊಡು

**ಜೂಜುಕೋರ** : ಅಯ್ಯೋ, ನಾವು ದರ್ದುರಕನ ಜತೆ ಜಗಳಾಡುತಿದ್ದಾಗ ಅವನು ತಪ್ಪಿಸಿಕೊಂಡು ಹೋಗಿಬಿಟ್ಟ

**ಮಾಥುರ** : ಆ ಜೂಜುಕೋರನಿಗೆ ಪೆಟ್ಟುಬಿದ್ದು ಮೂಗು ಮುರಿದಿದೆ ಅದರಿಂದ ಬಾ, ನೆತ್ತರಿನ ಜಾಡನ್ನೆ ಹಿಡಿದು ಹೋಗೋಣ

**ಜೂಜುಕೋರ** : (ಅನುಸರಿಸಿ) ಅಯ್ಯ, ಅವನು ವಸಂತಸೇನೆಯ ಮನೆಗೆ ಹೋಗಿದ್ದಾನೆ

**ಮಾಥುರ** : ಹಾಗಾದರೆ ನಮ್ಮ ಹಣ ಸಾಬೀತು

**ಜೂಜುಕೋರ** : ನ್ಯಾಯಾಲಯಕ್ಕೆ ಹೋಗಿ ದೂರು ಕೊಡೋಣ

**ಮಾಥುರ** : ಅಷ್ಟರಲ್ಲಿ ಈ ಮುಟ್ಠಾಳ ಇಲ್ಲಿಂದ ತಪ್ಪಿಸಿಕೊಂಡು ಇನ್ನೊಂದೆಡೆ ಹೋದಾನು ಅದರಿಂದ ಇಲ್ಲೆ ನಿಂತು ಅಡ್ಡಗಟ್ಟಿ ವಸೂಲು ಮಾಡೋಣ

* * * * *

**ವಸಂತಸೇನೆ** : (ಮದನಿಕೆಗೆ ಸನ್ನೆ ಮಾಡುತ್ತಾಳೆ)

**ಮದನಿಕೆ** : ಅಯ್ಯ, ನೀವು ಎಲ್ಲಿಂದ ಬಂದದ್ದು? ಯಾರು ನೀವು? ಯಾರ ಕಡೆಯವರು? ಯಾವ ವೃತ್ತಿ ಮಾಡಿಕೊಂಡಿದ್ದೀರಿ? ಯಾರಿಂದಾಗಿ ಹೆದರಿ ಕೊಂಡಿದ್ದೀರಿ?

**ಸಂವಾಹಕ** ಅವ್ವಾ, ಕೇಳಬೇಕು ನನ್ನ ಹುಟ್ಟೂರು ಪಾಟಲಿಪುತ್ರ ಊರ ಗೌಡರ ಮಗ ನಾನು ನವರ್ಕಾಳಿ ಪ್ರಯೋಗ ಕಲ್ತಿದೇನೆ

**ವಸಂತಸೇನೆ** ಒಳ್ಳೆಯ ಕಲೆಯನ್ನು ಕಲಿತಿದ್ದೀಯಾ ಹಾಗಾದರೆ

**ಸಂವಾಹಕ** · ಕಲಿತದ್ದೇನೋ ಕಲೆಯೆಂದು ಆದರೆ ಅದೀಗ ಬದುಕೋ ದಾರಿ ಯಾಗಿದೆ

**ಚೇಟಿ** ಅಯ್ಯನ ಮಾತಿನಲ್ಲಿ ತುಂಬ ನೋವು ತುಂಬಿದೆ ಆಮೇಲೇನಾಯಿತು.

**ಸಂವಾಹಕ** ಅವ್ವಾ, ಆಮೇಲೆ ನಮ್ಮ ಮನೆಗೆ ಬಂದು ಹೋಗುವ ಪ್ರಯಾಣಿಕರ ಬಾಯಿಂದ ಕೇಳಿ ಹೊಸ ಊರನ್ನು ಕಾಣುವ ಕುತೂಹಲ ದಿಂದ ಇಲ್ಲಿಗೆ ಬಂದೆ ಉಜ್ಜಯಿನಿಗೆ ಬಂದ ಮೇಲೂ ಇಲ್ಲಿ ಒಬ್ಬ ಮಹಾನುಭಾವನ ಸೇವೆ ಮಾಡಿದೆ ಕಾಣುವುದಕ್ಕೆ ಚೆಲುವ ಅಷ್ಟೇ ಚೆಲುವು ಮಾತುಗಾರಿಕೆ ಕೂಡ ಕೊಟ್ಟದ್ದನ್ನು ಕೊಚ್ಚಿಕೊಂಡವನಲ್ಲ; ಪರರ ಅಪಕಾರವನ್ನು ನೆನಪಿಟ್ಟವನಲ್ಲ ಹೆಚ್ಚು ಹೇಳಿ ಫಲವೇನು? ಎಂಥ ದಾಕ್ಷಿಣ್ಯ ಶೀಲ ಎಂದರೆ ತಾನಿರುವುದೆ ಇನ್ನೊಬ್ಬರಿಗಾಗಿ ಎಂದು ಭಾವಿಸಿದ ಮಹಾನು ಭಾವ ಆತ ಮರೆಹೊಕ್ಕವರನ್ನು ಎಂದೂ ಕೈಬಿಟ್ಟವನಲ್ಲ

**ಚೇಟಿ** . ನಮ್ಮ ಒಡತಿಯ ಬಗೆ ಬಯಸುವ ಗುಣಗಳನ್ನು ಕದ್ದ ಯಾರಿವನು ಉಜ್ಜಯಿನಿಯನ್ನು ಅಲಂಕರಿಸುವವನು?

**ವಸಂತಸೇನೆ** : ಸಾಧು ಚೇಟಿ, ಸಾಧು. ನಾನೂ ಇದನ್ನೆ ಯೋಚಿಸುತಿದ್ದೆ

**ಚೇಟಿ** ಅಯ್ಯ, ಆಮೇಲೆ ಆಮೇಲೆ?

**ಸಂವಾಹಕ** · ಅವ್ವಾ, ಈಗವನು ತನ್ನ ದಯಾಶೀಲತೆಯಿಂದ ಬಂದವರಿಗೆಲ್ಲ ದಾನ ಕೊಟ್ಟು ಕೊಟ್ಟು–

**ವಸಂತಸೇನೆ** . ಏನು ಇದ್ದ ಸಂಪತ್ತನ್ನೆಲ್ಲ ಕಳೆದುಕೊಂಡನೆ?

**ಸಂವಾಹಕ** : ಹೇಳದೆಯೆ ನಿಮಗೆ ಹೇಗೆ ಗೊತ್ತಾಯಿತು?

**ವಸಂತಸೇನೆ** · ತಿಳಿಯೋದಕ್ಕೇನುಂಟು? ಒಳ್ಳೆಯತನ ಮತ್ತು ಸಂಪತ್ತು ಒಟ್ಟಿ ಗಿರೋದು ಕಷ್ಟ ಕುಡಿಯಲಿಕ್ಕಾಗದ ನೀರಿನ ಕೆರೆ ಯಾವಾಗಲೂ ತುಂಬಿರುತ್ತೆ.

**ಚೇಟಿ** ಅಯ್ಯ, ಆತನ ಹೆಸರೇನು?

**ಸಂವಾಹಕ** · ಅವ್ವಾ, ಆತ ಭೂಮಿಯಲ್ಲಿ ಉದಿಸಿದ ಚಂದ್ರ. ಆತನ ಹೆಸರು ಗೊತ್ತಿರದವರು ಯಾರು? ಆತ ಸಾವುಕಾರರ ಬೀದೀಲಿ ವಾಸವಾಗಿರೋದು. ಆರ್ಯಚಾರುದತ್ತ ಎಂದು ಆತನ ಹೆಸರು.

**ವಸಂತಸೇನೆ** · (ಸಂತಸದಿಂದ ಆಸನ ಬಿಟ್ಟೆದ್ದು) ಅಯ್ಯ, ಇದು ನಿನ್ನದೇ ಮನೆ. ಚೇಟಿ, ಈತನಿಗೆ ಆಸನ ಕೊಡು. ಬೀಸಣಿಗೆ ತಗೋ. ಈತನಿಗೆ ತುಂಬ ಆಯಾಸವಾದಂತಿದೆ

(ಚೇಟಿ ಹಾಗೆಯೇ ಮಾಡುತ್ತಾಳೆ)

**ಸಂವಾಹಕ** (ಸ್ವಗತ) ಏನಿದು? ಆರ್ಯಚಾರುದತ್ತನ ಹೆಸರು ಹೇಳಿದ್ದೇ ನನಗೆ ಎಂಥ ಉಪಚಾರ! ಭಲೆ, ಆರ್ಯಚಾರುದತ್ತ ಭಲೆ, ಈ ಭೂಮಿಯಲ್ಲಿ ನೀನೊಬ್ಬನೆ ನಿಜವಾಗಿ ಬದುಕಿರುವೆ ಉಳಿದವರೆಲ್ಲ ಉಸಿರಾಡುತಿದ್ದಾರೆ– ಅಷ್ಟೆ (ಕಾಲಿಗೆರಗಿ)ಇರಲಿ ತಾಯಿ, ಇರಲಿ ಆಸನದಲ್ಲಿ ನೀನೇ ಕೂಡು

**ವಸಂತಸೇನೆ** · (ಆಸನದಲ್ಲಿ ಕುಳಿತು) ಅಯ್ಯ, ಹೀಗೆ ದುಡ್ಡು ಚೆಲ್ಲಿದರೆ ಆತ ಸಿರಿವಂತನಾಗಿರುವುದು ಹೇಗೆ ಸಾಧ್ಯ?

**ಸಂವಾಹಕ** . ಸಜ್ಜನರ ಸಂಪತ್ತು
ಯಾವಾಗಲೂ ಪರರ
ಉಪಕಾರಕಾಗಿಯೆ ಮೀಸಲಿರುವಂಥದು
ಇಂದಿದ್ದು ನಾಳೆ ಮರೆಯಾಗುವಂಥ
ಸಂಪತ್ತು ಯಾರಿಗಿಲ್ಲ?
ಪರರನ್ನು ಗೌರವಿಸ ಬಲ್ಲವನು ಮಾತ್ರವೇ
ಪರರಿಂದ ಗೌರವವ ಪಡೆಯಲೂ ಬಲ್ಲ ॥ ೧೫ ॥

**ವಸಂತಸೇನೆ** · ಆಮೇಲೆ, ಆಮೇಲೆ?

**ಸಂವಾಹಕ** ಆಮೇಲೆ ನಾನು ಆತನ ಮನೆಯಲ್ಲಿ ಪರಿಚಾರಕನಾಗಿ ಸಂಬಳಕ್ಕೆ ಸೇರಿದೆ ಚಾರಿತ್ರ್ಯ ಮಾತ್ರವೆ ಆತನ ಆಸ್ತಿಯಾದಾಗ ಜೂಜಿನ ಹವ್ಯಾಸಕ್ಕೆ ಇಳಿದೆ ನನ್ನ ಅದೃಷ್ಟ ಕೆಟ್ಟಿತ್ತು ಎಂದೆ ಇವತ್ತು ಜೂಜಿನಲ್ಲಿ ಹತ್ತು ರೂಪಾಯಿ ಕಳೆದುಕೊಂಡೆ

**ಮಾಥುರ** : ನಾನು ಕೆಟ್ಟೆ; ನನ್ನ ದುಡ್ಡು ಹೋಯಿತು!

**ಸಂವಾಹಕ** : ಅದಕೆಂದು ಈ ಜೂಜುಗಾರ ಮತ್ತು ಈ ಜೂಜುಕೋರ ನನ್ನ ಬೆನ್ನು ಹತ್ತಿದ್ದಾರೆ ಇಷ್ಟು ನನ್ನ ಕಥೆ ಇನ್ನು ನಿಮ್ಮಿಷ್ಟ

**ವಸಂತಸೇನೆ** : ತಾವು ಗೂಡು ಕಟ್ಟಿದ ಮರವೆ ಅಸ್ಥಿರವಾದಾಗ ಹಕ್ಕಿಗಳು ಅಲ್ಲಿ ಇಲ್ಲಿ ಹಾರಾಡೋದು ಸಹಜ ಚೇಟಿ, ಹೋಗು ಈ ಜೂಜುಗಾರನಿಗೆ ಮತ್ತು ಈ ಜೂಜುಕೋರನಿಗೆ ಈತನೇ ಕೊಟ್ಟದ್ದು ಎಂದು ಈ ಚಿನ್ನದ ಬಳೆಯನ್ನು ಕೊಟ್ಟು ಬಾ.

(ಎಂದು ಕೈಯಿಂದ ಕಡಗವನ್ನು ತೆಗೆದು ಚೇಟಿಯ ಬಳಿ ಕೊಡುತ್ತಾಳೆ)

**ಚೇಟಿ** : (ತೆಗೆದುಕೊಂಡು) ಅಪ್ಪಣೆ ಅವ್ವಾ, (ಎಂದು ಹೋಗುತ್ತಾಳೆ)

**ಮಾಥುರ** : ನಾನು ಕೆಟ್ಟೆ. ನನ್ನ ದುಡ್ಡು ಹೋಯಿತು

**ಚೇಟಿ** . ಇವರು ಆಕಾಶ ನೋಡಿ ನಿಟ್ಟುಸಿರು ಬಿಡುವುದನ್ನು, ಬಾಗಿಲತ್ತ ದಿಟ್ಟಿಸಿ ಮಾತನಾಡುತ್ತಿರುವುದನ್ನು ನೋಡಿದರೆ ಇವರೇ ಆ ಜೂಜುಕಾರ ಮತ್ತು ಜೂಜುಕೋರ ಇರಬೇಕು (ಹತ್ತಿರ ಬಂದು) ಅಯ್ಯಾ, ನಮಸ್ಕಾರ

**ಮಾಥುರ** ನಿನಗೆ ಸುಖವಾಗಲಿ

**ಚೇಟಿ** : ಅಯ್ಯಾ, ನಿಮ್ಮಲ್ಲಿ ಜೂಜುಗಾರ ಯಾರು?

**ಮಾಥುರ** ಓ ತೆಳುಹೊಟ್ಟೆಯ ಸುಂದರಿಯೆ
ಕಡೆಗಣ್ಣ ನೋಟವನು ಹೀಗೆ ಬೀರುತ್ತ
ರತಿಕೇಳಿಯ ರಸಿಕರು ಕಚ್ಚಿದ
ಕಿಡಿಗೇಡಿ ತುಟಿಯಿಂದ
ಯಾರೊಡನೆ ಸವಿಮಾತನಾಡುತಿರುವೆ? ॥ ೧೬ ॥

ನನ್ನ ಕೈಯಲ್ಲಿ ಕಾಸಿಲ್ಲ ಬೇರೆ ಕುಳ ನೋಡು

**ಚೇಟಿ** ಮಾತಾಡೋ ರೀತಿ ನೋಡಿದರೆ ನೀನು ಜೂಜುಕೋರ ಅಲ್ಲ ನಿಮಗೆ ಯಾರಾದರೂ ಸಾಲ ಕೊಡಬೇಕಾದ್ದು ಬಾಕಿ ಉಂಟಾ?

**ಮಾಥುರ** : ಹೌದು ಹತ್ತು ರೂಪಾಯಿ ಬರಬೇಕು ಏನು ಅದಕ್ಕೆ?

**ಚೇಟಿ** : ಅದಕ್ಕಾಗಿ ನಮ್ಮೊಡತಿ ಈ ಕಡಗವನ್ನು ಕೊಟ್ಟು ಕಳಿಸಿದ್ದಾಳೆ ಅಲ್ಲಲ್ಲ– ಆತನೇ ಕೊಟ್ಟು ಕಳಿಸಿದ್ದಾನೆ

**ಮಾಥುರ** (ಸಂತೋಷದಿಂದ ತೆಗೆದುಕೊಂಡು) ಅರೇ, ಆ ಕುಲಪುತ್ರನ ಬಳಿ ಹೇಳು: ನಿನ್ನ ಸಾಲ ತೀರಿತು ಬಾ, ಮತ್ತೆ ಜೂಜಾಡೋಣ– ಎಂದು

(ಎಂದು ಇಬ್ಬರೂ ಹೋಗುತ್ತಾರೆ )

**ಚೇಟಿ** . (ವಸಂತಸೇನೆಯ ಬಳಿ ಬಂದು) ಆ ಜೂಜುಗಾರ ಮತ್ತು ಜೂಜುಕೋರ ಇಬ್ಬರೂ ಸಂತೋಷಪಟ್ಟುಕೊಂಡು ಹೊರಟು ಹೋದರು

**ವಸಂತಸೇನೆ** : ಹಾಗಾದರೆ, ಅಯ್ಯ, ನೀನೀಗ ಹೋಗಬಹುದು. ಮನೆಯಲ್ಲಿ ಬಂಧುವರ್ಗ ಕಾಯುತಿರಬಹುದು.

**ಸಂವಾಹಕ** : ಅವ್ವಾ, ಹಾಗಿದ್ದರೆ, ನನ್ನ ಈ ಕಲೆಯನ್ನು ನಿನ್ನ ಸೇವೆಗಾಗಿ ಉಪಯೋಗಿಸಬೇಕೆಂದಿದೆ.

**ವಸಂತಸೇನೆ** . ಅಯ್ಯ, ಯಾರಿಗಾಗಿ ಇಂಥ ಕಲೆಯನ್ನು ಕಲಿಯಬೇಕೋ ಅಂಥ ವ್ಯಕ್ತಿಯನ್ನೆ ನೀನು ಈ ತನಕ ಸೇವೆ ಮಾಡಿದ್ದೆ. ಇನ್ನು ಕೂಡ ಈ ಕಲೆ ಅಲ್ಲೆ ಸಾರ್ಥಕವಾಗಲಿ.

**ಸಂವಾಹಕ** . (ಸ್ವಗತ) ಈಕೆ ಜಾಣತನದಿಂದ ನಿರಾಕರಿಸಿಬಿಟ್ಟಳು. ಮತ್ತೆ ಹೇಗೆ ನಾನು ಈ ಉಪಕಾರದ ಋಣ ತೀರಿಸಲಿ? (ಪ್ರಕಾಶ) ಅವ್ವಾ, ನಾನು ಈ ಜೂಜುಕೋರರಿಂದ ಅವಮಾನಿತನಾಗಿ ಬುದ್ಧಸನ್ಯಾಸಿಯಾಗುವುದೆಂದು

ತೀರ್ಮಾನಿಸಿದ್ದೇನೆ ಅದರಿಂದ ದಯವಿಟ್ಟು ಈ ಮೂರು ಹೆಸರುಗಳನ್ನು ನೆನಪಿಟ್ಟುಕೋ ತಾಯಿಃ ಮೊದಲು ಮೈತಿಕ್ಕುವ ಸಂವಾಹಕ, ಆಮೇಲೆ ಜೂಜುಕೋರ ಮತ್ತು ಕೊನೆಗೆ ಬುದ್ಧಸನ್ಯಾಸಿ

**ವಸಂತಸೇನೆ** ಅಯ್ಯೆ, ಏಕೆ ಈ ದುಡುಕಿನ ನಿರ್ಧಾರ?

**ಸಂವಾಹಕ** ಅವ್ವಾ, ನಿರ್ಧಾರ ಮಾಡಿಬಿಟ್ಟಿದ್ದೇನೆ (ಎಂದು ನಡೆದಾಡಿ)–

ಈ ಜೂಜಿನ ಚಟದಿಂದಾಗಿ
ತಲೆ ತಗ್ಗಿಸಿ ನಡೆವಂತಾಯಿತು
ಎಲ್ಲ ಜನದ ಮುಂದೆ
ತಲೆಯೆತ್ತಿ ತಿರುಗುವೆನು
ರಾಜ ಬೀದಿಗಳಲ್ಲಿ
ಇನ್ನೀಗ ಸನ್ಯಾಸಿಯಾದ ಮೇಲೆ ॥ ೧೭ ॥

(ತೆರೆಯ ಮರೆಯಲ್ಲಿ ಗಲಿಬಿಲಿ ಸದ್ದು)

**ಸಂವಾಹಕ** (ಆಲಿಸಿ) ಅರೆ, ಏನಿದು? (ಆಕಾಶದಲ್ಲಿ) ಏನೆಂದಿರಿ? ವಸಂತಸೇನೆಯ ಮದ್ದಾನೆ 'ಖುಂಟಮೋಟಕ' ಸಂಕಲೆ ಕಿತ್ತು ತಿರುಗುತ್ತಿದೆಯೆಂದಿರಾ? ಓಹ್, ಆಕೆಯ ಮದ್ದಾನೆಯನ್ನು ನಾನೂ ಹೋಗಿ ನೋಡ್ತೇನೆ ಅಥವಾ, ಅದನ್ನು ನೋಡಿ ನನಗೇನಾಗಬೇಕಾಗಿದೆ ನಾನು ನಿರ್ಧರಿಸಿದಂತೆಯೆ ನನ್ನ ದಾರಿ ಹಿಡಿದು ಹೋಗೋದು

(ಎಂದು ಹೋಗುತ್ತಾನೆ)

(ಅನಂತರ ಪರದೆಯನ್ನು ಸರಿಸಿ, ಸಂತುಷ್ಟನಾದ, ಅದ್ದೂರಿಯ ವೇಷತೊಟ್ಟ ಕರ್ಣಪೂರಕ ಪ್ರವೇಶಿಸುತ್ತಾನೆ)

**ಕರ್ಣಪೂರಕ** : ಎಲ್ಲಿ, ಎಲ್ಲಿ, ಅಮ್ಮನವರೆಲ್ಲಿ?

**ಚೇಟಿ** : ಎಂಥ ಮನುಷ್ಯನಯ್ಯ ನೀನು! ಏನಿದು ಇಷ್ಟು ಗಡಿಬಿಡಿ ಅಲ್ಲಾ ಎದುರೇ ಕುಳಿತಿರುವ ಅಮ್ಮಾವ್ರು ನಿನಗೆ ಕಾಣಿಸ್ತಾ ಇಲ್ಲಾಂದ್ರೆ!

**ಕರ್ಣಪೂರಕ** : (ನೋಡಿ) ಅವ್ವಾ, ಅಡ್ಡಬಿದ್ದೆ

**ವಸಂತಸೇನೆ** · ಕರ್ಣಪೂರಕ, ಒಳ್ಳೇ ಖುಶಿಯಾಗಿದ್ದಂತೆ ಕಾಣಿಸ್ತೀಯಾ! ಏನಾಯಿತು?

**ಕರ್ಣಪೂರಕ** : (ಹೆಮ್ಮೆಯಿಂದ) ಅವ್ವಾ, ನೀವು ಮೋಸಹೋದಿರಿ ಈ ಕರ್ಣಪೂರಕನ ಪರಾಕ್ರಮವನ್ನು ನಿಮಗೆ ನೋಡೋದಕ್ಕಾಗಲಿಲ್ಲ

**ವಸಂತಸೇನೆ** : ಕರ್ಣಪೂರಕ, ಏನು, ಏನು ಕಥೆ?

**ಕರ್ಣಪೂರಕ** ಕೇಳಿ ಅವ್ವಾ, ನಿಮ್ಮ ಆ ಕೆಟ್ಟ ಆನೆ ಉಂಟಲ್ಲ– ಖುಂಟಮೋಟಕ– ಅದು ಕಟ್ಟಿದ ಕಂಬವನ್ನೇ ಕಿತ್ತು, ಮಾವುತನನ್ನೂ ಕೆಡವಿಹಾಕಿ ಚಾನಾಹಾನಿ ಮಾಡುತ್ತ ರಾಜಬೀದಿಗೇ ಬಂತು ಜನ ಎಲ್ಲ ಹೀಗೆ ಬೊಬ್ಬಿಟ್ಟು ಘೋಷಣೆ ಮಾಡಿದರು:

ದೂರ ಸರಿಸಿರಿ ಸಣ್ಣ ಮಕ್ಕಳನ್ನು
ತಕ್ಷಣ ಹತ್ತಿರಿ ಹತ್ತಿರವಿದ್ದ
ಮರವನು, ಅಥವಾ ಉಪ್ಪರಿಗೆಯನು
ನೀವು ನೋಡುತ್ತಿಲ್ಲವೇನು ನಿಮ್ಮೆದುರಿನಲೆ
ಮದವಿಡಿದ ಹುಚ್ಚಾನೆ ಈ ಕಡೆಯೆ ಬರುತಿದೆ ॥ ೧೮ ॥

ಅಲ್ಲದೆ–

ಕಾಲ್‌ಗೆಜ್ಜೆಯು ಜಾರುತ್ತಿದೆ
ಹೆಣ್ಮಕ್ಕಳ ಮಣಿಕೆತ್ತಿದ
ನಡುದಾರವು ಬಿರಿಯುತ್ತಿದೆ
ಮುತ್ತಿನ ಬೆಳಕಿನ ಬಲೆಯಲಿ
ಸೆರೆಗೊಂಡಿಹ ಚೆಲು ಬಳೆಗಳು ಕೂಡ
ಚೆಲ್ಲುತ್ತಿವೆ ಚೆದರಿ ॥ ೧೯ ॥

ಅನಂತರ ಆ ಮದ್ದಾನೆ ಕಾಲಲ್ಲಿ ತುಳಿದು, ಸೊಂಡಿಲಲ್ಲಿ ಸೆಳೆದು, ದಾಡೆ ಯಲ್ಲಿ ಸೀಳಿ ತಾವರೆಯ ಕೆರೆಯಂತೆ ಇಡಿಯ ಉಜ್ಜಯಿನಿಯನ್ನು ಪುಡಿ ಗೈಯುತಿದ್ದಾಗ ಒಬ್ಬ ಸನ್ಯಾಸಿ ಸಿಕ್ಕ. ಅವನ ತಲೆಯ ಮೇಲೆ ಸೀತ್ಕರಿಸಿ ಸೊಂಡಿಲ ಸೀರ್ಪನಿ ಸುರಿಯಿತು ಅವನ ದಂಡ–ಕಮಂಡಲು ಎಲ್ಲೋ ಚೆಲ್ಲಿ ಬಿದ್ದವು. ಅವನನ್ನೆತ್ತಿ ತನ್ನ ದಾಡೆಯೆಡೆಯಲ್ಲಿ ಸಿಕ್ಕಿಸಿಕೊಂಡಿತು ಅದನ್ನು ಕಂಡು ಜನ ಕೂಗಿಕೊಂಡರು: ಹಾಯ್, ಬುದ್ಧಸನ್ಯಾಸಿ ಕೊಲ್ಲಲ್ಪಡುತ್ತಿದ್ದಾನೆ–ಎಂದು.

**ವಸಂತಸೇನೆ** : (ಲಗುಬಗೆಯಿಂದ) ಹಾಯ್, ಎಂಥ ಪ್ರಮಾದ, ಎಂಥ ಪ್ರಮಾದ!

**ಕರ್ಣಪೂರಕ** : ಅವಸರ ಮಾಡಬೇಡಿ. ಮೊದಲು ನಾನು ಹೇಳೋದನ್ನು ಪೂರ್ತಿ ಕೇಳಿ: ಆಮೇಲೆ, ತುಂಡಾದ ಸಂಕಲೆಯ ತುಂಡನ್ನು ಕಾಲಲ್ಲೆ ಎಳೆದುಕೊಂಡು, ದಾಡೆಯೆಡೆಯಲ್ಲಿ ಸನ್ಯಾಸಿಯನ್ನು ಸಿಕ್ಕಿಸಿಕೊಂಡು ಬರುತ್ತಿ ರುವ ಆ ಆನೆಯನ್ನು ಕಂಡ ಈ ಕರ್ಣಪೂರಕ– ಅಲ್ಲಲ್ಲ, ನಿಮ್ಮ ತುತ್ತು ತಿಂದು ಬೆಳೆದ ಚರಣದಾಸನಾದ ನಾನು–ಚಮತ್ಕಾರವಾಗಿ ಕ್ಷಣಾರ್ಧದಲ್ಲೆ ಅಂಗಡಿಗೆ ಓಡಿ ಒಂದು ಕಬ್ಬಿಣದ ಸಲಾಕೆಯನ್ನು ತಂದು ಅಡ್ಡಾದಿಡ್ಡಿ ನಡೆಯುತ್ತ ಆ ಮದ್ದಾನೆಯನ್ನು ಅಡ್ಡಗಟ್ಟಿ ಕರೆದೆ.

**ವಸಂತಸೇನೆ** : ಆಮೇಲೆ, ಆಮೇಲೆ?

**ಕರ್ಣಪೂರಕ** · ವಿಂಧ್ಯ ಪರ್ವತದ ಶಿಖರದಂತೆ
ಸೊಕ್ಕಿನಿಂದ ಮುನ್ನುಗ್ಗುತಿದ್ದ
ಆ ಆನೆಯನ್ನು ಹೊಡೆದು
ಅದರ ದಾಡೆಯಲಿ ಸಿಕ್ಕಿಬಿದ್ದ
ಆ ಬುದ್ಧ ಭಿಕ್ಷುವನ್ನು
ಬದುಕಿಸಿದೆ ನಾನು ಬಿಡಿಸಿ ॥ ೨೦ ॥

**ವಸಂತಸೇನೆ** ತುಂಬ ಒಳ್ಳೆಯ ಕೆಲಸ ಮಾಡಿದೆ ಆಮೇಲೇನಾಯಿತು?

**ಕರ್ಣಪೂರಕ** ಅನಂತರ ಅವ್ವಾ, ಭೇಷ್ ಕರ್ಣಪೂರಕ ಭೇಷ್ ಎನ್ನುತ್ತ, ಒಂದೇ ಬದಿಗೆ ಭಾರತುಂಬಿದ ದೋಣಿಯಂತೆ ಇಡಿಯ ಉಜ್ಜಯಿನಿ ಒತ್ತಟ್ಟಿಗೆ ಸರಿದು ನಿಂತಿತು ಅನಂತರ ಅವ್ವಾ, ಒಬ್ಬ ಮಹಾನುಭಾವ, ತನ್ನ ಮೈಯನ್ನು ಮುಟ್ಟಿಕೊಳ್ಳುತ್ತ, ಬಂಗಾರ ತೊಡುವ ಜಾಗವೆಲ್ಲ ಬೋಳಾಗಿ ರುವುದನ್ನು ಕಂಡು, ಮೇಲೆ ನೋಡುತ್ತ, ನಿಟ್ಟುಸಿರುಗರೆದು, ಈ ಶಾಲನ್ನು ನನ್ನ ಮೇಲೆಸೆದ!

**ವಸಂತಸೇನೆ** ಕರ್ಣಪೂರಕ, ಇದು ಮಲ್ಲಿಗೆಯ ಕಂಪು ಬಳಿದ ಶಾಲೋ ಹೇಗೆ ಎಂದು ಗಮನಿಸಿದ್ದೀಯೇನು?

**ಕರ್ಣಪೂರಕ** ಅವ್ವಾ, ಆನೆಯ ಮದದ ವಾಸನೆಯಿಂದ ಈ ಕಂಪು ನನಗೆ ಗೊತ್ತಾಗ್ತಾ ಇಲ್ಲ

**ವಸಂತಸೇನೆ** ಹೆಸರು ಏನು ಬರೆದಿದೆ ಎಂದಾದರೂ ನೋಡು

**ಕರ್ಣಪೂರಕ** ಇಲ್ಲಿ ಹೆಸರು ಬರೆದಿದೆ ನೀವೇ ಓದಿ (ಎಂದು ಶಾಲನ್ನು ಕೊಡುತ್ತಾನೆ )

**ವಸಂತಸೇನೆ** : ಆರ್ಯಚಾರುದತ್ತನದು (ಎಂದು ಹೆಸರೊನ್ನೋದಿ ತುಂಬ ಆಸೆಯಿಂದ ಆ ಶಾಲನ್ನು ತೆಗೆದುಕೊಂಡು ಮೈಯ ಮೇಲೆ ತೊಟ್ಟುಕೊಳ್ಳುತ್ತಾಳೆ )

**ಚೇಟಿ** ಕರ್ಣಪೂರಕ, ಅಮ್ಮಾವ್ರಿಗೆ ಈ ಶಾಲು ಚೆನ್ನಾಗಿ ಒಪ್ಪುತ್ತಲ್ಲ?

**ಕರ್ಣಪೂರಕ** : ಹ್ಞಾ. ಅಮ್ಮಾವ್ರಿಗೆ ಶಾಲು ಒಪ್ಪುತ್ತೆ

**ವಸಂತಸೇನೆ** : ಕರ್ಣಪೂರಕ, ಇದೋ ನಿನಗಿದು ಬಹುಮಾನ (ಎಂದು ತನ್ನ ಆಭರಣವನ್ನು ಕೊಡುತ್ತಾಳೆ.)

**ಕರ್ಣಪೂರಕ** . (ತಲೆಯಲ್ಲಿಟ್ಟುಕೊಂಡು, ಅಡ್ಡಬಿದ್ದು) ಈಗಂತು ಶಾಲು ತುಂಬ ಚೆನ್ನಾಗಿ ಒಪ್ಪುತ್ತೆ ಅಮ್ಮಾವ್ರಿಗೆ

**ವಸಂತಸೇನೆ** : ಕರ್ಣಪೂರಕ, ಇಷ್ಟು ಹೊತ್ತಿನಲ್ಲಿ ಆರ್ಯಚಾರುದತ್ತ ಎಲ್ಲಿರ ಬಹುದು?

**ಕರ್ಣಪೂರಕ** · ಇದೇ ದಾರಿಯಲ್ಲಿ ಮನೆಯ ಕಡೆ ಹೋದರಪ್ಪ

**ವಸಂತಸೇನೆ** : ಚೇಟಿ, ಮೇಲಿನ ಕಡೆಗಟ್ಟಿಗೆ ಹೋಗಿ ಆರ್ಯಚಾರುದತ್ತ ಕಾಣಿಸುತ್ತಾನೆಯೇ ನೋಡೋಣ– ಬಾ (ಎಂದು ಎಲ್ಲರೂ ಹೋಗುವರು )

**"ಜೂಜುಕೋರ ಸಂವಾಹಕ"**

**ಎಂಬ ಎರಡನೆಯ ಅಂಕ**

**ಮುಗಿಯಿತು**

# ಅಂಕ · ಮೂರು

## ಕನ್ನ ಕೊರೆದದ್ದು

(ಪ್ರವೇಶ: ಚೇಟ)

**ಚೇಟ** ಕೆಲಸದಾಳುಗಳಲ್ಲಿ ಕರುಣೆಯಿರುವಂಥ
ಸಜ್ಜನನಾದರೆ ಒಡೆಯ
ಅವನು ಬಡವನಾದರೂ ಮೇಲು
ದುಡ್ಡಿನ ಪಿತ್ತ ನೆತ್ತಿಗೇರಿದ
ದುರ್ಜನನಾದರೆ ಬಲು ಕಷ್ಟ
ಒಂದೊಮ್ಮೆ ತತ್ಕಾಲ ಒಲಿದಂತೆ ಕಂಡರೂ
ಆಪತ್ತಿನಲ್ಲಿ ಅದು ಮಾಗುವಂಥದು ॥ ೧ ॥

ಅಲ್ಲದೆ–

ಊರ ಗದ್ದೆಯ ಪೈರು ತಿನ್ನುವ
ಚಟಕೆ ಬಿದ್ದ ಗೂಳಿಯನ್ನು
ತಡೆಯುವುದು ಶಕ್ಯವಿಲ್ಲ
ಬೇರೆ ಗಂಡಿನ ಜತೆಗೆ ಮಲಗುವ
ಚಾಳಿ ಹತ್ತಿದ ಮಡದಿಯನ್ನು
ತಡೆಯುವುದು ಶಕ್ಯವಿಲ್ಲ
ಜೂಜಾಟದ ಗೀಳು ಹಿಡಿದ
ಮನುಷ್ಯನನ್ನು ಕೂಡ
ತಡೆಯುವುದು ಶಕ್ಯವಿಲ್ಲ
ಯಾವುದೇ ಹುಟ್ಟುಗುಣ
ಗಟ್ಟಿ ಹತ್ತಿದರೂನು
ತಡೆಯುವುದು ಶಕ್ಯವಿಲ್ಲ ॥ ೨ ॥

ಆರ್ಯಚಾರುದತ್ತ ಸಂಗೀತ ಕೇಳೋದಕ್ಕೆ ಹೋಗಿ ಬಹಳ ಹೊತ್ತಾಯಿತು ಅರ್ಧರಾತ್ರಿ ದಾಟುತ್ತ ಬಂತು. ಇನ್ನೂ ಬರಲಿಲ್ಲವಲ್ಲ ಯಾವುದಕ್ಕೂ ಹೊರ ಬಾಗಿಲ ಜಗಲಿಯಲ್ಲೆ ಕಾಯುತ್ತ ಮಲಗುತ್ತೇನೆ (ಎಂದು ಹಾಗೆ ಮಾಡುತ್ತಾನೆ)

(ಪ್ರವೇಶ: ಚಾರುದತ್ತ ಮತ್ತು ವಿದೂಷಕ)

**ಚಾರುದತ್ತ** : ವ್ಹಾ, ವ್ಹಾ, ರೇಭಿಲ ಬಹಳ ಚೆನ್ನಾಗಿ ಹಾಡಿದ ಈ ವೀಣೆಯೆಂದರೆ ಒಂದು ರತ್ನ; ಕಡಲಲ್ಲಿ ಸಿಗೋದಿಲ್ಲ– ಅಷ್ಟೆ ಏಕೆಂದರೆ–

ಕಾಮಪೀಡಿತರಿಗಿದು ಹೃದಯಕೊಪ್ಪುವ ಕೆಳೆ
ಸಮಯಕ್ಕೆ ಸರಿಯಾಗಿ ಸಂಕೇತತಾಣಕ್ಕೆ
ಪ್ರಿಯತಮನು ಬರದಾಗ
ಹೊತ್ತು ಕಳೆವುದಕೊಂದು ಒಳ್ಳೆಯ ವಿನೋದ
ವಿರಹಪೀಡಿತರಿಗೊಂದು ಮೆಚ್ಚಿಗೆಯ ಆಸರೆ
ಕಾಮಿಸುವ ಜೋಡಿಗಳಿಗಿನ್ನಷ್ಟು ರಾಗರಸ
ಹೆಚ್ಚಿಸುವ ಸಂತಸದ ಬುಗ್ಗೆ || ೩ ||

**ವಿದೂಷಕ** ಬಾ ಮಾರಾಯ, ಮನೆಗೆ ಹೋಗೋಣ

**ಚಾರುದತ್ತ** ಓಹ್, ಭಾವ ರೇಭಿಲ ಎಷ್ಟು ಚನ್ನಾಗಿ ಹಾಡಿದ!

**ವಿದೂಷಕ** ನನಗಂತು ಈ ಇಬ್ಬರನ್ನು ಕಂಡಾಗ ನಗು ಬರ್ತದೆ: ಸಂಸ್ಕೃತ ಮಾತನಾಡೋ ಹೆಂಗಸು ಮತ್ತು ಕಿಲಕಿಲಾಂತ ಕೋಕಿಲಗಾನ ಮಾಡೋ ಗಂಡಸು ಹೆಂಗಸು ಸಂಸ್ಕೃತ ಮಾತನಾಡುವಾಗ ಹೊಸತಾಗಿ ಮೂಗುದಾರ ಹಾಕಿದ ಹಸುವಿನಂತೆ ಬುಸು ಬುಸು ಅಂತಿರ್ತಾಳೆ ಹಾಗೆಯೆ ಗಂಡಸು ಕೋಕಿಲಾಲಾಪ ಮಾಡಿದರೆ ಒಣಗಿದ ಹೂಮಾಲೆ ಹಾಕ್ಕೊಂಡು ಮಂತ್ರ ಜಪಿಸುವ ಮುದಿ ಪುರೋಹಿತನಂತೆ ನನಗಂತು ಕೊಳಕು ಅನ್ನಿಸ್ತದೆ.

**ಚಾರುದತ್ತ** ಗೆಳೆಯ, ಇವತ್ತು ಭಾವ ರೇಭಿಲ ಎಷ್ಟು ಚನ್ನಾಗಿ ಹಾಡಿದ! ಆದರೆ ನಿನಗೆ ಸಂತೋಷವಾಗಲಿಲ್ಲವಲ್ಲ!

ಅನುರಾಗ ಸೂಸುತ್ತ ಮಧುರವಾಗಿತ್ತು
ಮಿದುವಾದ ಪಲುಕಿನಲಿ ಎಂಥ ಸ್ಫುಟತೆಯಿತ್ತು
ಭಾವನೆಯ ಸೆಲೆಯಿತ್ತು
ಚೆಂದುಳ್ಳ ಚೆಲುವಿತ್ತು
ಬಗೆ ಸೆಳೆವ ಕಲೆಯಿತ್ತು
ಹೆಚ್ಚು ಹೊಗಳಿಕೆಯ ಮಾತು ಹೇಳಿ ಫಲವೇನು
ಅವನ ಆ ಮೈಯೊಳಗೆ
ಒಬ್ಬ ಹೆಣ್ಣೇ ಕುಳಿತು ಹಾಡಿದಂತಿತ್ತು || ೪ ||

ಅಲ್ಲದೆ–

ನಿಜದ ಮಾತೆಂದರೆ
ಸಂಗೀತ ಮುಗಿದರೂ ಆ ಗುಂಗು ಹೋಗಿಲ್ಲ
ದಾರಿಯುದ್ದಕೆ ನಾನು ನಡೆದಾಡುವಾಗಲೂ
ಆ ಹಾಡೆ ಕಿವಿಯೊಳಗೆ ಗುಣುಗುಣಿಸಿದಂತಿದೆ
ಅವನ ಆ ಸ್ವರದ ಸಂಯೋಜನೆ
ಆ ಹಾಡುಗಾರಿಕೆಯ ನುಡಿಯ ನುಣುಪು

ಅದಕೊಪ್ಪವಾಗಿ ದನಿಗೊಡುವ ವೀಣೆ
ಅದರ ಆ ತಂತಿಮಿಡಿತ
ಏಳು ಸ್ವರಗಳದೊಂದು ಏರಿಳಿತದಂದ
ನಡುವೆ ಆ ತಾರಕ
ಆ ವಿರಾಮದ ಮಂದ್ರ
ಗೀತಸಂಚಾರದಲಿ ಲೀಲೆಯಿಂದೆಂಬಂತೆ
ಅವನು ತೋರಿದ ಹಿಡಿತ
ಆ ನಡೆಯ ಸೊಗಸು
ಮತ್ತೆ ಮರುಕಳಿಸುವ ಆ ರಾಗಗಳ ಆವೃತ್ತಿ
ಎಲ್ಲವೂ ಚಂದ! ॥ ೫ ॥

**ವಿದೂಷಕ** ಓಯ್, ಗೆಳೆಯ, ಅಂಗಡಿಗಳ ಪಕ್ಕದ ಬೀದಿಯೆಡೆಗಳಲ್ಲಿ ನಾಯಿಗಳು ಕೂಡ ಹಾಯಾಗಿ ನಿದ್ರಿಸಿದ್ದಾವೆ ಬಾ ಮಾರಾಯ, ಮನೆಗೆ ಹೋಗೋಣ (ಎದುರು ನೋಡಿ) ಗೆಳೆಯ, ನೋಡು ನೋಡು, ಭಗವಾನ್ ಚಂದ್ರದೇವ ಕೂಡ ಕತ್ತಲೆಗೆ ದಾರಿ ಮಾಡಿಕೊಡುವಂತೆ ಮುಗಿಲಿನುಪ್ಪರಿಗೆಯಿಂದ ಕೆಳಕ್ಕಿಳಿಯುತಿದ್ದಾನೆ

**ಚಾರುದತ್ತ** ಸರಿಯಾಗಿ ಹೇಳಿದೆ–
ನೀರೊಳಗೆ ಮೈಯದ್ದಿ ಜಲಕೇಳಿಯಾಡುತಿಹ
ಕಾಡು ಸಲಗದ ಮೊನಚು ದಾಡೆತುದಿಯೊಂದು
ನೀರ ಮೇಲೆದ್ದು ಹೊಳೆವಂತೆ
ಕತ್ತಲೆಗೆ ಎಡೆಗೊಟ್ಟು ತಾನು ತುದಿಮೇಲಾಗಿ
ಮುಳುಗುತಿಹ ಈ ಚಂದ್ರ ಕಂಗೊಳಿಸುತಿಹನು ॥ ೬ ॥

**ವಿದೂಷಕ** ಓಯ್, ಇದು ನಮ್ಮನೆ ವರ್ಧಮಾನಕ, ವರ್ಧಮಾನಕ, ಬಾಗಿಲು ತೆಗೆ

**ಚೇಟ** . ಆರ್ಯಮೈತ್ರೇಯನ ಸ್ವರದ ಹಾಗೆ ಕೇಳಿಸ್ತಾ ಇದೆ ಹಾಗಾದರೆ ಆರ್ಯಚಾರುದತ್ತ ಬಂದಿದಾನೆ ಬಾಗಿಲು ತೆಗೆಯುತ್ತೇನೆ (ಹಾಗೆಯೆ ಮಾಡಿ) ಅಯ್ಯ, ಅಡ್ಡಬಿದ್ದೆ ಮೈತ್ರೇಯ, ನಿನಗೂ ನಮಸ್ಕಾರ ಇಲ್ಲಿ ಚಾಪೆ ಬಿಡಿಸಿದೆ ಇಬ್ಬರೂ ಕುಳಿತುಕೊಳ್ಳಿ

(ಇಬ್ಬರೂ ನಾಟ್ಯದಿಂದ ಪ್ರವೇಶಿಸಿ ಕೂಡುತ್ತಾರೆ)

**ವಿದೂಷಕ** . ವರ್ಧಮಾನಕ, ರದನಿಕೆಯನ್ನು ಕರೆ ಕಾಲು ತೊಳೆಯಬೇಕು

**ಚಾರುದತ್ತ** · (ಅನುಕಂಪೆಯಿಂದ) ಏಕೆ ಸುಮ್ಮನೆ ಮಲಗಿದವರನ್ನು ಎಬ್ಬಿಸುವುದು

**ಚೇಟ** . ಅಯ್ಯ ಮೈತ್ರೇಯ, ನಾನು ನೀರು ಹಾಕ್ತೇನೆ ನೀನು ಕಾಲು ತೊಳೆ

**ವಿದೂಷಕ** (ಕೋಪದಿಂದ) ಓಹೋಯ್ ಗೆಳೆಯ, ನೋಡಿದೆಯಾ, ಇವ ತೊತ್ತಿನ ಮಗ ತಾನು ನೀರು ಹಾಕೋದಂತೆ; ನಾನು ಬ್ರಾಹ್ಮಣ ಕಾಲು ತಿಕ್ಕಿ ತೊಳೆಯಬೇಕಂತೆ

**ಚಾರುದತ್ತ** ಗೆಳೆಯ ಮೈತ್ರೇಯ, ನೀನು ನೀರು ತಗೊ ವರ್ಧಮಾನಕ ಕಾಲುಗಳನ್ನು ತೊಳೆಯಲಿ

(ವಿದೂಷಕ ಹಾಗೆಯೆ ಮಾಡುತ್ತಾನೆ ವರ್ಧಮಾನಕ ಚಾರುದತ್ತನ ಕಾಲುಗಳನ್ನು ತೊಳೆದು ರಂಗದಿಂದ ಹೊರಡುತ್ತಾನೆ )

**ಚಾರುದತ್ತ** ಬ್ರಾಹ್ಮಣನಿಗೂ ಕಾಲಿಗೆ ನೀರು ಕೊಡು

**ವಿದೂಷಕ** ನಾನು ಕಾಲು ತೊಳೆದು ಆಗಬೇಕಾದ್ದೇನು? ಪೆಟ್ಟು ತಿಂದ ಕತ್ತೆಯಂತೆ ನಾನು ಮತ್ತೆ ನೆಲದಲ್ಲೆ ಹೊರಳಾಡಬೇಕಲ್ಲ!

**ಚೇಟ** ಆರ್ಯಮೈತ್ರೇಯ, ನೀನು ಬ್ರಾಹ್ಮಣನಲ್ಲವಾ!

**ವಿದೂಷಕ** ಹಾವುಗಳ ನಡುವೆ ಕೇರೆ ಹಾವು ಇದ್ದ ಹಾಗೆ ಎಲ್ಲ ಬ್ರಾಹ್ಮಣರ ನಡುವೆ ನಾನೂ ಬ್ರಾಹ್ಮಣ

**ಚೇಟ** ಅಯ್ಯ ಮೈತ್ರೇಯ, ಆಗಲಿ, ನಿನ್ನ ಕಾಲು ತೊಳೀತೇನೆ. (ಹಾಗೆಯೆ ಮಾಡಿ) ಅಯ್ಯ ಮೈತ್ರೇಯ, ಈ ಚಿನ್ನದ ಒಡವೆ ಹಗಲು ನನ್ನ ಕಾವಲು ರಾತ್ರಿ ನಿನ್ನ ಸರದಿ ಆದ್ದರಿಂದ ತಗೋ (ಎಂದು ಕೊಟ್ಟು ಹೊರಟು ಹೋಗುತ್ತಾನೆ )

**ವಿದೂಷಕ** (ತೆಗೆದುಕೊಂಡು) ಇನ್ನೂ ಇದು ಹಾಗೇ ಉಂಟಲ್ಲ! ಈ ಉಜ್ಜಯಿನಿಯಲ್ಲಿ ಯಾರಾದರೂ ಕಳ್ಳರೂ ಇಲ್ಲವಾಂತ! ನನ್ನ ನಿದ್ರಾಭಂಗ ಮಾಡುತ್ತಿರುವ ಈ ಸೂಳೇಮಗನ್ನು ಕದ್ದಾದ್ರೂ ಹೋಗಿದ್ರೆ!... ಓ ಗೆಳೆಯ, ನಾನು ಇದನ್ನು ಒಳಮನೆಯ ಚೌಕಿಯಲ್ಲಿ ಇಟ್ಟು ಬರಲಾ?

**ಚಾರುದತ್ತ** · ಬೇಡ ಒಳಗಿಡ ಬೇಡ
ಸೂಳೆಯರು ತೊಟ್ಟ ಬಂಗಾರ
ಒಳಮನೆಗೆ ಹೋಗುವುದು ತರವಲ್ಲ
ನೀನೆ ಇಟ್ಟುಕೊ ಇದನು ಓ ಬ್ರಾಹ್ಮಣ
ಅವಳ ಕೈಗಿದನು ಒಪ್ಪಿಸುವ ತನಕ || ೭ ||

(ನಿದ್ರೆಯನ್ನು ನಟಿಸುತ್ತ ಕನವರಿಸುತ್ತಾನೆ )

ನಿಜದ ಮಾತೆಂದರೆ
ಸಂಗೀತ ಮುಗಿದರೂ ಆ ಗುಂಗು ಹೋಗಿಲ್ಲ
ದಾರಿಯುದ್ದಕೆ ನಾನು ನಡೆದಾಡುವಾಗಲೂ
ಆ ಹಾಡೆ ಕಿವಿಯೊಳಗೆ ಗುಣಗುಣಿಸಿದಂತಿದೆ
ಅವನ ಆ ಸ್ವರದ ಸಂಯೋಜನೆ

ಆ ಹಾಡುಗಾರಿಕೆಯ ನುಡಿಯ ನುಣುಪು
ಅದಕೊಪ್ಪವಾಗಿ ದನಿಕೊಡುವ ವೀಣೆ
ಅದರ ಆ ತಂತಿಮಿಡಿತ
ಏಳು ಸ್ವರಗಳದೊಂದು ಏರಿಳಿತದಂದ
ನಡುವೆ ಆ ತಾರಕ
ಆ ವಿರಾಮದ ಮಂದ್ರ
ಗೀತಸಂಚಾರದಲಿ ಲೀಲೆಯಿಂದೆಂಬಂತೆ
ಅವನು ತೋರಿದ ಹಿಡಿತ
ಆ ನಡೆಯ ಸೊಗಸು
ಮತ್ತೆ ಮರುಕಳಿಸುವ ಆ ರಾಗಗಳ ಆವೃತ್ತಿ
ಎಲ್ಲವೂ ಚಂದ (೩/೫

**ವಿದೂಷಕ** ನಿದ್ದೆ ಏನಾದರೂ ಬಂತೇನು?

**ಚಾರುದತ್ತ** . ಬರ್ತಾ ಇದೆ–
ಹಣೆಯಿಂದ ಮೆಲ್ಲನಿಳಿದು ಬಂದವರಂತೆ
ನನ್ನ ಕಣ್ಣಂಚಿನಲಿ ತುಳುಕುತಿದೆ ನಿದ್ದೆ
ಕಣ್ಣಿಗದು ಕಾಣಿಸದು, ನಿಂತಲ್ಲಿ ನಿಲ್ಲದದು
ಮುಪ್ಪಿನಂತೆಯೆ ತಾನು ಆಕ್ರಮಿಸಿಕೊಂಡಿರುವ
ಜನದ ಸತ್ವವನೆ ಹೀರಿ ಬೆಳೆಯುತ್ತದೆ ॥ ೮ ॥

**ವಿದೂಷಕ** . ಹಾಗಾದರೆ ನಿದ್ದೆ ಮಾಡೋಣ (ನಿದ್ರೆಯನ್ನು ನಟಿಸುತ್ತಾನೆ )

(ಪ್ರವೇಶ: ಶರ್ವಿಲಕ)

**ಶರ್ವಿಲಕ** ಕಳ್ಳತನದಲಿ ನಾನು ಪಡೆದ ತರಬೇತಿಯಿಂದ
ಮತ್ತು ಸಾಹಸದ ಬಲದಿಂದ
ಈ ಗಾತ್ರ ಸುಖವಾಗಿ ಹೊಗುವಂಥ ಕನ್ನ ಕೊರೆದು
ನೆಲದಲ್ಲಿ ತೆವಳುತ್ತ
ಪಕ್ಕದಲಿ ಗೀರು ತಾಗಿಸಿಕೊಂಡು
ನಾನು ಬಂದಿದ್ದೇನೆ
ಪೊರೆ ಬಿಡುವ ಮುದಿಮೈಯ ಹಾವಿನಂತೆ ॥ ೯ ॥

(ಆಕಾಶದತ್ತ ನೋಡಿ ಆನಂದದಿಂದ) ಅರೆ, ಭಗವಾನ್ ಚಂದ್ರದೇವ ಇಷ್ಟರಲ್ಲೆ ಅಸ್ತಂಗತನಾಗುತಿದ್ದಾನೆ

ಪರರ ಮನೆಗೆ ಕನ್ನ ಕೊರೆಯ
ಹೊರಟು ನಿಂತ ವೀರ ನಾನು!
ಕಾವಲಿರುವ ರಾಜಭಟರು

ಹೊಂಚುತಿರುವ ಚೋರ ನಾನು!
ಕಗ್ಗತ್ತಲ ಮೊತ್ತದಲ್ಲಿ
ತಾರಕೆಗಳ ಬೆಳಕನೂ
ಮುಚ್ಚಿರುವ ಈ ಇರುಳು
ಹೆತ್ತ ತಾಯಿಯಂತೆ ನನಗೆ ಬೆಂಗಾವಲು ॥ ೧೦ ॥

ತೋಟದ ಪಕ್ಕದ ಗೋಡೆ ಕೊರೆದು ನಡುಭಾಗಕ್ಕೆ ಬಂದಿದ್ದೇನೆ ಇನ್ನು ಈ ಚೌಕಿಯ ಗೋಡೆಯನ್ನೂ ಕೊರೆದು ಒಳಗೆ ಹೋಗಬೇಕು ಓಯ್–

ಜನರು ನಿದ್ರಿಸಿದಾಗ ಕೈಕೊಳುವ ಕೆಲಸವಿದು
ನಂಬಿ ಮಲಗಿದ್ದವರ ಕೊರಳು ಕೊಯ್ಯುವ ಕೆಲಸ
ಚೌರ್ಯವೆನುವರು ಇದನು; ಅಲ್ಲಲ್ಲ, ಇದು ಶೌರ್ಯ
ಇದು ಬರಿಯ ನೀಚತನ ಎಂದು ಜನರಾಡುವರು
ಆಡುವವರಾಡುತಿರಲಿ
ನಿಂದೆಗೊಳಗಾದರೂ
ಯಾರ ಮುಂದೂ ತಲೆಯ ಬಗ್ಗಿಸದೆ ನಡೆವಂಥ
ಸ್ವಂತಿಕೆಯ ಈ ಇಂಥ ಬಾಳಾದರೂ ಬೇಕು
ಹೆರವರ ಮರ್ಜಿಗೆ ಅಂಜಲಿ ಬದ್ಧನಾಗಿ
ಬದುಕುವ ತೊತ್ತಿನ ಬಾಳು ಬೇಡ
ಮಲಗಿ ಮೈಮರೆತಿರುವ
ಪಾಂಡವ ಕುಮಾರರನು
ಕೊಲ್ಲಲಿಕೆ ಕೊನೆಗೊಮ್ಮೆ
ದ್ರೋಣಪುತ್ರನು ಹಿಡಿದ ದಾರಿಯಿದು ಕಳವೆಯಲ್ಲ ॥ ೧೧ ॥

ಆದರೆ ಯಾವ ಜಾಗದಲ್ಲಿ ಕನ್ನ ಕೊರೆಯಲಿ?

ನೀರ ಪಸೆಯನು ಹೀರಿ ಗೋಡೆ ಮೆದುವಿರಬೇಕು
ಕನ್ನ ಕೊರೆವಾಗಲೂ ಸದ್ದಾಗಬಾರದು
ಗೋಡೆಯಲಿ ಕೊರೆದ ಕನ್ನ
ನಾಳೆ ಕಣ್ಣಿಗೆ ಹೊಡೆದು
ಅಕರಾಳ ವಿಕರಾಳ ಕಣ್ಣು ಕೋರೈಸುವಂತಿರಬಾರದು
ಮಣ್ಣಿನಲಿ ಜಿಗುಟು ತುಸು ಕಮ್ಮಿಯಿರಬೇಕು
ಹುಡಿಮಣ್ಣು, ಬಿಡುಮಣ್ಣು ಹಳೆಗೋಡೆಯಿರಬೇಕು
ಹೆಣ್ಮಕ್ಕಳ ಕಣ್ತಪ್ಪಿಸಿ ಮುಂದೆ ಸಾಗಬೇಕು
ಹಾಗಿದ್ದರೆ ಮಾತ್ರವೆ ಈ ಕೆಲಸ ಕೈಗೂಡಿದಂತೆ ॥ ೧೨ ॥

(ಗೋಡೆಯನ್ನು ಪರೀಕ್ಷಿಸಿ) ದಿನವೂ ನೀರಿನ ಪಸೆ ಬಿದ್ದು, ಬಿಸಿಲಿನ ಹೊಡೆತ ತಿಂದು ಈ ಗೋಡೆ ನಸೆಯಾಗಿದೆ; ಜಿಗುಟಿಲ್ಲ ಇಲ್ಲಿ ಇಲಿ ಬೇರೆ ಬಿಲ ತೋಡಿದೆ ಓಹ್, ಕೆಲಸ ಕೈಗೂಡಿದಂತೆಯೆ ಭಗವಾನ್ ಸ್ಕಂದನ ಶಿಷ್ಯರಾದ ಕಳ್ಳರಿಗೆ ಇದು ಶುಭಸೂಚಕನೆ ಇನ್ನು ಕಾರ್ಯ ಮುಂದುವರಿಸಬೇಕು ಆದರೆ ಯಾವ ರೀತಿಯಲ್ಲಿ ಕನ್ನ ಕೊರೆಯಲಿ? ಚಿನ್ನದ ಶಕ್ತ್ಯಾಯುಧವನ್ನು ಕೈಯಲ್ಲಿ ತೊಟ್ಟ ಭಗವಾನ್ ಸ್ಕಂದ ನಾಲ್ಕು ಬಗೆಯ ಕನ್ನ ಕೊರೆಯುವ ವಿಧಾನವನ್ನು ಉಪದೇಶಿಸಿದ್ದುಂಟು: ಒಳ್ಳೆಯ ಬೆಂದ ಇಟ್ಟಿಗೆಗಳಾದರೆ ಗೋಡೆಯಿಂದ ಎಳೆದು ತೆಗೆಯೋದು; ಹಸಿಯಾದರೆ ಕಿತ್ತು ತೆಗೆಯೋದು; ಮಣ್ಣಿನ ಗೋಡೆಯಾದರೆ ನೀರು ಹಾಕಿ ಮೆತ್ತಗೆ ಮಾಡೋದು; ಮರದ್ದಾದರೆ ಮುರಿಯೋದು ಇದಂತು ಬೆಂದ ಇಟ್ಟಿಗೆ ಒಂದೊಂದೇ ಇಟ್ಟಿಗೆಯನ್ನು ಎಳೆದು ತೆಗೆಯಬೇಕು ಆದರಲ್ಲು–

ಅರಳು ತಾವರೆಯ ಆಕೃತಿಯ ಕನ್ನ,
ಬಾಲಚಂದ್ರನ ಕನ್ನ, ಸೂರ್ಯ ಕನ್ನ,
ಬಾವಿಯಗಲದ ಕನ್ನ, ತುಂಬು ಕಲಶದ ಕನ್ನ,
ಮತ್ತಂತೆಯೇ ಸ್ವಸ್ತಿಕೆಯ ತೆರನ ಕನ್ನ
ಎಲ್ಲಿ ತೋರಿಸಲೆನ್ನ ಕೈಚಳಕ ಕನ್ನದಲಿ
ನಾಳೆ ನೋಡಿದ ಜನರು ಬೆರಗಾಗುವಂತೆ ॥ ೧೩ ॥

ಈ ಬೆಂದ ಇಟ್ಟಿಗೆಯ ಗೋಡೆಯಲ್ಲಿ ತುಂಬುಕಲಶದ ಕನ್ನವೇ ಸರಿ ಅದನ್ನೆ ಮಾಡುತ್ತೇನೆ

ನಾನು ರಾತ್ರಿಯ ಹೊತ್ತು,
ಜಿಗುಟಿರದ, ಗಟ್ಟಿಮುಟ್ಟಾಗಿ ಕಟ್ಟಿರುವ
ಬೇರೆ ಗೋಡೆಗಳಲ್ಲಿ ಕನ್ನ ಕೊರೆದಾಗ
ನೆರೆಕರೆಯ ಜನವೆಲ್ಲ ಬೆಳಗೆದ್ದು ಕಂಡು
ದೂಷಿಸಿದರೂ ಕೂಡ ಈ ಕೆಲಸವನ್ನು
ಹೊಗಳುತಿದ್ದರು ನನ್ನ ಕೈಚಳಕವನ್ನು ॥ ೧೪ ॥

ಇಷ್ಟಸಿದ್ಧಿಪ್ರದನಾದ ಮುರುಗಸ್ವಾಮಿಗೆ ನಮೋನಮಃ; ಬ್ರಾಹ್ಮಣರ ನೆಚ್ಚಿನ ದೈವವಾದ, ದೇವತೆಗಳಿಗು ಪ್ರಿಯನಾದ ಸ್ವಾಮಿ ಕನಕಶಕ್ತಿಗೆ ನಮೋನಮಃ; ಆಚಾರ್ಯ ಭಾಸ್ಕರನಂದಿಗೆ ನಮೋನಮಃ; ನನ್ನ ಸಾಕ್ಷಾತ್ ಗುರುಗಳಾದ ಯೋಗಾಚಾರ್ಯರಿಗೆ ನಮೋನಮಃ ಅವರ ಮೊದಲ ಪಟ್ಟದ ಶಿಷ್ಯನಲ್ಲವೆ ನಾನು? ಅವರು ನನ್ನ ಕೈಚಳಕ ಕಂಡು ಮೆಚ್ಚಿಕೊಂಡು ಈ ಮಾಯಕದ ಮುಲಾಮು ಕೊಟ್ಟಿದ್ದಾರೆ

ಇದನು ಮೈಗೆಲ್ಲ ಬಳಿದುಕೊಂಡಾಗ
ಕಾಣರೋ ನನ್ನನ್ನು ಕಾವಲಿನ ಭಟರು
ಮೈಮೇಲೆ ಶಸ್ತ್ರಗಳು ಬಿದ್ದರೂ ಕೂಡ
ಗಾಯವಾಗದು ಮೈಗೆ ನೋವಾಗದು || ೧೫ ||

(ಹಾಗೆಯೆ ಮಾಡುತ್ತಾನೆ) ಧತ್, ಕಷ್ಟಕ್ಕೆ ಬಂತಲ್ಲ! ನಾನು ಅಳತೆಯ ಹಗ್ಗವನ್ನೆ ಮರೆತು ಬಂದಿದ್ದೇನೆ (ಆಲೋಚಿಸಿ) ಈ ಯಜ್ಞೋಪವೀತ ಅಳತೆಯ ನೂಲಾಗುತ್ತೆ ಯಜ್ಞೋಪವೀತ ಉಂಟಲ್ಲ, ಇದು ಬ್ರಾಹ್ಮಣರಿಗೆ ಭಾರೀ ಉಪಕಾರಕ್ಕೆ ಬೀಳೋ ವಸ್ತು ನನ್ನಂಥವರಿಗಂತು ವಿಶೇಷವಾಗಿ ಏಕೆ ಗೊತ್ತಾ?–

ಬೇಕಾಗುವುದು ಇದು
ಕನ್ನ ಕೊರೆಯುವ ಮೊದಲು ಗೋಡೆ ಅಳೆಯಲಿಕ್ಕೆ
ಬೇಕಾಗುವುದು ಇದು
ಮೈಗೆ ಬಿಗಿದಿರುವ ಬಂಗಾರ ಸೆಳೆಯಲಿಕ್ಕೆ
ಬೇಕಾಗುವುದು ಇದು
ಕೀಲು ಜಡಿದಿರುವ ಬಾಗಿಲನು ತೆರೆಯಲಿಕ್ಕೆ
ಬೇಕಾಗುವುದು ಇದು
ಹುಳು–ಹಾವು ಕಡಿದಾಗ ಗಾಯಕ್ಕೆ ಸುತ್ತಲಿಕ್ಕೆ || ೧೬ ||

ಅಳತೆ ಮಾಡಿ ಕೆಲಸಕ್ಕೆ ತೊಡಗುತ್ತೇನೆ. (ಹಾಗೆಯೆ ಮಾಡಿ, ಒಳಕ್ಕೆ ನೋಡಿ) ಇನ್ನು ಒಂದು ಇಟ್ಟಿಗೆ ಎಳೆದು ತೆಗೆದರೆ ಕನ್ನದ ಕೆಲಸ ಮುಗಿದಂತೆಯೆ. ಹಾಯ್, ಕಷ್ಟವೆ. ಹಾವು ಕಚ್ಚಿ ಬಿಟ್ಟಿತಲ್ಲ! (ಯಜ್ಞೋಪವೀತವನ್ನು ಬೆರಳಿಗೆ ಸುತ್ತಿ ವಿಷದ ನೋವನ್ನು ನಟಿಸುತ್ತಾನೆ ಅನಂತರ ಚಿಕಿತ್ಸೆ ಮಾಡಿ) ಈಗ ಗುಣ ವಾಯಿತು (ಪುನಃ ಕೆಲಸ ಮುಂದುವರಿಸಿ, ಒಳಕ್ಕೆ ನೋಡಿ) ಅರೆ, ದೀಪ ಉರಿಯುತ್ತಿದೆ

ಹೊನ್ನಿನಂತೆ ಹೊಳೆಯುತಿರುವ ಈ ದೀಪದ ದೊಂದಿ
ಸುತ್ತಲು ಕತ್ತಲು ಕವಿದಿಹ ಈ ಕನ್ನದ ಸಂದಿಯಲ್ಲಿ
ಹೊರಗೆ ಹೊಮ್ಮುತಿದೆ ನೆಲದೆಡೆಯಲ್ಲಿ
ಸಾಣೆಕಲ್ಲಿನಲಿಟ್ಟ ಚಿನ್ನದೆಳೆಯಂತೆ || ೧೭ ||

(ಪುನಃ ಅಗೆದು) ಕನ್ನ ಕೊರೆದಾಯಿತು. ಇರಲಿ, ಒಳಗೆ ಹೋಗುತ್ತೇನೆ. ಅಥವಾ ಒಳಗೆ ಹೋಗುವ ಮುನ್ನ ಇಲ್ಲೊಂದು ಮನುಷ್ಯಾಕೃತಿಯನ್ನು ಇರಿಸಿ ಹೋಗುತ್ತೇನೆ (ಹಾಗೆಯೆ ಮಾಡಿ) ಓಹ್, ಯಾವ ಹುಳವೂ ಇಲ್ಲ. ಮುರುಗ ಸ್ವಾಮಿಗೆ ನಮೋನಮಃ. (ಒಳಹೊಕ್ಕು, ಕಣ್ಣಾಡಿಸಿ) ಅರೆ, ಇಬ್ಬರು ಗಂಡಸರು ಮಲಗಿದ್ದಾರೆ. ಇರಲಿ. ಆತ್ಮರಕ್ಷಣೆಗಾಗಿ ಬಾಗಿಲು ತೆರೆದಿಟ್ಟು

ಬಿಡುತ್ತೇನೆ ಹಳೆಯ ಮನೆಯಾದ್ದರಿಂದ ಬಾಗಿಲು ಮುಟ್ಟಿದರೆ ಕಿರ್ ಎನ್ನುತ್ತೆ ಮೊದಲು ನೀರು ಎಲ್ಲಿದೆ ನೋಡ್ತೇನೆ ಎಲ್ಲಿದ್ದೀತು ನೀರು? (ಅತ್ತಿತ್ತ ನೋಡಿ ನೀರನ್ನು ತೆಗೆದು ಚೆಲ್ಲುತ್ತ, ಸಂಶಯದಿಂದ) ಈಗ ಇದು ನೆಲದ ಮೇಲೆ ಸರಿಯುವಾಗ ಸದ್ದು ಮಾಡಲಿಕ್ಕಿಲ್ಲ ಇರಲಿ ಹೀಗೆಯೆ ಸರಿ. (ಹಿಂಬದಿ ನೋಡುತ್ತ, ಬಾಗಿಲು ತೆರೆದು) ಇರಲಿ ಹೀಗೆಯೆ ಸರಿ ಇನ್ನು ಇವರದ್ದು ಕಣ್ಣುಕಟ್ಟು ನಿದ್ದೆಯೋ ನಿಜವಾದದ್ದೋ ಎಂದು ಪರೀಕ್ಷಿಸಬೇಕು (ಬೆದರಿಸಿ, ಪರೀಕ್ಷಿಸಿ) ಇವರು ನಿಜವಾಗಿಯೂ ನಿದ್ದೆ ಮಾಡಿದ್ದಾರೆ. ಏಕೆಂದರೆ-

ಒಂದೆ ರೀತಿಯಲಿ ನಿಃಶಂಕೆಯಿಂದ
ಸ್ಫುಟವಾಗಿ ಹೊಮ್ಮುತಿಹ ಹಾಯಾದ ಉಸಿರಾಟ
ಬಿಗಿಯಾಗಿ ಮುಚ್ಚಿರುವ ಕಣ್ಣು
ಒಳ ಹೊರಗು ನಿಷ್ಕಂಪ-ನಿಶ್ಚಲ
ಹಾಸಿಗೆಯ ಹರವನೂ ಮೀರಿ
ಹಾಯಾಗಿ ಮೈ ಚೆಲ್ಲಿ ಮಲಗಿರುವ ರೀತಿ
ರೀತಿ ಅಷ್ಟೇ ಅಲ್ಲ-
ಇದು ಕಪಟ ನಿದ್ರೆ ಆಗಿದ್ದರೆ
ಮುಖದ ಎದುರೇ ಉರಿವ
ದೀಪವನು ಸಹಿಸುವುದು ಸಾಧ್ಯವಿಲ್ಲ ॥ ೧೮ ॥

(ಸುತ್ತಲೂ ನೋಡಿ) ಏನಿದು, ಮೃದಂಗ! ಇಲ್ಲಿ ಕೊಳಲು! ಇಲ್ಲಿ ಪಣವ! ಓ ಇಲ್ಲಿ ವೀಣೆ! ಇಲ್ಲಿ ಬಗೆಬಗೆಯ ಬಿದಿರುವಾದ್ಯಗಳು! ಇಲ್ಲಿ ಬೊಂಬೆಯಾಟದ ಪುತ್ತಳಿಗಳು! ಇದು ಯಾರಾದರೂ ನಾಟ್ಯಾಚಾರ್ಯನ ಮನೆಯೋ ಹೇಗೆ? ಅಥವಾ, ನಾನು ಮನೆಯ ಗಾತ್ರ ನೋಡಿ ಯಾರೋ ಶ್ರೀಮಂತರ ಮನೆ ಎಂದು ಹೊಕ್ಕು ಸಿಕ್ಕಿಬಿದ್ದೆ ಹಾಗಾದರೆ, ಇವನು ನಿಜವಾಗಿ ದಟ್ಟದರಿದ್ರ ಇರಬಹುದೆ, ಅಥವಾ, ಅರಸರ ಭಯದಿಂದ, ಕಳ್ಳಕಾಕರ ಭಯದಿಂದ ದುಡ್ಡನ್ನು ನೆಲದಲ್ಲಿ ಹೂತಿಟ್ಟಿರಬಹುದೆ? ಈ ಶರ್ವಿಲಕನಿಗೂ ಗೊತ್ತಾಗದೆ ಇರುವ ನಿಧಿಯುಂಟಾ? ಇರಲಿ ಮಂತ್ರದ ಗುಳಿಗೆಗಳನ್ನು ಹಾಕಿ ನೋಡುತ್ತೇನೆ. (ಹಾಗೆಯೆ ಮಾಡಿ) ಯಾವೆಡೆ ಹಾಕಿದರೂ ಗುಳಿಗೆ ಹಿಗ್ಗಿಕೊಳ್ಳುತ್ತಿಲ್ಲ ಅಂದರೆ, ನಿಜವಾಗಿಯೂ ಇವನು ದರಿದ್ರನಿದ್ದಾನೆ ಆಗಲಿ ಮತ್ತೇನು ಮಾಡೋದು? ಬಂದಂತೆಯೆ ಹೋಗಿ ಬಿಡುತ್ತೇನೆ

**ವಿದೂಷಕ** : (ಕನವರಿಸುತ್ತಾನೆ) ಓಯ್ ಗೆಳೆಯ, ಕನ್ನದ ಹಾಗೆ ಕಾಣಿಸ್ತಾ ಇದೆ. ಕಳ್ಳನನ್ನು ಕಂಡ ಹಾಗೆ ಆಗ್ತಾ ಇದೆ ಈ ಚಿನ್ನದ ಗಂಟನ್ನು ನೀನೆ ತೆಗೆದಿಟ್ಟುಕೋ

**ಶರ್ವಿಲಕ** : ಏನು, ನಾನು ಇಲ್ಲಿಗೆ ಬಂದದ್ದು ಗೊತ್ತಾಗಿಯೆ ತಾನು ಬಡವ ಎಂದು ನನ್ನನ್ನು ಪರಿಹಾಸ ಮಾಡುತ್ತಿಲ್ಲವಲ್ಲ ಈತ? ಕೊಂದುಬಿಡಲೆ

ಹಾಗಾದರೆ? ಅಥವಾ ದೌರ್ಬಲ್ಯದಿಂದ ಕನವರಿಸುತಿದ್ದಾನೆಯೆ? (ಬಗ್ಗಿ ನೋಡಿ) ಓಹ್, ನಿಜವಾಗಿ ಹೌದು; ಹರಕು ಹಳೆಯ ಸ್ನಾನಪಂಚೆಯಲ್ಲಿ ಸುತ್ತಿಟ್ಟ ಈ ಚಿನ್ನದ ಒಡವೆ ದೀಪದ ಬೆಳಕಿಗೆ ಹೊಳೀತಾ ಇದೆ ಇರಲಿ ತಗೊಳ್ತೇನೆ ಅಥವಾ ನನ್ನಂತೆಯೆ ಕಷ್ಟದಲ್ಲಿರುವ ಕುಲವಂತರಿಗೆ ತೊಂದರೆ ಕೊಡಬಾರದು ಅದರಿಂದ ಹೋಗಿಬಿಡ್ತೇನೆ

**ವಿದೂಷಕ** . ಓಯ್ ಗೆಳೆಯ, ನೀನು ಈ ಚಿನ್ನದ ಗಂಟನ್ನು ತಗೊಳ್ಳದೆ ಇದ್ರೆ ಗೋವುಗಳ ಆಣೆ ಉಂಟು; ಬ್ರಾಹ್ಮಣರ ಆಣೆ ಉಂಟು

**ಶರ್ವಿಲಕ** . ಗೋವುಗಳ ಮತ್ತು ಬ್ರಾಹ್ಮಣರ ಬಯಕೆ ಪೂಜ್ಯವಾದದ್ದು; ಅದನ್ನು ಮೀರುವಂತಿಲ್ಲ ಅದರಿಂದ ತಗೊಂಡೇಬಿಡ್ತೇನೆ ಆದರೆ ದೀಪ ಉರೀತಾ ಇದೆ ದೀಪ ನಂದಿಸೋದಕ್ಕೆ ನನ್ನ ಬಳಿ ಬೆಂಕಿಹುಳ ಉಂಟಲ್ಲ ಈಗ ಅದನ್ನು ಉಪಯೋಗಿಸಲು ಸಕಾಲ ಇದನ್ನು ದೀಪದತ್ತ ಬಿಡ್ತೇನೆ ಇದು ದೀಪದ ಸುತ್ತ ವಿಚಿತ್ರವಾಗಿ ಸುತ್ತಾಡಲಿ ತನ್ನ ರೆಕ್ಕೆಗಳ ಗಾಳಿಯಿಂದ ಈ ಭದ್ರಪೀಠ ದೀಪವನ್ನು ನಂದಿಸಿ ಬಿಟ್ಟಿತು. ಥತ್, ಹಾಳಾದ ಕತ್ತಲು! ಅಥವಾ ನಾನು, ನನ್ನ ಈ ವೃತ್ತಿಯಿಂದಾಗಿ, ನಾನು ಹುಟ್ಟಿದ ಬ್ರಾಹ್ಮಣ ಕುಲಕ್ಕೆಯೆ ಕತ್ತಲು ಬಳಿದವ. ಯಾರ ಮುಂದೆಯೂ ಕೈ ಚಾಚದೆ ಬದುಕಿದ ನಿಷ್ಠಾವಂತ ಚತುರ್ವೇದಿಗಳ ಮಗನಾದ ನಾನು, ಶರ್ವಿಲಕ ಬ್ರಾಹ್ಮಣ ಸೂಳೆ ಮದನಿಕೆಯ ಮನವೊಲಿಸುವುದಕ್ಕಾಗಿ ಇಂಥ ಅಕಾರ್ಯ ಮಾಡುತಿದ್ದೇನೆ ಈಗ ನಾನು ಈ ಬ್ರಾಹ್ಮಣನ ವಿಶ್ವಾಸದ ಕೊಡುಗೆಯನ್ನು ಸ್ವೀಕರಿಸಬೇಕಾಗಿದೆ! (ಎಂದು ತೆಗೆದುಕೊಳ್ಳ ಹೋಗುತ್ತಾನೆ )

**ವಿದೂಷಕ** · ಓ ಗೆಳೆಯ, ನಿನ್ನ ತುದಿಗ್ಗೆ ಸಿಮುಸಿಮು ಉಂಟು!

**ಶರ್ವಿಲಕ** ಓಹ್, ಪ್ರಮಾದವಾಯಿತು ನೀರು ಮುಟ್ಟಿದ್ದರಿಂದ ತುದಿಗ್ಗೆ ಥಂಡಿಯಾಗಿದೆ. ಇರಲಿ, ಕಂಕುಳಲ್ಲಿ ಕೈಯಿಟ್ಟು ಬಿಸಿ ಮಾಡಿಕೊಳ್ಳುತ್ತೇನೆ. (ನಾಟ್ಯದಿಂದ ಬಲಗೈಯನ್ನು ಬಿಸಿಮಾಡಿ ಚಿನ್ನದ ಗಂಟನ್ನು ತೆಗೆದುಕೊಳ್ಳುತ್ತಾನೆ.)

**ವಿದೂಷಕ** : ತಗೊಂಡೆಯಾ?

**ಶರ್ವಿಲಕ** . ಬ್ರಾಹ್ಮಣನ ವಿಶ್ವಾಸದ ಕೊಡುಗೆಯನ್ನು ಮೀರೋದುಂಟಾ? ಆದ್ದರಿಂದ ತಗೊಂಡೆ

**ವಿದೂಷಕ** : ಈಗಂತು ತನ್ನ ಮಾಲನ್ನು ಗಿರಾಕಿಗಳಿಗೆ ಮಾರಿದ ವ್ಯಾಪಾರಿಯಂತೆ ಉಸ್ಸಪ್ಪ ಎಂದು ಹಾಯಾಗಿ ಮಲಗುತ್ತೇನೆ.

**ಶರ್ವಿಲಕ** · ಮಹಾಬ್ರಾಹ್ಮಣ, ಮಲಗು; ನೂರು ವರ್ಷ ಹೀಗೇ ಮಲಗಿರು... ಕಷ್ಟ! ಸೂಳೆ ಮದನಿಕೆಗಾಗಿ ಹೀಗೆ ಬ್ರಾಹ್ಮಣಕುಲವನ್ನು ಕತ್ತಲಲ್ಲಿ ತಳ್ಳಿದೆ. ಅಥವ, ನಾನು ನನ್ನನ್ನೆ ಕತ್ತಲ ಹೊಂಡಕ್ಕೆ ತಳ್ಳಿಕೊಂಡೆ–

ಪೌರುಷಕೆ ಬೆಲೆಯಿಲ್ಲದೀ
ಬಡತನಕೆ ಧಿಕ್ಕಾರವಿರಲಿ

ಈ ಕೆಟ್ಟ ಕೆಲಸವನು ನಾನೆ ತೆಗಳುತ್ತಿರುವೆ
ಆದರೂ ಮಾಡುತಿರುವೆ
ಇದಕೆ ಕಾರಣಃ ಇದೇ ಬಡತನ! ॥ ೧೯ ॥

ಅಂತು ಮದನಿಕೆಯನ್ನು ಕೊಂಡುಕೊಳ್ಳುವುದಕ್ಕಾಗಿ ಸದ್ಯ ವಸಂತಸೇನೆಯ ಮನೆಗೆ ಹೋಗುತ್ತೇನೆ (ಮುಂದೆ ನಡೆದು, ದಿಟ್ಟಿಸಿ ನೋಡಿ) ಅರೆ, ಹೆಜ್ಜೆಯ ಸದ್ದು ಕೇಳಿಸುತ್ತಿರುವಂತಿದೆ ಕಾವಲು ಭಟರು ಇರಲಿಕ್ಕಿಲ್ಲವಲ್ಲ? ಇರಲಿ ಕಂಬದಂತೆ ಮರವಟ್ಟು ನಿಂತುಬಿಡುತ್ತೇನೆ ಅಥವಾ ನನಗೆ, ಈ ಶರ್ವಿಲಕನಿಗೆ, ಕಾವಲು ಭಟರಿಂದೇನು ಭಯ?

ನಾನೋ–

ನಡೆಯಲ್ಲಿ ಬೆಕ್ಕು ಓಟದಲಿ ಜಿಂಕೆ
ಹಾರಿ ಹಿಡಿಯುವುದರಲ್ಲಿ ಗಿಡುಗನಂತೆ
ಮಲಗಿಹರೊ ಇಲ್ಲವೋ,
ಪುಕ್ಕಲೋ ಸಾಹಸಿಯೊ,
ಎಂಥವರು ಇವರೆಂದು
ಮೂಸಿ ತಿಳಿಯಲು ತಜ್ಞ ನಾಯಿಯಂತೆ
ಹರಿಯಲಿಕೆ ಹಾವು,
ವಿವಿಧ ವೇಷವ ತೊಟ್ಟು ಮೈಮರೆಸಿಕೊಳ್ಳಲಿಕೆ
ಡೊಂಬರಾಟದ ಇಂದ್ರಜಾಲ ನಾನು
ಹೇಗೆ ಬೇಕೋ ಹಾಗೆ ಭಾಷೆ ಬದಲಿಸುವಲ್ಲಿ
ನಾನೆ ವಾಗ್‌ದೇವತೆ
ಕತ್ತಲಲಿ ಬೆಳಕು, ಆಪತ್ತಿನಲಿ ಡುಡುಮು,
ನೆಲದಲ್ಲಿ ಕುದುರೆ, ನೀರಲ್ಲಿ ನಾನೆ ದೋಣಿ ॥ ೨೦ ॥

ಅಲ್ಲದೆ–

ಹಾವಿನಂತೆ ಸರಿಯಬಲ್ಲೆ
ಬೆಟ್ಟದಂತೆ ನಿಲ್ಲಬಲ್ಲೆ
ವೇಗವಾಗಿ ಸಾಗುವಲ್ಲಿ ಗರುಡನಾಗಬಲ್ಲೆ
ಮೊಲದಂತೆಯೆ ನೋಡಬಲ್ಲೆ
ತೋಳನಂತೆ ಹಿಡಿಯಬಲ್ಲೆ
ಬಲದಲ್ಲೊ ನಾನಂತು ಸಿಂಹದಂತೆ ॥ ೨೧ ॥

**ರದನಿಕೆ** : (ಪ್ರವೇಶಿಸಿ) ಅಯ್ಯಯ್ಯೊ, ಅಯ್ಯಯ್ಯೋ, ಹೆಬ್ಬಾಗಿಲ ಜಗಲಿಯಲ್ಲಿ ವರ್ಧಮಾನಕ ಮಲಗಿದ್ದ ಈಗ ಅವನೂ ಕಾಣಿಸೋದಿಲ್ಲ ಇರಲಿ ಆರ್ಯ ಮೈತ್ರೇಯನನ್ನು ಕೂಗಿ ಎಬ್ಬಿಸ್ತೇನೆ (ಎಂದು ಹೆಜ್ಜೆಯಿಡುತ್ತಾಳೆ )

**ಶರ್ವಿಲಕ** (ರದನಿಕೆಯನ್ನು ಕೊಲ್ಲ ಹೊರಡುತ್ತಾನೆ ಅನಂತರ ಪರಿಶೀಲಿಸಿ) ಏನು, ಹೆಂಗಸು! ಇರಲಿ ಹೋಗುತ್ತೇನೆ (ಎಂದು ಹೋಗುತ್ತಾನೆ )

**ರದನಿಕೆ** (ಮುಂದೆ ಬಂದು ಭಯದಿಂದ) ಹಾಯ್, ಹಾಯ್, ನಮ್ಮ ಮನೆಯಲ್ಲಿ ಕನ್ನ ಕೊರೆದು ಕಳ್ಳ ಓಡಿಹೋಗಿದ್ದಾನೆ ಇರಲಿ ಹೋಗಿ ಮೈತ್ರೇಯನನ್ನು ಎಬ್ಬಿಸ್ತೇನೆ (ವಿದೂಷಕ ಬಳಿ ಬಂದು) ಅಯ್ಯ ಮೈತ್ರೇಯ, ಏಳು ಏಳು ನಮ್ಮ ಮನೆಯಲ್ಲಿ ಕನ್ನ ಕೊರೆದು ಕಳ್ಳ ಓಡಿಹೋಗಿದ್ದಾನೆ

**ವಿದೂಷಕ** · (ಎದ್ದು) ಆ, ಏನೆಂದಿ, ತೊತ್ತಿನ ಮಗಳೆ, ಕಳ್ಳ ಕೊರೆದು ಕನ್ನ ಓಡಿಹೋಯಿತಾ?

**ರದನಿಕೆ** · ಆಸೆಗೆಟ್ಟವನೆ, ನಿನ್ನ ತಮಾಷೆಯೆಲ್ಲ ಸಾಕು ಕಾಣುತ್ತಿಲ್ಲವೇನು ಇಲ್ಲಿ ಕನ್ನ ಕೊರೆದದ್ದು?

**ವಿದೂಷಕ** : ಅ್ಹ, ಏನೆಂದಿ, ತೊತ್ತಿನ ಮಗಳೆ, ಎರಡನೆಯ ಬಾಗಿಲು ಕೊರೆದ ಹಾಗೆ ಉಂಟು ಎಂದೆಯಾ? ಓ ಗೆಳೆಯ, ಚಾರುದತ್ತ, ಏಳಯ್ಯ ಏಳು ನಮ್ಮ ಮನೆಯಲ್ಲಿ ಕನ್ನ ಕೊರೆದು ಕಳ್ಳ ಹೊರಟು ಹೋಗಿದ್ದಾನೆ

**ಚಾರುದತ್ತ** · ಇರಲಿ, ಓಯ್, ಸಾಕಯ್ಯ ನಿನ್ನ ತಮಾಷೆ.

**ವಿದೂಷಕ** ತಮಾಷೆಯಲ್ಲ ಮಾರಾಯ. ನೀನೇ ನೋಡಲ್ಲ.

**ಚಾರುದತ್ತ** ಎಲ್ಲಿ?

**ವಿದೂಷಕ** ಇದೋ ಇಲ್ಲಿ.

**ಚಾರುದತ್ತ** . ಆಹ್, ಈ ಕನ್ನ ಎಷ್ಟು ಚನ್ನಾಗಿದೆ.

ಮೇಲಿನಿಟ್ಟಿಗೆಯೆಳೆದು ತುದಿಯಲ್ಲಿ ಬಡವಾಗಿ
ನಡುವಿನಲಿ ಹರವಾಗಿ ತೆರೆದುಕೊಂಡಿರುವ ಈ ಕನ್ನ
ತನಗೆ ತರವಲ್ಲದಿಹ ಜನರ ಒಡನಾಟಕ್ಕೆ
ತಳ್ಳಂಕಗೊಂಡಿರುವ ನಮ್ಮ ಈ ಹಿರಿಮನೆಯ
ಹೃದಯವೇ ಬಿರಿದಂತೆ ಕಾಣಿಸುತಿದೆ || ೨೨ ||

ಇಂಥ ಕೆಲಸದಲ್ಲು ಎನಿತು ಕೈಚಳಕ, ಕಲೆಗಾರಿಕೆ!

**ವಿದೂಷಕ** : ಓ ಗೆಳೆಯ, ಇವ ಒಂದೋ ಈ ಊರಿಗೆ ಹೊಸಬನಿರಬೇಕು ಇಲ್ಲ, ಕನ್ನ ಕೊರೆಯೋದಕ್ಕೆ ಕಲಿಯುವವನಿರಬೇಕು. ಇಲ್ಲವಾದರೆ ಈ ಉಜ್ಜಯಿನಿಯಲ್ಲಿ ಯಾರಿಗೆ ಗೊತ್ತಿಲ್ಲ ನಮ್ಮ ಮನೆಯ ಸಿರಿವಂತಿಕೆಯ ಸಂಗತಿ?

**ಚಾರುದತ್ತ** : ಯಾರೊ ಪರವೂರಿನವ
ತನ್ನ ಈ ವ್ಯವಹಾರ ಕಲಿಯಲಿಕೆ ಹೊರಟವನು
ಇಲ್ಲಿ ಮಾಡಿರಬೇಕು ಇಂಥ ಕೆಲಸ
ಒಳಗಿಲ್ಲಿ ಕಾಸಿಲ್ಲ, ಆದಕೆಂದೆ ಎಲ್ಲರೂ

ಹಾಯಾಗಿ ಮಲಗಿಹರು
ಎಂದು ತಿಳಿದವನಲ್ಲ, ಅವನು
ದೊಡ್ಡ ಮನೆಯನು ಕಂಡು, ಭಾರಿ ಕುಳ ಎಂದೆಣಿಸಿ
ಕನ್ನ ಕೊರೆದನು ಪಾಪ!
ಮೈಕೈ ನೋಯಿಸಿಕೊಂಡು ಕೊರೆದದ್ದಷ್ಟೇ ಬಂತು
ಆಸೆಗೆಟ್ಟವನಾಗಿ
ಮತ್ತೆ ಬರಿಗೈಯಲ್ಲಿ ಮನೆಗೆ ಮರಳಿರಬೇಕು || ೨೩ ||

ಪಾಪ, ಇವನು ಹೋಗಿ ತನ್ನ ಗೆಳೆಯರ ಬಳಿ ಏನೆಂದು ಹೇಳೋದು– ಒಳ್ಳೆಯ ಸಾಹುಕಾರನ ಮನೆಗೆ ಹೋದೆ; ಆದರೆ ಏನೂ ಸಿಕ್ಕಿಲ್ಲ– ಎಂದೆ?!

**ವಿದೂಷಕ** : ಓಯ್, ಏನಯ್ಯಾ ಇದು? ಆ ಹಾಳು ಕಳ್ಳನ ಬಗ್ಗೆಯೆ ಅನುತಾಪ ಪಡ್ತಾ ಇದ್ದೀಯಲ್ಲ! ಅವನು ಯೋಚಿಸಿರಬೇಕು: ಭಾರಿ ದೊಡ್ಡಮನೆ ಚಿನ್ನದ ರಾಶಿಯೋ ರನ್ನದ ರಾಶಿಯೋ ಸಿಕ್ಕೀತು– ಅಂತ (ನೆನಪಿಸಿಕೊಂಡು ವಿಷಾದದಿಂದ ಸ್ವಗತ) ಆ ಚಿನ್ನದ ಗಂಟು ಏನಾಯಿತು!? (ಪುನಃ ನೆನಪಿಸಿಕೊಂಡು ಪ್ರಕಾಶ) ಓ ಗೆಳೆಯ, ನೀನು ಯಾವಾಗಲೂ ಹೇಳ್ತಾ ಇದ್ದಿಯಲ್ಲ: ಮೈತ್ರೇಯ ಹೆಡ್ಡ, ಮೈತ್ರೇಯ ದಡ್ಡಾಂತ? ನಾನು ಆ ಚಿನ್ನದ ಗಂಟನ್ನು ನಿನ್ನ ಕೈಗೆ ಕೊಟ್ಟಿದ್ದರಿಂದ ಎಷ್ಟು ಜಾಣತನವಾಯ್ತು! ಇಲ್ಲವಾದರೆ ಆ ಸೂಳೇಮಗ ಕದ್ದುಬಿಡ್ತಿದ್ದ

**ಚಾರುದತ್ತ** ತಮಾಷೆ ಮಾಡ್ಬೇಡ

**ವಿದೂಷಕ** . ಓಯ್, ನಾನು ದಡ್ಡ ಇರಬಹುದಯ್ಯ ಆದರೆ ಎಲ್ಲಿ ಯಾವಾಗ ತಮಾಷೆ ಮಾಡ್ಬೇಕೂಂತನ್ನೋದೂ ಗೊತ್ತಿಲ್ಲಾಂತ ಮಾಡಿದೆಯಾ?

**ಚಾರುದತ್ತ** . ಯಾವ ಹೊತ್ತಿನಲ್ಲಿ ನನ್ನ ಕೈಗೆ ಕೊಟ್ಟೆ?

**ವಿದೂಷಕ** . ನೀನು ಕೈಯೊಡ್ಡಿ ತಗೊಂಡಾಗ ಹೇಳಿದೆನಲ್ಲ: ನಿನ್ನ ತುದಿಗೈ ಸಿಮುಸಿಮು ಉಂಟು– ಅಂತ?

**ಚಾರುದತ್ತ** . ಒಂದೊಮ್ಮೆ ಹಾಗೂ ಇರಬಹುದು (ಎಲ್ಲೆಡೆಯು ನೋಡಿ, ಸಂತಸದಿಂದ) ಗೆಳೆಯ, ಪುಣ್ಯಕ್ಕೆ ನಿನಗೊಂದು ಸಂತೋಷದ ಸುದ್ದಿ ಹೇಳಲಾ?

**ವಿದೂಷಕ** : ಏನು, ಕಳವಾಗಲಿಲ್ಲವಲ್ಲ?

**ಚಾರುದತ್ತ** : ಕಳವಾಗಿದೆ

**ವಿದೂಷಕ** : ಮತ್ತೆ ಎಂಥದು ಸಂತೋಷದ ಸುದ್ದಿ?

**ಚಾರುದತ್ತ** . ಅವನು ಬಂದದ್ದು ವ್ಯರ್ಥವಾಗಲಿಲ್ಲವಲ್ಲಾಂತ

**ವಿದೂಷಕ** : ಅದು ಇನ್ನೊಬ್ಬರು ನ್ಯಾಸ ಇಟ್ಟ ಒಡವೆಯಲ್ಲವಾ?

**ಚಾರುದತ್ತ** ಓಹ್, ನ್ಯಾಸದ ಒಡವೆಯಲ್ಲ?! (ಎಂದು ಮೂರ್ಛೆ ಹೋಗುತ್ತಾನೆ)

**ವಿದೂಷಕ** . ನ್ಯಾಸ ಇಟ್ಟದ್ದನ್ನು ಕಳ್ಳ ಕದ್ದುಕೊಂಡು ಹೋದರೆ ನೀನು ಏಕೆ ಮೂರ್ಛೆ ಹೋಗಬೇಕು?

**ಚಾರುದತ್ತ** . (ತಿಳಿದದ್ದು) ಗೆಳೆಯ,

ನಿಜದ ಸಂಗತಿಯನ್ನು ಯಾರು ನಂಬುತ್ತಾರೆ
ಗಾಳಿಗೆ ಹಿಡಿಯುತ್ತಾರೆ ಜನರು ನನ್ನನ್ನೆ
ನಿಸ್ಸತ್ವವಾದ ಈ ದಾರಿದ್ರ್ಯ ಲೋಕದಲಿ
ಎಲ್ಲ ಸಂಶಯಗಳಿಗೆ ತವರು ನೋಡು ॥ ೨೪ ॥

ಕಷ್ಟವಯ್ಯಾ ಕಷ್ಟ

ನನ್ನ ದುಡ್ಡಿನ ಮೇಲೆ ವಿಧಿಯು ಕಣ್ಣಿಟ್ಟಿತು
ನಾನು ಕಂಗೆಡಲಿಲ್ಲ
ಈಗಲೋ ಅದು ನನ್ನ ವ್ಯಕ್ತಿತ್ವವನ್ನೇ
ಕೊಲೆಮಾಡಹೊರಟಿದೆ ॥ ೨೫ ॥

**ವಿದೂಷಕ** · ಯಾರು ಕೊಟ್ಟದ್ದು, ಯಾರು ತಗೊಂಡದ್ದು, ಏನು ಸಾಕ್ಷಿ ಅಂತ ನಾನು ಬಾಯಿಹಾರಿಸಿಬಿಡ್ತೇನೆ

**ಚಾರುದತ್ತ** : ನಾನು ಈಗ ಸುಳ್ಳು ಹೇಳಬೇಕೇನು?

ತಿರಿದು ತಂದಾದರೂ
ನ್ಯಾಸವಾಗಿಟ್ಟಿರುವ ಸೊತ್ತನ್ನು ಮರಳಿಸುವೆ
ನನ್ನ ಚಾರಿತ್ರಕ್ಕೆ ಮಸಿ ಬಳಿಯುವಂಥ
ಸುಳ್ಳನ್ನು ಹೇಳಲಾರೆ ॥ ೨೬ ॥

**ರದನಿಕೆ** : ಯಾವುದಕ್ಕೂ ನಾನಿದನ್ನು ಆರ್ಯೆ ಧೂತಾದೇವಿಗೆ ತಿಳಿಸುತ್ತೇನೆ (ಎಂದು ಹೋಗುತ್ತಾಳೆ)

(ಪ್ರವೇಶ: ಚೇಟಿಯ ಜತೆ ಚಾರುದತ್ತನ ಹೆಂಡತಿ ಧೂತಾದೇವಿ)

**ಧೂತಾದೇವಿ** : (ಗಾಬರಿಯಿಂದ) ನಿಜವಾಗಿ, ಅವರಿಗೇನೂ ಅಪಾಯ ಆಗಿಲ್ಲವಲ್ಲ? ಆರ್ಯ ಮೈತ್ರೇಯನಿಗೆ ಕೂಡ?

**ಚೇಟಿ** : ಯಜಮಾನಿ, ನಿಜವಾಗಿಯೂ. ಆದರೆ ಆ ವೇಶ್ಯೆಯ ಚಿನ್ನ ಮಾತ್ರ ಕಳವಾಗಿಹೋಯಿತು.

(ಧೂತಾದೇವಿ ಮೂರ್ಛೆಯನ್ನು ನಟಿಸುತ್ತಾಳೆ.)

**ಚೇಟಿ** : ಆರ್ಯೇ, ಧೂತಾದೇವಿ, ಸಮಾಧಾನ, ಸಮಾಧಾನ.

**ಧೂತಾದೇವಿ** : (ಸಂತೈಸಿಕೊಂಡು) ಚೇಟಿ, ಏನೆಂದೆ? ಅವರ ಮೈಗೆ ಏನೂ ಆಗಿಲ್ಲ ಎಂದೆಯಾ? ಮೈಗೆ ಕೇಡಾದರೂ ಬೇಕು; ಹೆಸರು ಕೆಡಬಾರದು ಈಗ ಉಜ್ಜಯಿನಿಯ ಜನ ಹೀಗೆ ಆಲೋಚಿಸುತ್ತಾರೆ: ಬಡತನದಿಂದ ಅವರೇ ಇಂಥ ಅಕಾರ್ಯ ಮಾಡಿದರು ಎಂದು (ಮೇಲಕ್ಕೆ ದಿಟ್ಟಿಸಿ, ನಿಟ್ಟುಸಿರುಗರೆದು) ಅಯ್ಯೋ ವಿಧಿಯೆ, ತಾವರೆಯ ಎಲೆಯ ಮೇಲಣ ನೀರ ಹನಿಯಂತೆ ಚಂಚಲವಾದ ಬಡವರ ಭಾಗ್ಯದೊಡನೆ ನೀನು ಆಟ ಆಡುವೆಯಲ್ಲ? ತವರುಮನೆಯಲ್ಲಿ ಕೊಟ್ಟ ಈ ಮುತ್ತಿನ ಹಾರವೊಂದು ನನ್ನ ಬಳಿಯಿದೆ ನಾನು ಕೊಟ್ಟರೂ ಇದನ್ನು ತಗೊಳ್ಳೋದಕ್ಕೆ ಅವರ ಅಭಿಮಾನ ಬಿಡಲಿಕ್ಕಿಲ್ಲ ಚೇಟಿ, ಆರ್ಯ ಮೈತ್ರೇಯನನ್ನು ಸ್ವಲ್ಪ ಕರೆ

**ಚೇಟಿ** · ಅಪ್ಪಣೆ ತಾಯಿ (ವಿದೂಷಕನ ಬಳಿ ಬಂದು) ಅಯ್ಯ ಮೈತ್ರೇಯ, ಧೂತಾದೇವಿ ನಿನ್ನನ್ನು ಕರೀತಿದ್ದಾಳೆ

**ವಿದೂಷಕ** . ಎಲ್ಲಿ ಆಕೆ?

**ಚೇಟಿ** ಇಲ್ಲೆ ಇದ್ದಾಳೆ ಹೋಗು

**ವಿದೂಷಕ** (ಬಂದು) ನಿನಗೆ ಮಂಗಳವಾಗಲಿ

**ಧೂತಾದೇವಿ** . ಆರ್ಯ, ನಮಸ್ಕಾರ ಆರ್ಯ, ಪೂರ್ವಕ್ಕೆ ಮುಖಮಾಡಿ ನಿಲ್ಲು

**ವಿದೂಷಕ** · ನೋಡು ತಾಯಿ, ಪೂರ್ವಕ್ಕೆ ಮುಖ ಮಾಡಿ ನಿಂತೆ

**ಧೂತಾದೇವಿ** ಆರ್ಯ, ಇದನ್ನು ತೆಗೆದುಕೊ

**ವಿದೂಷಕ** : ಏನಿದು?

**ಧೂತಾದೇವಿ** ನಾನು ರತ್ನಷಷ್ಠೀವ್ರತದ ನಿಮಿತ್ತ ಉಪವಾಸ ಹಿಡಿದಿದ್ದೇನೆ ಅದರ ಅಂಗವಾಗಿ ನಮ್ಮ ಶಕ್ತ್ಯನುಸಾರ ಬ್ರಾಹ್ಮಣರಿಗೆ ದಾನ ಕೊಡಬೇಕು ಆ ದಾನದ ಕೆಲಸ ಇನ್ನೂ ಬಾಕಿ ಉಳಿದಿದೆ ಅದಕ್ಕಾಗಿ ವ್ರತದ ದಾನ ಎಂದು ನೀನು ಈ ಮುತ್ತಿನ ಹಾರವನ್ನು ತಗೋಬೇಕು

**ವಿದೂಷಕ** : (ತಗೊಂಡು) ನಿನಗೆ ದೇವರು ಒಳ್ಳೇದು ಮಾಡಲಿ ನಾನಿನ್ನು ಬರ್ತೇನೆ ಗೆಳೆಯ ಚಾರುದತ್ತನಿಗೆ ಈ ಸಂಗತಿ ಹೇಳಬೇಕು

**ಧೂತಾದೇವಿ** : ಆರ್ಯಮೈತ್ರೇಯ, ನಾನು ತಲೆ ತಗ್ಗಿಸುವಂತೆ ಮಾತ್ರ ಮಾಡಬೇಡ (ಎಂದು ಹೋಗುತ್ತಾಳೆ )

**ವಿದೂಷಕ** : (ವಿಸ್ಮಿತನಾಗಿ) ಈಕೆ ಎಂಥ ಮಹಾನುಭಾವಳು!

**ಚಾರುದತ್ತ** · ಅರೆ, ಏಕಿನ್ನೂ ಮೈತ್ರೇಯ ತಡಮಾಡುತಿದ್ದಾನೆ ತುಂಬ ತಲೆಗೆ ಹಚ್ಚಿಕೊಂಡು ಏನಾದರೂ ಮಾಡಬಾರದ್ದನ್ನು ಮಾಡಿದರೆ ಕಷ್ಟ! ಮೈತ್ರೇಯ, ಮೈತ್ರೇಯ.

**ವಿದೂಷಕ** . (ಬಳಿಬಂದು) ಬಂದೆ ತಗೊ ಇದನ್ನು (ಮುತ್ತಿನ ಹಾರವನ್ನು ತೋರಿಸುತ್ತಾನೆ.)

**ಚಾರುದತ್ತ** : ಏನಿದು?

**ವಿದೂಷಕ** ಇದು ನೀನು ಒಳ್ಳೆಯ ಹೆಂಡತಿಯ ಕೈಹಿಡಿದದ್ದರ ಫಲ

**ಚಾರುದತ್ತ** : ಏನು? ನನ್ನಾಕೆ ನನ್ನ ಮೇಲೆ ಕನಿಕರಿಸುತಿದ್ದಾಳೆ! ಕಷ್ಟ ಈಗ ನಾನು ನಿಜವಾಗಿಯೂ ದರಿದ್ರನಾದೆ–

ವಿಧಿ ಬೆನ್ನು ತಿರುಗಿಸಲು
ನನ್ನ ಕೈ ಬರಿದಾಗಿ, ಬಡವನಾಗಿ
ಹೆಂಡತಿಯ ಕನಿಕರದ ಉಪಕಾರದ ಋಣಕ್ಕೆ
ಕೈಚಾಚಬೇಕಾಯಿತೆ?
ದುಡ್ಡುಳ್ಳ ಹೆಣ್ಣು ಗಂಡಿಗಿಂತಲು ಮೇಲು
ದುಡ್ಡಿರದ ಗಂಡು ಕಡೆ ಹೆಣ್ಣಿಗಿಂತ! ॥ ೨೭ ॥

ಅಥವಾ ನಾನು ಬಡವನಲ್ಲ ಯಾವ ನನಗೆ–

ನನ್ನ ಸ್ಥಿತಿ–ಗತಿಗೆ ಒಪ್ಪವಾಗಿ
ನಡೆವ ಹೆಂಡತಿಯಿರುವಳು
ಸುಖದಂತೆ ದುಃಖದಲು
ಬೆಂಬಿಡದ ಗೆಳೆಯ ನೀನಿರುವೆ
ಸತ್ಯದ ದೀಕ್ಷೆಯನಂತು ಬಿಟ್ಟುಕೊಡಲಿಲ್ಲ
ಬಡವರ ಬಾಳಿನಲ್ಲಿ ಇದು ಸುಲಭವೇನು? ॥ ೨೮ ॥

ಮೈತ್ರೇಯ, ಈ ಮುತ್ತಿನ ಹಾರ ಹಿಡಿದುಕೊಂಡು ವಸಂತಸೇನೆಯ ಬಳಿ ಹೋಗು ಆಕೆಗೆ ನಾನು ಹೇಳಿದೇಂತ ಹೇಳು: "ನೀನಿತ್ತ ಚಿನ್ನದ ಒಡವೆಗಳನ್ನು ನಾವು ನಮ್ಮದೇ ಸೊತ್ತು ಎಂದು ವಿಶ್ವಾಸದಿಂದ ಜೂಜಿನಲ್ಲಿ ಪಣಕ್ಕಿಟ್ಟು ಕಳೆದುಕೊಂಡೆವು. ಅದಕ್ಕೆ ಪ್ರತಿಯಾಗಿ ಈ ಮುತ್ತಿನ ಹಾರವನ್ನು ಸ್ವೀಕರಿಸಬೇಕು"– ಎಂದು

**ವಿದೂಷಕ** : ಬೇಡ, ಬೇಡ ಉಂಡದ್ದಲ್ಲ; ತಿಂದದ್ದಲ್ಲ. ಅಲ್ಪ ಬೆಲೆಯ ಆ ಚಿನ್ನವನ್ನು ಕಳ್ಳರು ಕದ್ದರೂಂತ ಅದಕ್ಕಾಗಿ ಇಡಿಯ ಭೂಮಂಡಲದಲ್ಲೆ ಅಪೂರ್ವವಾದ ಈ ಮುತ್ತಿನ ಹಾರವನ್ನು ಕಳೆದುಕೊಳ್ಳೋದಾ?

**ಚಾರುದತ್ತ** : ಗೆಳೆಯ, ಹಾಗಲ್ಲ–

ಯಾವ ನಂಬಿಕೆಯ ಆಸರೆಯ ಮೇಲೆ
ಅವಳು ನಮ್ಮಲ್ಲಿ ಆ ಚಿನ್ನವನ್ನಿಟ್ಟಳೋ
ಆ ಹಿರಿಯ ನಂಬಿಕೆಗೆ, ಅಂಥ ವಿಶ್ವಾಸಕ್ಕೆ
ನಾವು ತೆರಬೇಕಾದ ಬೆಲೆಯಿದು ॥ ೨೯ ॥

ಅದರಿಂದ ಗೆಳೆಯ, ನನ್ನ ಮೈಮೇಲೆ ಕೈಯಿಟ್ಟು ಆಣೆಯಿಡಿಸಿ ಹೇಳುತಿದ್ದೇನೆ. ಇದನ್ನು ಆಕೆಗೆ ಒಪ್ಪಿಸದೆ ಇತ್ತ ಬರಬಾರದು.. ವರ್ಧಮಾನಕ,

ಕೊರೆದಿರುವ ಕನ್ನವನು ಚೆನ್ನಾಗಿ ಮುಚ್ಚಿಬಿಡು
ಕೆಳಗೆ ಕಿತ್ತಿಟ್ಟ ಈ ಇಟ್ಟಿಗೆಗಳಿಂದ!
ಯಾರು ಯಾರೋ ಬಂದು
ಹಾಗಂತೆ–ಹೀಗಂತೆ ಎಂದು
ನಾಳೆ ಕಥೆ ಕಟ್ಟುವುದು
ಮಾತು ಬೆಳೆಸುವುದು ಬೇಕಿಲ್ಲ ನನಗೆ ॥ ೩೦ ॥

ಗೆಳೆಯ ಮೈತ್ರೇಯ, ನೀನು ಕೂಡ ಆಕೆಯ ಮುಂದೆ ದೈನ್ಯ ತೋರ್ಪಡಿಸದೆ ಧೀರತನದಿಂದ ನುಡಿಯಬೇಕು

**ವಿದೂಷಕ** : ಓಯ್, ಬಡವ ಏನು ಧೀರತನ ತೋರಿಸಿಯಾನು?

**ಚಾರುದತ್ತ** . ನಾನು ಬಡವನಲ್ಲ ಗೆಳೆಯ, ಯಾವ ನನಗೆ–
ನನ್ನ ಸ್ಥಿತಿಗತಿಗೆ ಒಪ್ಪವಾಗಿ
ನಡೆವ ಹೆಂಡತಿಯಿರುವಳು
ಸುಖದಂತೆ ದುಃಖದಲು
ಬೆಂಬಿಡದ ಗೆಳೆಯ ನೀನಿರುವೆ
ಸತ್ಯದ ದೀಕ್ಷೆಯನಂತು ಬಿಟ್ಟುಕೊಡಲಿಲ್ಲ
ಬಡವರ ಬಾಳಿನಲ್ಲಿ ಇದು ಸುಲಭವೇನು? (೩/೩೮)

ಅದರಿಂದ ನೀನು ಹೋಗು ನಾನೂ ಸ್ನಾನ ತೀರಿಸಿ ಸಂಧ್ಯಾವಂದನೆಗೆ ತೊಡಗ್ತೇನೆ

(ಎಲ್ಲರೂ ಹೋಗುತ್ತಾರೆ)

**"ಕನ್ನ ಕೊರೆದದ್ದು" ಎಂಬ**

**ಮೂರನೆಯ ಅಂಕ**

**ಮುಗಿಯಿತು**

## ಅಂಕ ನಾಕು

# ಮದನಿಕೆ ಮತ್ತು ಶರ್ವಿಲಕ

(ಪ್ರವೇಶ: ಚೇಟಿ)

**ಚೇಟಿ** · ಅಮ್ಮನವರು ಯಜಮಾನಿಯ ಬಳಿ ಹೋಗಹೇಳಿದರು ಇಲ್ಲಿ ಯಜಮಾನಿ ಚಿತ್ರದ ಹಾಳೆಯ ಮೇಲೆ ನೆಟ್ಟ ನೋಟವಿಟ್ಟು ಮದನಿಕೆ ಯೊಡನೆ ಏನನ್ನೊ ಚರ್ಚಿಸುತಿದ್ದಾಳೆ ಯಾವುದಕ್ಕು ಅತ್ತ ಹೋಗುತ್ತೇನೆ. (ಎಂದು ನಡೆದಾಡುತ್ತಾಳೆ )

(ಅನಂತರ ಹಿಂದೆ ಹೇಳಿದಂತೆಯೆ ವಸಂತಸೇನೆ ಮತ್ತು ಮದನಿಕೆಯರ ಪ್ರವೇಶ )

**ವಸಂತಸೇನೆ** ಚೇಟಿ ಮದನಿಕೆ, ಈ ಚಿತ್ರದಲ್ಲಿ ಮೂಡಿಸಿದ ಆಕೃತಿ ಆರ್ಯ ಚಾರುದತ್ತನಿಗೆ ಹೋಲುತ್ತದೆಯೆ?

**ಮದನಿಕೆ** ಚೆನ್ನಾಗಿ ಹೋಲುತ್ತದೆ

**ವಸಂತಸೇನೆ** . ನಿನಗೆ ಹೇಗೆ ಗೊತ್ತು?

**ಮದನಿಕೆ** . ಪ್ರೀತಿ ಸೂಸುವ ಯಜಮಾನಿಯ ದೃಷ್ಟಿ ಅಲ್ಲೆ ಹೂತುಹೋಗಿದೆ ಯಲ್ಲಾ–ಅದರಿಂದಲೇ ಗೊತ್ತಾಗೋದಿಲ್ಲವಾ?

**ವಸಂತಸೇನೆ** : ಹಲಾ ಮದನಿಕೆ, ಸೂಳೆಕೇರಿಯಲ್ಲಿ ವಾಸಮಾಡುವವರ ಸ್ವಭಾವ ದಂತೆ ನೀನೂ ಮುಖಕ್ಕೆ ತಕ್ಕ ಮಾತನಾಡುತಿದ್ದೀಯಾ ಹೇಗೆ?

**ಮದನಿಕೆ** . ಯಜಮಾನಿ, ಏನು ಸೂಳೆಕೇರಿಯಲ್ಲಿ ಇರುವರೆಲ್ಲ ಮುಖಕ್ಕೆ ತಕ್ಕ ಮಾತನಾಡೋದು ಎಂದು ಅಥವ ಸೂಳೆಕೇರಿಯಲ್ಲಿ ಇರುವವರು ಮಾತ್ರ ಮುಖಕ್ಕೆ ತಕ್ಕ ಮಾತನಾಡೋದು ಎಂದೇನಾದರೂ ನಿಯಮ ಉಂಟಾ?

**ವಸಂತಸೇನೆ** : ಚೇಟಿ, ನಾನಾ ಬಗೆಯ ಜನರ ಒಡನಾಟದಿಂದಾಗಿ ಸೂಳೆಯರು ಮುಖಕ್ಕೆ ತಕ್ಕ ಮಾತನಾಡೋದು ಅನಿವಾರ್ಯ ಆಗುತ್ತದೆ.

**ಮದನಿಕೆ** . ಯಜಮಾನಿಯ ಕಣ್ಣು ಮತ್ತು ಮನಸು ಎರಡೂ ಇಲ್ಲಿ ನೆಲೆ ಗೊಂಡಿದೆ ಅದಕ್ಕೆ ಕಾರಣ ಏನೂಂತ ಕೇಳ್ಳೇನು?

**ವಸಂತಸೇನೆ** : ಚೇಟಿ, ಗೆಳತಿಯರ ಕೈಯಲ್ಲಿ ಗೇಲಿಗೀಡಾಗಬಾರದು ಎಂದು ಮುಚ್ಚಿಟ್ಟುಕೊಳ್ಳುತಿದ್ದೇನೆ.

**ಮದನಿಕೆ** : ಯಜಮಾನಿ, ಅದು ಸರಿಯಲ್ಲ. ಹೆಣ್ಣು ಯಾವಾಗಲೂ ತನ್ನ ನೇಹಿಗರ ಮನದಿಂಗಿತಕ್ಕೆ ತಕ್ಕಂತೆಯೆ ನಡೆದುಕೊಳ್ಳುತ್ತಾಳೆ.

**ಚೇಟಿ** . (ಬಳಿ ಬಂದು) ಯಜಮಾನಿ, ಅಮ್ಮನವರು ಅಪ್ಪಣೆಕೊಡಿಸಿದ್ದಾರೆ: ಪಕ್ಕದ ಬಾಗಿಲಲ್ಲಿ ಪರದೆ ಮುಚ್ಚಿದ ಗಾಡಿ ಸಿದ್ಧವಾಗಿದೆಯಂತೆ ಹೊರಡಬೇಕಂತೆ

**ವಸಂತಸೇನೆ** ಚೇಟಿ, ಏನು ಆರ್ಯಚಾರುದತ್ತ ನನ್ನನ್ನು ಕರೆಕಳುಹಿಸಿದ್ದಾನೆಯೆ?

**ಚೇಟಿ** ಯಜಮಾನಿ, ಆ ಗಾಡಿಯ ಜತೆಗೆ ಹತ್ತುಸಾವಿರ ಹೊನ್ನು ಬೆಲೆ ಬಾಳುವ ಆಭರಣಗಳನ್ನು ಕಳಿಸಿದವನ ಜತೆಗೆ ನೀನು ಹೋಗಬೇಕಾಗಿದೆ

**ವಸಂತಸೇನೆ** ಯಾರವನು?

**ಚೇಟಿ** ಅವನೆ, ಮಹಾರಾಜನ ಭಾವಮೈದ, ಸಂಸ್ಥಾನಕ

**ವಸಂತಸೇನೆ** (ಕೋಪದಿಂದ) ಹೊರಟುಹೋಗು ಇನ್ನೊಮ್ಮೆ ಇಂಥ ಮಾತನ್ನಾಡಬೇಡ

**ಚೇಟಿ** · ಯಜಮಾನಿ ಕೋಪಿಸ್ಕೋಬಾರದು ನಾನು ಸಂದೇಶ ಹೊತ್ತು ತಂದವಳು

**ವಸಂತಸೇನೆ** : ನನಗೆ ಇಂಥ ಸಂದೇಶದ ಮೇಲೆಯೆ ಸಿಟ್ಟು

**ಚೇಟಿ** : ಹಾಗಾದರೆ ಅಮ್ಮನವರಿಗೆ ಏನೆಂದು ಹೇಳಲಿ?

**ವಸಂತಸೇನೆ** : ನಾನು ಬದುಕಿರಬೇಕು ಎಂದು ಆಸೆ ಇದ್ದರೆ ಅಮ್ಮನವರು ಇನ್ನು ಮುಂದೆ ಹೀಗೆ ಹೇಳಿ ಕಳಿಸಬಾರದು–ಎಂದು ಹೋಗಿ ಹೇಳು

**ಚೇಟಿ** : ನಿನ್ನಿಷ್ಟ (ಎಂದು ಹೋಗುತ್ತಾಳೆ )

**ಶರ್ವಿಲಕ** · (ಪ್ರವೇಶಿಸಿ)–

ಇರುಳಿನ ಮೇಲೆಯೆ ಕೆಟ್ಟ
ಅಪವಾದವನು ಹೊರಿಸಿ
ನಿದ್ದೆಯನು ಮತ್ತೆ ಕಾವಲು ಭಟರನೂ ಗೆದ್ದು
ಮತ್ತೀಗ ಇರುಳು ಸರಿದಾಗ
ಸೂರ್ಯ ತಾನುದಿಸಿಬಂದಾಗ
ಸಪ್ಪೆಯಾಗಿದ್ದೇನೆ ಕಿರಣಗಳ ಕಾಂತಿ–
ಕಳೆದುಕೊಂಡಿರುವ ಚಂದ್ರನಂತೆ ॥ ೧ ॥

ಅಲ್ಲದೆ–

ಯಾವನಾದರು ಕೂಡ ಬೇಗಬೇಗನೆ ನಡೆದು
ನನ್ನ ದಿಟ್ಟಿಸಿದಾಗ
ನಿಂತಿದ್ದ ನನ್ನೆಡೆಗೆ ಏನೊ ಗಾಬರಿಯಿಂದ
ಧಾವಿಸುತ ಬಂದಾಗ
ಅವರೆಲ್ಲರ ಬಗೆಗು ಅಳುಕುವುದು ಕಳ್ಳಮನಸು
ತಪ್ಪು ಮಾಡಿದ ಬಗೆಗೆ
ಎಲ್ಲೆಡೆಯು ಸಂಶಯದ ಹೊಗೆ ॥ ೨ ॥

ನಾನು ಮದನಿಕೆಗಾಗಿ ಎಂಥ ಸಾಹಸ ಮಾಡಿಬಿಟ್ಟೆ!

ಪರಿಜನರ ಜತೆಗೆ ಹರಟೆಯಾಡುತ್ತಿದ್ದ
ಒಬ್ಬನನು ಕಂಡು ಆ ಮನೆಯ ಬಿಟ್ಟೆ!
ಇನ್ನೊಂದು ಮನೆಯಲ್ಲಿ ಹೆಣ್ಮಕ್ಕಳೇ ಎಲ್ಲ
ಇರುವುದನು ಕಂಡು ಆ ಮನೆಯನೂ ಬಿಟ್ಟೆ!
ಕಾವಲಿನ ಭಟರು ಹತ್ತಿರಕೆ ಬರಲು
ಮನೆಗಂಬದಂತೆ ಮರವಟ್ಟು ನಿಂತೆ
ಇಂಥ ನೂರಾರು ಬಗೆಯ ತಂತ್ರಗಳಿಂದ
ಇರುಳಂತು ಬೆಳಗಾಯಿತು! || ೩ ||

(ಎಂದು ನಡೆದಾಡುತ್ತಾನೆ )

**ವಸಂತಸೇನೆ** ಚೇಟಿ, ಈ ಚಿತ್ರದ ಹಾಳೆಯನ್ನು ನನ್ನ ಹಾಸಿಗೆಯ ದಿಂಬಿನಡಿಯಲ್ಲಿಟ್ಟು ಬೇಗ ಬೀಸಣಿಗೆಯನ್ನು ಹಿಡಿದುಕೊಂಡು ಬಾ.

**ಮದನಿಕೆ** ಯಜಮಾನಿಯ ಅಪ್ಪಣೆ (ಎಂದು ಹಾಳೆಯನ್ನು ಹಿಡಿದುಕೊಂಡು ಹೋಗುತ್ತಾಳೆ.)

**ಶರ್ವಿಲಕ** : ಇದು ವಸಂತಸೇನೆಯ ಮನೆ. ಯಾವುದಕ್ಕೂ ಒಳಗೆ ಹೋಗುತ್ತೇನೆ (ಒಳಹೊಕ್ಕು) ಮದನಿಕೆ ಎಲ್ಲಿ ಕಾಣಸಿಗಬಹುದು?

(ಅನಂತರ ಬೀಸಣಿಕೆ ಹಿಡಿದುಕೊಂಡು ಮದನಿಕೆ ಪ್ರವೇಶಿಸುತ್ತಾಳೆ)

**ಶರ್ವಿಲಕ** : ಅರೆ, ಇಲ್ಲೆ ಇದ್ದಳೆ ಮದನಿಕೆ!–

ತನ್ನ ಚೆಲುವಿಕೆಯಿಂದ
ಕಾಮನಿಗೆ ಕೂಡ ತಲೆಗೆಡಿಸುವವಳು
ಮೈವೆತ್ತು ಬಂದ ರತಿಯಂತೆ ಕಾಣುವವಳು
ಕಾಮದ ಕಾವಿಗೆ ಬೆಂದ ಈ ಎದೆಗೆ
ಚಂದನದ ತಂಪನೆರೆಯುವವಳು || ೪ ||

ಮದನಿಕೇ,

**ಮದನಿಕೆ** · ಓಹ್, ಶರ್ವಿಲಕ! ಶರ್ವಿಲಕ ನಿನಗೆ ಸ್ವಾಗತ. ಎಲ್ಲಿಂದ ಇದು? ಏನು ಕಥೆ?

**ಶರ್ವಿಲಕ** : ಹೇಳ್ತೇನ್ಯೋ (ಎಂದು ಒಲವಿನಿಂದ ಪರಸ್ಪರ ನೋಡಿಕೊಳ್ಳುತ್ತಾರೆ.)

**ವಸಂತಸೇನೆ** : ಮದನಿಕೆ ತಡಮಾಡುತಿದ್ದಾಳೆ. ಎಲ್ಲಿಗೆ ಹೋದಳೋ ಏನೊ! (ಕಿಟಕಿಯಲ್ಲಿ ಕಂಡು) ಏನು! ಈಕೆ ಯಾರೋ ಗಂಡಿನ ಜತೆ ಪಿಸುಮಾತು ನಡೆಸಿದ್ದಾಳೆ! ಪ್ರೀತಿ ಸೂಸುವ ನೆಟ್ಟ ನೋಟದಿಂದ ಈತನನ್ನೆ ಕುಡಿದು ಬಿಡುವಂತೆ ನೋಡುತಿದ್ದಾಳಲ್ಲ! ಪ್ರಾಯಶಃ ಈ ಮನುಷ್ಯ ಈಕೆಯ

ಕೈಹಿಡಿಯುವ ಎತ್ತುಗಡೆ ನಡೆಸಿರಬೇಕು ರಮಿಸಲಿ, ರಮಿಸಲಿ ಯಾರ ಪ್ರೇಮಕ್ಕೂ ಭಂಗಬರಬಾರದು ಈಗ ಅವಳನ್ನು ಕರೆದು ಅಡ್ಡಿಮಾಡೋದಿಲ್ಲ

**ಮದನಿಕೆ** ಶರ್ವಿಲಕ, ಹೇಳಲ್ಲ?

**ಶರ್ವಿಲಕ** (ಸಂಶಯದೃಷ್ಟಿಯಿಂದ ಸುತ್ತ ದಿಟ್ಟಿಸುತ್ತಾನೆ)

**ಮದನಿಕೆ** ಶರ್ವಿಲಕ, ಏನಿದು? ನೀನು ಅಳುಕುತ್ತಿರುವಂತಿದೆ!

**ಶರ್ವಿಲಕ** ನಿನ್ನ ಬಳಿ ಒಂದು ಗುಟ್ಟು ಹೇಳಬೇಕಾಗಿದೆ ಇಲ್ಲಿ ಯಾರೂ ಇಲ್ಲ ತಾನೆ?

**ಮದನಿಕೆ** ಇಲ್ಲವಲ್ಲ

**ವಸಂತಸೇನೆ** ಏನೋ ಭಾರೀ ಗುಟ್ಟಂತೆ! ಹಾಗಾದರೆ ನಾನು ಕೇಳಬಾರದು

**ಶರ್ವಿಲಕ** ಮದನಿಕೆ, ಬೆಲೆ ತೆತ್ತರೆ ವಸಂತಸೇನೆ ನಿನ್ನನ್ನು ಬಿಟ್ಟುಕೊಡುತ್ತಾಳೇನು?

**ವಸಂತಸೇನೆ** ಓ, ಮಾತುಕತೆ ನನ್ನತ್ತವೆ ಹರಿಯುತ್ತಿದೆ ಹಾಗಾದರೆ ಈ ಕಿಟಕಿಯ ಮರೆಯಲ್ಲೆ ನಿಂತು ಏನೆಂದು ತಿಳಿಯುತ್ತೇನೆ

**ಮದನಿಕೆ** ಶರ್ವಿಲಕ, ನಾನು ಯಜಮಾನಿಯ ಹತ್ತಿರ ಈ ಪ್ರಸ್ತಾವ ಮಾಡಿದ್ದೆ ಆಗ ಹೇಳಿದಳು: ನನಗೆ ಅನ್ನಿಸಿದಾಗ ಎಲ್ಲ ಪರಿಜನರನ್ನೂ ಬೆಲೆ ತೆರದೆಯೆ ಬಿಡುಗಡೆ ಮಾಡ್ತೇನೆ– ಹಾಗೇಂತ ಅದಿರಲಿ; ಶರ್ವಿಲಕ, ನನ್ನನ್ನು ಯಜಮಾನಿಯ ಬಳಿಯಿಂದ ಬೆಲೆ ತೆತ್ತು ಬಿಡಿಸಹೊರಟಿದ್ದೀಯಲ್ಲಾ – ನಿನ್ನಲ್ಲಿ ಅಷ್ಟು ದುಡ್ಡಾದರೂ ಎಲ್ಲಿದೆ?

**ಶರ್ವಿಲಕ** ಒಂದು ಕಡೆ ಬಡತನದ ಸೋಲು
ಜತೆಗೆಯೇ ನಿನ್ನನ್ನು ಪಡೆಯಲೇಬೇಕೆನುವ ಮನದ ಬಯಕೆ
ಅದಕಾಗಿ ಓ ಭೀರು ಹೆಣ್ಣೆ,
ಈ ಇರುಳಿನಲ್ಲೊಂದು ಸಾಹಸವ ಮಾಡಿಬಿಟ್ಟೆ ॥ ೫ ॥

**ವಸಂತಸೇನೆ** : ನೋಡುವುದಕ್ಕೆ ಮುದ್ದಾಗಿದ್ದಾನೆ ಸಾಹಸದ ಸುದ್ದಿ ಕೇಳಿದಾಗ ಮಾತ್ರ ಭಯವಾಗುತ್ತಿದೆ

**ಮದನಿಕೆ** : ಶರ್ವಿಲಕ, ಒಬ್ಬ ಕ್ಷುದ್ರ ಹೆಣ್ಣಿನ ಸಲುವಾಗಿ ಎರಡನ್ನೂ ಸಂದಿಗ್ಧದಲ್ಲಿ ಸಿಲುಕಿಸಿದೆಯಲ್ಲ!

**ಶರ್ವಿಲಕ** . ಯಾವ್ದುದು ಯಾವುದು?

**ಮದನಿಕೆ** . ಶರೀರ ಮತ್ತು ಶೀಲ

**ಶರ್ವಿಲಕ** ಮೊದ್ದು ಹುಡುಗಿ, ಸಾಹಸದಲ್ಲಿ ಅದೃಷ್ಟ ನೆಲಸಿರುತ್ತದೆ

**ಮದನಿಕೆ** : ಶರ್ವಿಲಕ, ನೀನು ಈ ತನಕ ಶೀಲಗೆಟ್ಟವನಲ್ಲ ಈಗ ನನಗಾಗಿ ಸಾಹಸಕ್ಕಿಳಿದು ತೀರ ಅಬದ್ಧವನ್ನೇನಾದರೂ ಮಾಡಿಲ್ಲ ತಾನೆ?

**ಶರ್ವಿಲಕ** : ಹೂವರಳಿ ನಿಂತ ಹೊಸ ಬಳ್ಳಿಯಂತೆ
ಬಂಗಾರ ತೊಟ್ಟ ಚೆಲು ಹೆಂಗಸನ್ನು
ನಾನು ಮುಟ್ಟುವುದಿಲ್ಲ
ಬ್ರಾಹ್ಮಣರ ಸೊತ್ತನ್ನು
ಯಜ್ಞಕಾರ್ಯಕ್ಕೆ ತೆರೆದಿಟ್ಟ ಸಂಪತ್ತನ್ನು
ನಾನು ಮುಟ್ಟುವುದಿಲ್ಲ
ಸಾಕುತಾಯಿಯ ತೊಡೆಯ ತೊಟ್ಟಿಲಲ್ಲಿ
ಹಾಯಾಗಿ ಮಲಗಿರುವ ಮಗುವನ್ನು ಎಂದಿಗೂ
ದುಡ್ಡಿನಾಸೆಗೆ ಕೂಡ ನಾನು ಮುಟ್ಟುವುದಿಲ್ಲ
ಕಳ್ಳತನದಲಿ ಕೂಡ
ನ್ಯಾಯ–ಅನ್ಯಾಯಗಳ ಎಚ್ಚರವ ಕಳಕೊಡು
ದಾರಿ ತಪ್ಪುವುದಿಲ್ಲ ನಾನೆಂದಿಗೂ || ೬ ||

ಆದರಿಂದ ವಸಂತಸೇನೆಯ ಬಳಿ ವಿಜ್ಞಾಪಿಸಿಕೋ:

ಈ ಚಿನ್ನದಾಭರಣ
ನಿನ್ನ ಮೈಯ ಅಳತೆ ಕೊಟ್ಟು
ಹೇಳಿ ಮಾಡಿಸಿದಂತಿದೆ
ನನ್ನ ಮೇಲೆ ಮಮತೆಯಿಂದ
ನೀನದನು ಸ್ವೀಕರಿಸಬೇಕು
ಮತ್ತಂತೆ ಗುಟ್ಟಿನಲಿ ಧರಿಸಬೇಕುऽ– ಎಂದು || ೭ ||

**ಮದನಿಕೆ** · ಗುಟ್ಟಿನಲ್ಲಿ ತೊಡಬೇಕಾದ ಆಭರಣ ಮತ್ತು ಈಕೆ– ಇವೆರಡೂ ಸರಿಹೊಂದುವುದಿಲ್ಲವಲ್ಲ! ಯಾವುದಕ್ಕೂ ಅದನ್ನಿಲ್ಲಿ ತಾ ನಾನೊಮ್ಮೆ ಆ ಆಭರಣವನ್ನು ನೋಡುತ್ತೇನೆ

**ಶರ್ವಿಲಕ** : ಇದು ಆ ಆಭರಣ. (ಎಂದು ಅಳುಕುತ್ತ ನೀಡುತ್ತಾನೆ.)

**ಮದನಿಕೆ** : (ಪರೀಕ್ಷಿಸಿ) ಇದನ್ನೆಲ್ಲೋ ನೋಡಿದಂತಿದೆಯಲ್ಲ! ಸತ್ಯ ಹೇಳು, ಎಲ್ಲಿಂದ ತಂದೆ ಇದನ್ನು?

**ಶರ್ವಿಲಕ** : ಮದನಿಕೆ, ಅದೆಲ್ಲ ನಿನಗೇಕೆ? ತೆಗೆದುಕೊ.

**ಮದನಿಕೆ** : (ಮುನಿಸಿನಿಂದ) ನನ್ನ ಮೇಲೆ ನಿನಗೆ ಅಷ್ಟು ನಂಬಿಕೆ ಇಲ್ಲವಾದರೆ ನೀನು ನನ್ನನ್ನು ಕೊಂಡುಕೊಳ್ಳೋದಾದರೂ ಏತಕ್ಕೇಂತ?

**ಶರ್ವಿಲಕ** : ಓಹ್, ಬೆಳಿಗ್ಗೆ ಸಾಹುಕಾರರ ಬೀದಿಯಲ್ಲಿ ಕೇಳಿಬಂದ ಸುದ್ದಿಯಂತೆ ವ್ಯಾಪಾರಿ ಚಾರುದತ್ತನ ಮನೆಯಿಂದ.

(ವಸಂತಸೇನೆ ಮದನಿಕೆ ಇಬ್ಬರೂ ಮೂರ್ಛೆಯನ್ನು ನಟಿಸುತ್ತಾರೆ.)

**ಶರ್ವಿಲಕ** ಮದನಿಕೆ, ಸಮಾಧಾನ ಇದೇನಿದು?–
ದುಃಖದಿಂದ ಮೈಯು ಸಡಿಲಿದೆ
ಕಣ್ಣು ಗಾಬರಿಗೊಂಡಿದೆ
ಈ ತೊತ್ತಿನ ಕೆಲಸದಿಂದ
ನಿನ್ನ ಬಿಡಿಸುತಿದ್ದಾಗಲೂ
ನನ್ನ ಸಾಹಸದ ಬಗೆಗೆ ಅನುಕಂಪಿಸುವ ಬದಲು
ಏಕೆ ಕಂಪಿಸುತಿರುವೆ ನೀನು? ॥ ೮ ॥

**ಮದನಿಕೆ** (ಸಂತೈಸಿಕೊಂಡು) ದುಡುಕುಗಾರ, ನನಗಾಗಿ ಇಂಥ ಅಕಾರ್ಯಕ್ಕೆಳಸಿದ ನೀನು ಆ ಮನೆಯಲ್ಲಿ ಯಾರನ್ನಾದರೂ ಹೊಡೆದುರುಳಿಸಲಿಲ್ಲ, ಅಥವಾ, ಗಾಯಮಾಡಿಲ್ಲ ತಾನೆ?

**ಶರ್ವಿಲಕ** ಮದನಿಕೆ, ಹೆದರಿದವರ ಮೇಲೆ, ಮಲಗಿದವರ ಮೇಲೆ ಶರ್ವಿಲಕ ಹೊಡೆಯೋದಿಲ್ಲ ಅದರಿಂದ ನಾನು ಯಾರನ್ನೂ ಹೊಡೆದುರುಳಿಸಲಿಲ್ಲ; ಯಾರನ್ನೂ ಗಾಯಗೊಳಿಸಿಲ್ಲ

**ಮದನಿಕೆ** : ನಿಜವಾಗಿ?

**ಶರ್ವಿಲಕ** · ನಿಜವಾಗಿ

**ವಸಂತಸೇನೆ** (ತಿಳಿದೆದ್ದು) ಅಯ್ಯಪ್ಪ, ಜೀವ ಮರಳಿ ಬಂದಂತಾಯಿತು

**ಮದನಿಕೆ** . ಹಾಗಾದರೆ ಸಂತೋಷ

**ಶರ್ವಿಲಕ** (ಅಸಹನೆಯಿಂದ) ಮದನಿಕೆ, ಏನು, ಸಂತೋಷದ ಸುದ್ದಿಯೆ?–
ಒಳ್ಳೆಯ ನಡೆಯಿಂದ ಹೆಸರು ಪಡೆದಿರುವಂಥ
ಸಜ್ಜನರ ಕುಲದಲ್ಲಿ ಹುಟ್ಟಿದವನಾದರೂ
ನಿನ್ನ ಪ್ರೀತಿಗೆ ನಾನು ಬಲಿಬಿದ್ದು ಮನಸೋತು
ಮಾಡಬಾರದ್ದನ್ನು ಮಾಡುತಿದ್ದೇನೆ
ಮನ್ಮಥನು ನನ್ನ ತಲೆ ಕೆಡಿಸಿದ್ದರೂ ಕೂಡ
ಮರ್ಯಾದೆಯನು ಮಾರಿ ಬದುಕಲಿಲ್ಲ
ನೀನೊ ನನ್ನನು ಸುಳ್ಳೆ ಗೆಳೆಯನೆನ್ನುತ ರಮಿಸಿ
ಇನ್ನಾರನೋ ಮನದಿ ಬಯಸುತಿರುವೆ ॥ ೯ ॥

(ಹಂಗಿಸುವ ದನಿಯಲ್ಲಿ)–

ಕುಲವಂತರೆಂಬ ಹೆಮ್ಮರಗಳು
ತಮ್ಮ ಸರ್ವಸ್ವವನು ಹಣ್ಣುಬಿಡುತಿಹವು ಪರರಿಗಾಗಿ
ಈ ಸೂಳೆಯರೆಂಬ ಹಕ್ಕಿಗಳು
ಅದರ ಫಲವನ್ನೆಲ್ಲ ಸೂರೆ ಮಾಡುತ್ತಿಹವು ಕುಕ್ಕಿ ತಿಂದು
॥ ೧೦ ॥

ಈ ಕಾಮವೆಂಬ ಬೆಂಕಿಗೆ
ಪ್ರೀತಿಯೇ ಕಟ್ಟಿಗೆ
ಸುರತವೇ ಅದರ ಉರಿವ ಭುಗಿಲು
ಗಂಡಸರ ಯೌವನ ಮತ್ತು ಸಂಪತ್ತು
ಈ ಹೋಮದಲಿ ಸಂದ ಆಹುತಿಗಳು! ॥ ೧೧ ॥

**ವಸಂತಸೇನೆ** . (ಮುಗುಳು ನಕ್ಕು) ಓಹ್, ಈತ ಅಸ್ಥಾನದಲ್ಲಿ ಉದ್ವೇಗ ಗೊಂಡಿದ್ದಾನೆ!

**ಶರ್ವಿಲಕ** : ಏನಾದರೂ–

ಹೆಣ್ಣಿನಲ್ಲಿ ಹೊನ್ನಿನಲ್ಲಿ
ನಂಬಿಕೆಯನಿಡುವವರು
ದಡ್ಡರೆಂದೆ ನನ್ನ ಮತ
ಹೊನ್ನು ಹೇಗೆ ಹೆಣ್ಣು ಹಾಗೆ
ಕಣ್ಣು ತಪ್ಪಿಸುತ್ತ ಹೆಣ್ಣು
ಹಾವಿನಂತೆ ಸರಿದು ಮೆಲನೆ
ಜಾರಿಕೊಳುವುದು ॥ ೧೨ ॥

ಹೆಣ್ಣುಗಳ ಕಂಡು ಮೋಹಿಸಲು ತಗದು
ಮೋಹಿಸಿದ ಜನರನ್ನೆ ಮೋಸಗೊಳಿಸುವರವರು!
ಬಯಸಿ ಬಂದವಳನಷ್ಟೆ ರಮಿಸಬೇಕು
ಬಯಸದವಳನು ಮೊದಲೆ ತೊರೆದುಬಿಡಬೇಕು ॥ ೧೩ ॥

ಈ ಮಾತು ನ್ಯಾಯವಾದದ್ದು:

ದುಡ್ಡಿಗೋಸ್ಕರ ಇವರು
ನಗುತಾರೆ, ಅಳುತಾರೆ!
ಮೊದ್ದುಗಂಡಸರನ್ನು
ನಂಬಿಸುತ್ತಾರೆ, ನಿಜ,
ತಾವು ನಂಬುವುದಿಲ್ಲ!
ಅದರಿಂದ ಕುಲವಂತ
ಶೀಲವಂತರು ತಾವು
ಮಸಣದಲಿ ಅರಳಿರುವ
ಹೂವಿನಂತಿರುವ ಈ
ಸೂಳೆಯರ ಆಸೆಯನು
ಬಿಟ್ಟುಬಿಡಬೇಕು ॥ ೧೪ ॥

ಅಲ್ಲದೆ–

ಕಡಲ ತೆರೆಯಂತೆ ಇವರ ಬಗೆ ಚಂಚಲ
ಸಂಜೆ ಮೋಡದ ಹಾಗೆ ಕ್ಷಣಿಕ ಅನುರಾಗ
ದುಡ್ಡುದೋಚಿದ ಮೇಲೆ ಬರಿಗೈಯ ಗಂಡನ್ನು
ಹಿಂಡಿ ತೆಗೆದಲತಿಗೆಯ ತೆರದಲ್ಲಿ ತ್ಯಜಿಸುವರು
ಇವರು ಈ ಹೆಂಗಸರು! ॥ ೧೫ ॥

ಹೆಣ್ಣುಗಳೆಂದರೆ ಚಪಲತೆಯ ಸಾಕಾರ–

ಬಗೆಯಲ್ಲಿ ಯಾವನೋ ಒಬ್ಬನನು ನೆನೆದು
ಮತ್ತಾರನೋ ಕಣ್ಣ ನೋಟದಲಿ ಕರೆದು
ಯೌವನದ ಕಾವನ್ನು ಇನ್ನೊಬ್ಬನಲಿ ಸುರಿದು
ಯಾವನೋ ಒಬ್ಬನಿಗೆ ಮೈ ಚೆಲ್ಲುವವರು ॥ ೧೬ ॥

ಯಾರೋ ಹೇಳಿದ ಮಾತು ನಿಜ–

ಬೆಟ್ಟದ ತುದಿಯಲ್ಲಿ ತಾವರೆಯ ಬಳ್ಳಿ ಹುಟ್ಟುವುದಿಲ್ಲ
ಕತ್ತೆ ಕುದುರೆಯ ಒಜ್ಜೆಯನು ಹೊರುವುದಿಲ್ಲ
ಜವೆಗೋಧಿ ಬಿತ್ತಿದರೆ ಅಕ್ಕಿ ಬೆಳೆಯುವುದಿಲ್ಲ
ಸೂಳೆಯರ ಜಾತಿಯಲಿ ಒಳ್ಳೆಯವರಿಲ್ಲ! ॥ ೧೭ ॥

ಆಹ್, ದುರಾತ್ಮನಾದ ಚಾರುದತ್ತ, ನಿನ್ನ ಕತೆ ಮುಗಿಸಿಬಿಡ್ತೇನೆ (ಎಂದು ಕೆಲವು ಹೆಜ್ಜೆ ಹೋಗುತ್ತಾನೆ)

**ಮದನಿಕೆ** : (ಅವನ ಬಟ್ಟೆಯಂಚನ್ನು ಹಿಡಿದು) ಅರೆ, ಎಂಥ ಅಸಂಗತವಾದ ಮಾತು! ಎಲ್ಲಿ ಕೋಪದ ಕಲ್ಪನೆಯೂ ಅಸಂಭವವೋ ಅಂಥಲ್ಲಿ ನೀನು ಕೋಪಿಸುತ್ತಿರುವೆ!

**ಶರ್ವಿಲಕ** : ಏಕೆ ಅಸಂಭವ?

**ಮದನಿಕೆ** : ಈ ಆಭರಣ ನಮ್ಮ ಯಜಮಾನಿಯದ್ದು.

**ಶರ್ವಿಲಕ** : ಅದರಿಂದೇನಾಯಿತು?

**ಮದನಿಕೆ** : ಅದನ್ನು ಆಕೆ ಆ ಮಹನೀಯನ ಕೈಯಲ್ಲಿ ಕೊಟ್ಟಿದ್ದಳು

**ಶರ್ವಿಲಕ** : ಯಾಕೆ?

**ಮದನಿಕೆ** : (ಕಿವಿಯಲ್ಲಿ) ಹೀಗಿದೆ ಸಂಗತಿ.

**ಶರ್ವಿಲಕ** : (ನಾಚಿಕೊಂಡು) ಹಾಯ್ ಕಷ್ಟವೇ–

ಬೇಸಗೆಗೆ ಬೆಂದು
ನೆರಳಿನಾಸರೆಗೆಂದು
ಯಾವ ಮರದಡಿಯಲ್ಲಿ
ಬಂದು ನಿಂತಿದ್ದೆನೋ

ಆ ಮರದ ಟೊಂಗೆಗಳ
ಎಲೆಗಳನ್ನೆಲ್ಲ
ನಾನೆ ಗೊತ್ತಿಲ್ಲದೆಯೆ
ಉದುರಿಸಿದ ಹಾಗಾಯಿತು! ॥ ೧೮ ॥

**ವಸಂತಸೇನೆ** ಏನು! ಇವನೂ ಪಶ್ಚಾತ್ತಾಪ ಪಡುತಿದ್ದಾನೆ ಹಾಗಿದ್ದರೆ ಇವನು ತಿಳಿಯದೆ ಮಾಡಿದ ಕೆಲಸ ಇದು

**ಶರ್ವಿಲಕ** ಈಗೇನು ಮಾಡೋದು?

**ಮದನಿಕೆ** ಇಂಥದರಲ್ಲೆಲ್ಲ ನೀನೇ ಜಾಣ

**ಶರ್ವಿಲಕ** . ಹಾಗಲ್ಲ ನೋಡು–
ಹುಟ್ಟು ಜಾಣೆಯರಲಾ
ಹೆಣ್ಮಕ್ಕಳೆಂದರೆ
ಗಂಡಸರ ಜಾಣ್ಮೆಯೋ
ಕಲಿತು ಬಂದದ್ದು ॥ ೧೯ ॥

**ಮದನಿಕೆ** · ಶರ್ವಿಲಕ, ನನ್ನ ಮಾತು ಕೇಳುತ್ತಿಯಾದರೆ ಇದನ್ನು ಆ ಮಹಾನುಭಾವನಿಗೇ ಮರಳಿಸಿ ಬಾ

**ಶರ್ವಿಲಕ** : ಮದನಿಕೆ, ಒಂದು ವೇಳೆ ಅವನು ನ್ಯಾಯಾಲಯಕ್ಕೆ ದೂರಿತ್ತರೆ?

**ಮದನಿಕೆ** : ಚಂದ್ರನಿಂದ ಬಿಸಿಲು ಬೀಳುವುದಿಲ್ಲ

**ವಸಂತಸೇನೆ** · ಭೇಷ್ ಮದನಿಕೆ, ಭೇಷ್.

**ಶರ್ವಿಲಕ** ಮದನಿಕೆ,
ದುಃಖಪಡುತಿಲ್ಲ ನಾನೀ ದುಡುಕಿಗಾಗಿ
ಹೆದರಿಕೊಂಡೂ ಇಲ್ಲ
ಸುಮ್ಮಸುಮ್ಮನೆ ನೀನು
ಅವನ ಗುಣಗಳನೇಕೆ ನನ್ನೆದುರು ಬಿಚ್ಚುತಿರುವೆ
ಈ ಕೆಟ್ಟಕೆಲಸವನು ಏಕೆ ಮಾಡಿದೆನೋ ಎಂದು
ನಾನೇನು ನಾಚಿಕೊಂಡಿಲ್ಲ
ನ್ಯಾಯಪೀಠದ ಕಣ್ಣು ತಪ್ಪಿಸುವ ಕಲೆ ಕೂಡ
ನನ್ನಂಥ ಧೂರ್ತರಿಗೆ ಹಳೆಯ ಗತ್ತು! ॥ ೨೦ ॥

**ಮದನಿಕೆ** ಇದು ಇನ್ನೊಂದು ಉಪಾಯ:

**ವಸಂತಸೇನೆ** : ಯಾವುದಿದ್ದೀತು ಈ ಇನ್ನೊಂದು ಉಪಾಯ?

**ಮದನಿಕೆ** : ಆ ಪುಣ್ಯಾತ್ಮನ ಸಂಬಂಧಿಯಂತೆ ನಟಿಸಿ ನೀನೆ ಈ ಆಭರಣಗಳನ್ನು ನಮ್ಮ ಯಜಮಾನಿಗೆ ತಂದೊಪ್ಪಿಸು.

**ಶರ್ವಿಲಕ** . ಹೀಗೆ ಮಾಡಿದರೆ ಏನಾದೀತು?

**ಮದನಿಕೆ** . ನೀನು ಕಳ್ಳತನದ ದೋಷದಿಂದ ಮುಕ್ತನಾಗುವೆ ಆ ಪುಣ್ಯಾತ್ಮನೂ ಋಣದಿಂದ ಬಿಡುಗಡೆಗೊಂಡಂತಾಗುತ್ತದೆ ನಮ್ಮ ಯಜಮಾನಿಗೂ ತನ್ನ ಸೊತ್ತು ಕೈಸೇರಿದಂತಾಗುತ್ತದೆ

**ಶರ್ವಿಲಕ** ಇದು ತುಂಬ ಸಾಹಸದ ಕೆಲಸ

**ಮದನಿಕೆ** : ಊಂ ಕೊಂಡುಹೋಗಿ ಕೊಡು ನೀನು ಇಲ್ಲವಾದರೆ ದುಡುಕಿದಂತಾಗುತ್ತದೆ

**ವಸಂತಸೇನೆ** . ಭೇಷ್ ಮದನಿಕೆ, ಭೇಷ್, ದಾಸಿಯೊಬ್ಬಳ ಬಾಯಿಂದ ಬರುವಂಥ ಮಾತುಗಳಲ್ಲ ಇವು!

**ಶರ್ವಿಲಕ** . ನಿನ್ನ ಸಹವಾಸದ ಫಲವಾಗಿ ನಾನು
ಬಹಳಷ್ಟು ತಿಳಿವಳಿಕೆ ಗಳಿಸಿಕೊಂಡೆ
ಚಂದ್ರ ಕಂತಿದ ಮೇಲೆ ಕಗ್ಗತ್ತಲಲ್ಲಿ
ದಾರಿ ತೋರಿಸುವವರು ತುಂಬ ವಿರಳ || ೨೧ ||

**ಮದನಿಕೆ** . ಹಾಗಾದರೆ, ನೀನು ಇಲ್ಲೆ ಈ ಕಾಮದೇವಾಲಯದಲ್ಲಿ ಒಂದು ಕ್ಷಣ ನಿಂತಿರು ಅಷ್ಟರಲ್ಲಿ ನೀನು ಬಂದ ಸುದ್ದಿಯನ್ನು ಯಜಮಾನಿಗೆ ಮುಟ್ಟಿಸಿಬಿಡುತ್ತೇನೆ

**ಶರ್ವಿಲಕ** · ಹಾಗೆಯೆ ಆಗಲಿ

**ಮದನಿಕೆ** : (ವಸಂತಸೇನೆಯ ಬಳಿ ಬಂದು) ಯಜಮಾನಿ, ಇವ, ಚಾರುದತ್ತನ ಕಡೆಯವ, ಒಬ್ಬ ಬ್ರಾಹ್ಮಣ ಬಂದಿದ್ದಾನೆ

**ವಸಂತಸೇನೆ** . ಚೇಟಿ, ಆತನ ಕಡೆಯವನೆಂದು ನಿನಗೆ ಹೇಗೆ ಗೊತ್ತಾಯಿತು?

**ಮದನಿಕೆ** : ಯಜಮಾನಿ, ಸ್ವಂತದ ಪೈಕಿಯವರದ್ದೂ ನನಗೆ ಗೊತ್ತಿಲ್ಲವಾ?

**ವಸಂತಸೇನೆ** : (ತಲೆದೂಗಿ ನಕ್ಕು, ಸ್ವಗತ) ನ್ಯಾಯವಾದದ್ದೆ (ಪ್ರಕಾಶ) ಬರಹೇಳು

**ಮದನಿಕೆ** : ಯಜಮಾನಿಯ ಅಪ್ಪಣೆ. (ಶರ್ವಿಲಕನ ಬಳಿ ಬಂದು) ಶರ್ವಿಲಕ, ಒಳಹೋಗು

**ಶರ್ವಿಲಕ** : (ವಸಂತಸೇನೆಯ ಬಳಿ ಬಂದು ಸಂಕೋಚಪಡುತ್ತ) ನಿನಗೆ ಮಂಗಳವಾಗಲಿ.

**ವಸಂತಸೇನೆ** : ಆರ್ಯ, ನಮಸ್ಕಾರ. ಕೂತುಕೊಳ್ಳಿ

**ಶರ್ವಿಲಕ** : ಸಾಹುಕಾರ ಹೀಗೆ ಹೇಳಿಕಳಿಸಿದ್ದಾನೆ: ನಮ್ಮ ಮನೆ ತುಂಬ ಹಳೆಯದಾದ್ದರಿಂದ ಈ ಚಿನ್ನದ ಗಂಟನ್ನು ಕಾಪಾಡೋದು ಕಷ್ಟವಾಗಿದೆ ಅದರಿಂದ ಮರಳಿಪಡೆಯಬೇಕು – ಎಂದು. (ಎಂದು ಮದನಿಕೆಯ ಕೈಯಲ್ಲಿ ಕೊಟ್ಟು ಹೊರಡುತ್ತಾನೆ )

**ವಸಂತಸೇನೆ** · ಆರ್ಯ, ನನ್ನ ಪ್ರತಿಸಂದೇಶವನ್ನೂ ನೀನು ಆತನಿಗೆ ಮುಟ್ಟಿಸಬೇಕಲ್ಲ!

**ಶರ್ವಿಲಕ** (ಸ್ವಗತ) ಯಾರು ಹೋಗ್ತಾರೆ ಅಲ್ಲಿಗೆ? (ಪ್ರಕಾಶ) ಏನು ನಿನ್ನ ಪ್ರತಿಸಂದೇಶ?

**ವಸಂತಸೇನೆ** · ಆರ್ಯ, ಈ ಮದನಿಕೆಯನ್ನು ಸ್ವೀಕರಿಸಬೇಕು

**ಶರ್ವಿಲಕ** ಆರ್ಯೇ, ನನಗೆ ಅರ್ಥ ಆಗಿಲ್ಲ

**ವಸಂತಸೇನೆ** ನನಗೆ ಅರ್ಥ ಆಗಿದೆ

**ಶರ್ವಿಲಕ** · ಏನು ಸಂಗತಿ?

**ವಸಂತಸೇನೆ** ಆರ್ಯಚಾರುದತ್ತ ನನ್ನ ಬಳಿ ಹೀಗೆ ಹೇಳಿದ್ದ: ಯಾರು ಈ ಆಭರಣವನ್ನು ನಿನಗೆ ತಂದೊಪ್ಪಿಸುವನೋ ಆತನಿಗೆ ನೀನು ಮದನಿಕೆಯನ್ನು ಕೊಡಬೇಕು– ಎಂದು ಅದರಿಂದ ಆತನೆ ಈಕೆಯನ್ನು ನಿನಗೆ ಕೊಟ್ಟದ್ದು ಎಂದು ತಿಳಿದು ಆರ್ಯ ಸ್ವೀಕರಿಸಬೇಕು

**ಶರ್ವಿಲಕ** (ಸ್ವಗತ) ಅರೆ, ಈಕೆಗೆ ನನ್ನ ಸಂಗತಿ ತಿಳಿದುಬಿಟ್ಟಿದೆ (ಪ್ರಕಾಶ) ಭೇಷ್, ಆರ್ಯಚಾರುದತ್ತ, ಭೇಷ್,

ಮನುಷ್ಯಜನ್ಮದಲಿ ಬಂದ ಮೇಲೆ ಸದಾ
ಗುಣವಂತರಾಗಿರಲು ಹೆಣಗಬೇಕು
ಬಡವನಾದರು ತಾನು ಗುಣವಂತ ಬೇಕು
ಗುಣವಿರದ ಶ್ರೀಮಂತನಲ್ಲ ॥ ೨೨ ॥

ಅಲ್ಲದೆ–

ಗುಣವಂತನಾಗಲಿಕೆ ಪುರುಷ ಯತ್ನಿಸಬೇಕು
ಗುಣವಂತಿಕೆಗೆಟುಕದ್ದು ಯಾವುದೂ ಇಲ್ಲ
ಗುಣದ ಗರಿಮೆಯಿಂದಲೇ ಚಂದ್ರದೇವ
ಯಾರು ಏರದ ಶಿವನ ತಲೆಯೇರಿ ಕುಳಿತ ॥ ೨೩ ॥

**ವಸಂತಸೇನೆ** : ಯಾರಲ್ಲಿ ಗಾಡಿಯವರು?

**ಚೇಟಿ** · (ಗಾಡಿಯೊಡನೆ ಪ್ರವೇಶಿಸಿ) ತಾಯಿ, ಗಾಡಿ ಸಿದ್ಧವಾಗಿದೆ.

**ವಸಂತಸೇನೆ** : ಚೇಟಿ ಮದನಿಕೆ, ನನ್ನನ್ನು ಕಣ್ತುಂಬ ನೋಡಮ್ಮ. ನಿನ್ನನ್ನು ದಾನಮಾಡಿದ್ದೇನೆ. ಗಾಡಿಯೇರು. ನನ್ನನ್ನು ಮರೆಯೋದಿಲ್ಲ ತಾನೆ?

**ಮದನಿಕೆ** : (ಅಳುತ್ತ) ನಾನು ಯಜಮಾನಿಯಿಂದ ಪರಿತ್ಯಕ್ತಳಾದೆ. (ಎಂದು ಕಾಲಿಗೆ ರಗುತ್ತಾಳೆ.)

**ವಸಂತಸೇನೆ** : ಈಗ ನಾನೇ ನಿನಗೆ ನಮಸ್ಕರಿಸಬೇಕು. ಹೋಗು. ಗಾಡಿಯನ್ನೇರು. ನನ್ನನ್ನು ಮರೆಯೋದಿಲ್ಲ ತಾನೆ?

**ಶರ್ವಿಲಕ** ನಿನಗೆ ಮಂಗಳವಾಗಲಿ ಮದನಿಕೆ,
ಈಕೆಯನು ಕಣ್ತುಂಬ ನೋಡು
ತಲೆ ಬಗ್ಗಿಸಿ ಕಾಲುಗಳಿಗೆರಗು
ಈಕೆಯಿಂದಲ್ಲವೇ ನಿನಗೆ ದೊರಕಿದ್ದು
ಒಬ್ಬ ಗಂಡಿನ ಕೈಯ ಹಿಡಿದು
ವಧುವಾಗಿ ಬಾಳುವ ಭಾಗ್ಯರಕ್ಷೆ ॥ ೨೪ ॥

(ಎಂದು ಮದನಿಕೆಯೊಡನೆ ಗಾಡಿಯನ್ನೇರಿ ಹೊರಡಲು ಅಣಿಯಾಗುತ್ತಾನೆ )

(ತೆರೆಯ ಮರೆಯಲ್ಲಿ)

ಯಾರಿದ್ದೀರಿ ಅಲ್ಲಿ, ಯಾರಿದ್ದೀರಿ? ರಾಜ್ಯದ ಅಧಿಕಾರಿಗಳು ಆಜ್ಞಾಪಿಸುತಿದ್ದಾರೆ: "ಈ ಆರ್ಯಕನೆಂಬ ಗೋವಳರ ಹುಡುಗ ರಾಜನಾಗುತ್ತಾನೆ ಎಂಬ ಸಿದ್ಧಪುರುಷರ ಕಣಿಯಿಂದ ಸಂತಪ್ತನಾದ ಮಹಾರಾಜ ಪಾಲಕ ಗೊಲ್ಲರ ಕೇರಿಯಿಂದ ಆತನನ್ನು ತಂದು ಘೋರವಾದ ಸೆರೆಮನೆಯಲ್ಲಿ ಬಂಧಿಸಿದ್ದಾನೆ ಆದರಿಂದ ನೀವೆಲ್ಲರೂ ನಿಮ್ಮನಿಮ್ಮ ಠಾಣಗಳಲ್ಲಿ ಎಚ್ಚರದಿಂದಿರಬೇಕು"

**ಶರ್ವಿಲಕ** (ಕಿವಿಗೊಟ್ಟು) ಏನು? ನನ್ನ ಪ್ರಿಯಮಿತ್ರ ಆರ್ಯಕನನ್ನು ಪಾಲಕ ಮಹಾರಾಜ ಬಂಧಿಸಿದ್ದಾನೆಯೆ? ನಾನು ಹೆಂಡತಿಯನ್ನು ಬೇರೆ ಕಟ್ಟಿಕೊಂಡೆನಲ್ಲ! ಆಹ್, ಕಷ್ಟವೆ ಅಥವಾ–
ಲೋಕದಲಿ ಗಂಡಸರಿಗೀ ಎರಡು
ಬಹಳ ಮೆಚ್ಚಿನ ಸೊತ್ತು:
ಗೆಳೆಯ ಮತ್ತು ಹೆಂಡತಿ!
ಈ ಸಂದರ್ಭದಲ್ಲಂತು
ನೂರು ಚಲುವೆಯರಿಗಿಂತಲು
ಗೆಳೆತನದ ಬಂಧನವೆ ಮೇಲು ॥ ೨೫ ॥

ಇರಲಿ ಗಾಡಿಯಿಂದ ಇಳಿಯುತ್ತೇನೆ (ಎಂದು ಇಳಿಯುತ್ತಾನೆ )

**ಮದನಿಕೆ** : (ಕಣ್ಣೀರು ಸುರಿಸುತ್ತ ಕೈಜೋಡಿಸಿ) ಇದು ನಿಜ ಆದರೆ ಮೊದಲು ನೀನು ನನ್ನನ್ನು ಹಿರಿಯರ ಸ್ವಾಧೀನ ಒಪ್ಪಿಸಿ ಹೋಗು

**ಶರ್ವಿಲಕ** · ಪ್ರಿಯೆ, ಭೇಷ್ ಭೇಷ್ ನಾನು ಬಯಸಿದ್ದನ್ನೆ ನೀನು ಆಡುತ್ತಿರುವೆ (ಚೇಟನನ್ನು ಕುರಿತು) ಭದ್ರ, ಸಾಹುಕಾರ ರೇಭಿಲನ ಮನೆ ಗೊತ್ತಲ್ಲ?

**ಚೇಟ** . ಗೊತ್ತು.

**ಶರ್ವಿಲಕ** : ಈಕೆಯನ್ನು ಅಲ್ಲಿ ಬಿಟ್ಟು ಬಾ

**ಚೇಟ** : ಅಪ್ಪಣೆ ಅಯ್ಯ.

**ಮದನಿಕೆ** ನಿನ್ನ ಮಾತಿನಂತೆ ನಾನು ಅಲ್ಲಿಗೆ ಹೋಗುತ್ತೇನೆ ನೀನೂ ತುಂಬ ಜಾಗ್ರತೆಯಿಂದಿರಬೇಕು, ಆರ್ಯಪುತ್ರ. (ಎಂದು ಹೋಗುತ್ತಾಳೆ )

**ಶರ್ವಿಲಕ** . ನಾನೀಗ–

ನನ್ನ ಬಂಧುಗಳನ್ನು ಮತ್ತು ವಿಟಜನರನ್ನು,
ತನ್ನ ತೋಳ್‌ಬಲದಿಂದ ಹೆಸರು ಪಡೆದವರನ್ನು,
ದೊರೆಯ ಬಿರುನಡೆಯಿಂದ ಕೋಪಗೊಂಡಿರುವಂಥ
ಅರಮನೆಯ ಕೆಲಸದವರನ್ನು,
ಈ ಇಂಥವರನೆಲ್ಲ ಹುರಿದುಂಬಿಸಲು ಬೇಕು
ನನ್ನ ಗೆಳೆಯನ ಬಿಡುಗಡೆಯ ಸಲುವಾಗಿ!
ಉದಯನನ ಬಿಡುಗಡೆಗೆ
ಯೌಗಂಧರಾಯಣನು ಸಂಘಟಿಸಿದಂತೆ ॥ ೨೬ ॥

ಕಾರಣವಿಲ್ಲದೆಯೆ ನನ್ನ ಗೆಳೆಯನನು
ಸೆರೆಯೊಳಿಡಲಾಗಿದೆ
ತಮ್ಮ ಕಾರಸ್ಥಾನ ಎಲ್ಲಿ ಬಯಲಾದೀತೊ
ಎಂದು ಹೆದರಿರುವ ದುಷ್ಟಶತ್ರುಗಳು
ಹೂಡಿರುವ ಹೂಟವಿದು!
ರಾಹು ಕಬಳಿಸಿದ ಚಂದ್ರನ ತೆರ
ಸೆರೆಯಾಗಿ ಕುಳಿತಿರುವ ಗೆಳೆಯನನ್ನು
ನಾನು ಚಂಗನೆ ಹೋಗಿ ಬಿಡಿಸಿಕೊಳುವೆ ॥ ೨೭ ॥

(ಎಂದು ಹೋಗುತ್ತಾನೆ.)

**ಚೇಟಿ** · ಯಜಮಾನಿ, ಒಂದು ಸಂತಸದ ಸುದ್ದಿ. ಆರ್ಯಚಾರುದತ್ತನ ಕಡೆಯಿಂದ ಒಬ್ಬ ಬ್ರಾಹ್ಮಣ ಬಂದಿದ್ದಾನೆ.

**ವಸಂತಸೇನೆ** : ಇವತ್ತಿನ ದಿನ ಎನಿತು ಸುಂದರ! ಚೇಟಿ, ಮಾರ್ಗದರ್ಶಿಯಾದ ಬಂಧುಲನ ಜತೆಗೆ ಗೌರವದಿಂದ ಆತನನ್ನು ಬರಮಾಡು.

**ಚೇಟಿ** : ಯಜಮಾನಿಯ ಅಪ್ಪಣೆ. (ಎಂದು ಹೋಗುತ್ತಾಳೆ.)

(ಪ್ರವೇಶ: ಬಂಧುಲನ ಜತೆಗೆ ವಿದೂಷಕ)

**ವಿದೂಷಕ** : ಏನಾಶ್ಚರ್ಯವಯ್ಯಾ! ರಾಕ್ಷಸರಾಜನಾದ ರಾವಣ ಕಠಿನ ತಪಸ್ಸಿನಿಂದ ಗೆದ್ದ ಪುಷ್ಪಕವಿಮಾನದಲ್ಲಿ ಕುಳಿತು ತಿರುಗಾಡುತ್ತಿದ್ದನಂತೆ. ನಾನೊ ಯಾವ ತಪಸ್ಸಿನ ತಾಪತ್ರಯಕ್ಕು ಕೈಹಾಕದ ಬ್ರಾಹ್ಮಣ. ಆದರೂ ಗಂಡು–ಹೆಣ್ಣಿನ ಪರಿವಾರ ಸಮೇತನಾಗಿ ಸಂಭ್ರಮದಿಂದ ತಿರುಗಾಡುತಿದ್ದೇನೆ.

**ಚೇಟಿ** : ಅಯ್ಯ, ನೋಡು, ಇದು ನಮ್ಮನೆಯ ಹೆಬ್ಬಾಗಿಲು.

**ವಿದೂಷಕ** (ನೋಡಿ ಅಚ್ಚರಿಯಿಂದ) ಓಹೋಯ್, ವಸಂತಸೇನೆಯ ಮನೆಯ ಹೆಬ್ಬಾಗಿಲು ಏನು ಚೆಂದ! ನೀರು ಸಿಂಪಡಿಸಿ, ಗುಡಿಸಿ, ಬಳಿದ ಹಸಿರು ಬಣ್ಣ! ನೆಲದ ಮೇಲೆಲ್ಲ ಕಂಪುಸೂಸುವ ಬಣ್ಣಬಣ್ಣದ ಹೂವುಗಳಿಂದ ಬಿಡಿಸಿದ ಚಿತ್ತಾರ! ಮುಗಿಲ ಮೂಲವನ್ನು ನೋಡುವ ಕುತೂಹಲದಿಂದೆಂಬಂತೆ ಎತ್ತರಕ್ಕೆ ಏರಿ ನಿಂತ ಗೋಪುರದ ತುದಿ! ಮೇಲೆ ಜೋತಾಡಿಸಿರುವ ಐರಾವತದ ಸೊಂಡಿಲೋ ಎಂಬಂತೆ ಕಣ್‌ಸೆಳೆಯುತ್ತ ಅತ್ತಿಂದಿತ್ತ ಒಲೆಯುತ್ತಿರುವ ಮಲ್ಲಿಗೆಯ ದಂಡೆ! ಎತ್ತರದಲ್ಲಿ ಸೊಗಯಿಸುವ ಆನೆಯ ದಂತದ ತೋರಣ! ವಜ್ರ ವೈಡೂರ್ಯಗಳ ಕಾಂತಿಯಿಂದ ಶೋಭಿಸುವ ಸೌಭಾಗ್ಯ ಪತಾಕೆಗಳು! ಗಾಳಿಗೆ ನಲುಗುವ ಅವುಗಳ ತುದಿಯನ್ನು ಕಂಡಾಗ ತುದಿಗೈಯಿಂದ 'ಇತ್ತ ಬಾ' ಎಂದು ನನ್ನನ್ನೆ ಕರೆಯುತ್ತಿರುವಂತಿದೆ! ತೋರಣದ ಇಕ್ಕೆಲದ ಕಂಬಗಳ ತುದಿಯಲ್ಲಿ – ದ್ವಾರದ ಎರಡೂ ಬದಿಯಲ್ಲಿ ಸ್ಫಟಿಕದಿಂದ ಕಡೆದ ಪೂರ್ಣಕಲಶಗಳು! ಅದರ ಮೇಲೆ ಹಸಿರು ತುಂಬಿದ ಮಾವಿನ ಚಿಗುರು ರಾಕ್ಷಸರ ವಕ್ಷಃಸ್ಥಳದಂತೆ ಅಭೇದ್ಯವಾದ, ಎಲ್ಲೆಡೆಯು ವಜ್ರಖಚಿತವಾದ ಬಂಗಾರದ ಬಾಗಿಲುಗಳು! ಓಹ್, ಬಡವರ ಬಯಕೆಗೆ ತಣ್ಣೀರೆರಚುವ ಈ ಮಹಾದ್ವಾರ ಏನು ಸೊಗಸು! ನಿಜಕ್ಕೂ ಉದಾಸೀನನಾದ ಮನುಷ್ಯನಿಗೆ ಕೂಡ ಬಲವಂತವಾಗಿ ಕಣ್ ಸೆಳೆವಂಥ ಮಾಟ!

**ಚೇಟಿ** ಮುಂದಕ್ಕೆ ಬಾ ಇದೋ ಮೊದಲ ಆವರಣವನ್ನು ಪ್ರವೇಶಿಸು ಆರ್ಯ

**ವಿದೂಷಕ** (ಪ್ರವೇಶಿಸಿ, ನೋಡಿ) ಆಶ್ಚರ್ಯವಯ್ಯಾ, ಈ ಮೊದಲನೆಯ ಆವರಣದಲ್ಲಿ ಕೂಡ ಎನಿತು ಅಟ್ಟದ ಮನೆಗಳ ಸಾಲುಗಳು! ಚಂದ್ರನಂತೆ, ಶಂಖದಂತೆ, ತಾವರೆಯ ನಾಳದಂತೆ ಬೆಳ್ಳನೆಯ ಕಟ್ಟಡಗಳು ಸುಣ್ಣ ಬಳಿದು ಮಡಿಮಡಿಯಾದ ಗೋಡೆಗಳು ಬಣ್ಣಬಣ್ಣದ ರತ್ನಗಳಿಂದ ಕೆತ್ತಿದ ಚಿನ್ನದ ಮೆಟ್ಟಲೇಣಿಗಳು ಮುತ್ತಿನ ಜಾಲರಿ ಜೋತಾಡುತ್ತಿರುವ ಸ್ಫಟಿಕದ ಕಿಟಕಿಗಳೆಂಬ ಮುಖಚಂದ್ರಗಳಿಂದ ಉಜ್ಜಯಿನಿಯನ್ನು ದಿಟ್ಟಿಸುತ್ತಿವೆಯೋ ಎನುವಂಥ ಮೋಡಿ! ಒಳ್ಳೆಯ ವೈದಿಕಬ್ರಾಹ್ಮಣನಂತೆ ಬಾಗಿಲು ಕಾಯುವಾತ ಸುಖವಾಗಿ ಕೂತು ತೂಕಡಿಸುತಿದ್ದಾನೆ ಕೆನೆಮೊಸರು ಹಾಕಿದ ಸಣ್ಣಕ್ಕಿಯ ಬಲಿಯನ್ನು ಕೂಡ ಗೋಡೆಗೆ ಬಳಿಯುವ ಸುಣ್ಣದ ಭ್ರಾಂತಿಯಿಂದ ಕಾಗೆಗಳು ತಿನ್ನದೆ ಬಿಟ್ಟಿವೆ. ಹ್ಞಾ, ಮುಂದೆ ದಾರಿ ತೋರಿಸವ್ವ

**ಚೇಟಿ** ಮುಂದಕ್ಕೆ ಬಾ ಇದೋ ಎರಡನೆಯ ಆವರಣವನ್ನು ಪ್ರವೇಶಿಸು ಆರ್ಯ.

**ವಿದೂಷಕ** : (ಪ್ರವೇಶಿಸಿ, ದಿಟ್ಟಿಸಿ) ಓಹೋಹೋ, ಇಲ್ಲಿ, ಈ ಎರಡನೆಯ ಆವರಣದಲ್ಲು ಸಾಲಾಗಿ ಕಟ್ಟಿದ ಗಾಡಿಯೆತ್ತುಗಳು ಆಹಾಹಾ, ಎಣ್ಣೆ ತಿಕ್ಕಿದ ಆ ಕೋಡುಗಳು ಹೇಗೆ ಹೊಳೆಯುತ್ತಿವೆ ಪಕ್ಕದಲ್ಲೆ ಇಕ್ಕಿರುವ ಹುಲ್ಲು–ಹಿಂಡಿ ತಿಂದು ಹೇಗೆ ಕೊಬ್ಬಿ ಬೆಳೆದಿವೆ. ಇಲ್ಲೊಂದು ಕೋಣ ಅವಮಾನಗೊಂಡ

ಕುಲಪುತ್ರನಂತೆ ಬುಸುಗುಟ್ಟಿ ಸುಯ್‌ಗುಡುತ್ತಿದೆ ಇಲ್ಲೊಂದು, ಕಾಳಗ ಕೊಟ್ಟು ಬಂದು ಮಲ್ಲನಂತೆ ನಿಂತಿರುವ ಕುರಿಯ ಕೊರಳನ್ನು ನೀವುತಿದ್ದಾರೆ ಇಲ್ಲಿ, ಓ ಈಚೆ, ಬೇರೆ ಬೇರೆ ಕುದುರೆಗಳ ಕೊರಳ ಕೇಸರದ ಸಿಂಗಾರ ನಡೆದಿದೆ ಅಲ್ಲಿ ಕುದುರೆ ಲಾಯದಲ್ಲಿ ಕಳ್ಳನಂತೆ ಬಿಗಿಯಾಗಿ ಸರಪಣಿ ಬಿಗಿದ ಮಂಗವೊಂದು ಬೇರೆ ಕೂತಿದೆ (ಬೇರೆಡೆ ದಿಟ್ಟಿಸುತ್ತ) ಓ ಈ ಕಡೆ ಮಾವುತರು ಕೂರದ ಎಣ್ಣೆ ಬೆರಸಿದ ಅನ್ನದ ಮುದ್ದೆಯನ್ನು ಆನೆಗೆ ತಿನ್ನಿಸುತಿದ್ದಾರೆ. ಮುಂದಿನ ದಾರಿ ತೋರಿಸವ್ವ.

**ಚೇಟಿ** . ಮುಂದಕ್ಕೆ ಬಾ ಇದೋ ಮೂರನೆಯ ಆವರಣವನ್ನು ಪ್ರವೇಶಿಸು ಆರ್ಯ

**ವಿದೂಷಕ** .(ಹೊಕ್ಕು ನೋಡಿ) ಓಹೋಹೋ, ಆಶ್ಚರ್ಯವಯ್ಯಾ, ಇಲ್ಲಿ, ಈ ಮೂರನೆಯ ಆವರಣದಲ್ಲು, ಇವು ಕುಲೀನರಾದಂಥ ಗಂಡಸರು ಬಂದಾಗ ಕೂಡಲು ಇಟ್ಟಂಥ ಆಸನಗಳು ಆಟದ ಮಂಚದ ಮೇಲೆ ಅರ್ಧ ಓದಿ ತೆರೆದಿಟ್ಟ ಪುಸ್ತಕ ಓ ಇತ್ತ, ಬಯಸಿದಂತೆ ಆಟ ನೀಡುವ ಮಣಿಮಯ ವಾದ ಕವಡೆಗಳಿಂದ ಕೂಡಿದ ಚದುರಂಗದ ಮಂಚ ಇತ್ತ ಇವರು ಕಾಮನ ರಾಜ್ಯದಲ್ಲಿ ಯುದ್ಧಸಾರುವುದಕ್ಕೂ ಸಂಧಾನ ಸಾಧಿಸುವುದಕ್ಕೂ ಚತುರರಾದ ಸೂಳೆಯರು ಮತ್ತು ಮುದಿವಿಟರು ಬಗೆಬಗೆಯ ಬಣ್ಣಗಳಿಂದ ಬಿಡಿಸಿದ ತೈಲಚಿತ್ರಗಳನ್ನು ತುದಿಗೈಯಲ್ಲಿ ಹಿಡಿದುಕೊಂಡು ಅತ್ತಿಂದಿತ್ತ ಓಡಾಡುತಿ ದ್ದಾರೆ ಹ್ಹಾ ಮುಂದಿನ ದಾರಿ ತೋರಿಸವ್ವಾ

**ಚೇಟಿ** ಮುಂದಕ್ಕೆ ಬಾ ಇದೋ ನಾಲ್ಕನೆಯ ಆವರಣವನ್ನು ಪ್ರವೇಶಿಸು ಆರ್ಯ

**ವಿದೂಷಕ** : (ಹೊಕ್ಕು ನೋಡಿ) ಓಹೋಹೋ, ಆಹಾಹಾ, ಏನಾಶ್ಚರ್ಯವಯ್ಯಾ! ಇಲ್ಲಿ, ಈ ನಾಲ್ಕನೆಯ ಆವರಣದಲ್ಲಿ, ಹುಡುಗಿಯರ ಕೈಯಿಂದ ಬಾರಿಸಿಕೊಂಡ ಮೃದಂಗಗಳು ಮೋಡಗಳಂತೆ ಗಂಭೀರವಾಗಿ ಗುಡುಗುತ್ತಿವೆ. ಪುಣ್ಯ ಕಳೆದು ಕೊಂಡ ತಾರಕೆಗಳು ಮುಗಿಲಿನಿಂದ ಬೀಳುವಂತೆ ತಾಳದ ಸದ್ದು ಕಿವಿಗೆ ಬೀಳು ತ್ತಿದೆ ತುಂಬಿಯ ಝೇಂಕಾರದಂತೆ ಇಂಪಾದ ಕೊಳಲ ನುಡಿ ಕೇಳಿಸುತ್ತಿದೆ. ಪ್ರೇಮಕಲಹಕ್ಕೆ ನಿಂತ ನಲ್ಲೆಯ ಹಾಗೆ ಈ ವೀಣೆಯನ್ನು ತೊಡೆಯ ಮೇಲಿ ರಿಸಿಕೊಂಡು ಬೆರಳಾಡಿಸುತಿದ್ದಾರೆ ಓ ಇಲ್ಲಿ ಇವರು, ಕೆಲವು ವೇಶ್ಯೆಯರ ಹುಡುಗಿಯರು ಭೃಂಗಗಳಂತೆ ಗುಂಗುಂ ಎಂದು ಬಲು ಇಂಪಾಗಿ ಹಾಡುತ್ತ ನಾಟ್ಯದ ತರಬೇತಿ ಪಡೆಯುತಿದ್ದಾರೆ; ಶೃಂಗಾರದ ಬಗೆಬಗೆಯ ಭಾವಾಭಿನ ಯದ ಭಂಗಿ ಕಲಿಯುತಿದ್ದಾರೆ. ಇಲ್ಲಿ ಕಿಟಕಿಯಲ್ಲಿ ಬಗ್ಗಿಸಿಟ್ಟ ನೀರಕೊಡಗಳು ಹಾಗೆಯೆ ಗಾಳಿ ಕುಡಿಯುತ್ತಿವೆ. ಮುಂದಿನ ದಾರಿ ತೋರಿಸವ್ವಾ.

**ಚೇಟಿ** : ಮುಂದಕ್ಕೆ ಬಾ. ಇದೋ ಐದನೆಯ ಆವರಣವನ್ನು ಪ್ರವೇಶಿಸು ಆರ್ಯ.

**ವಿದೂಷಕ** (ಹೊಕ್ಕು ನೋಡಿ) ಆಹಾಹಾ, ಓಹೋಹೋ, ಈಹೀಹೀ, ಇಲ್ಲಿಯೂ ಐದನೆಯ ಆವರಣದಲ್ಲಿ, ಬಡವರ ನಾಲಗೆಯಲ್ಲಿ ನೀರೂರಿಸುವ, ಇಂಗು ಎಣ್ಣೆಯ ಒಗ್ಗರಣೆಯ ವಾಸನೆ ಮೂಗಿಗೆ ಹೊಡೆಯುತ್ತಿದೆ ಬಗೆಬಗೆಯ ಪರಿಮಳ ಸೂಸುವ ಹೊಗೆ ದುಃಖಿತನ ನಿಟ್ಟುಸಿರಿನಂತೆ ಅಡುಗೆಮನೆಯ ಬಾಗಿಲಿನಿಂದ ಹೊರಹೊಮ್ಮುತ್ತಿದೆ ಒಳಗೆ ಅಣಿಯಾಗುತ್ತಿರುವ ಬಗೆಬಗೆಯ ತಿಂಡಿತಿನಿಸುಗಳ ಕಂಪು ನನಗೆ ಹುಚ್ಚು ಹಿಡಿಸುತ್ತಿದೆ ಓ ಇಲ್ಲಿ, ಈ ಮಾಂಸದ ಹುಡುಗ ಕೊಂದ ಪ್ರಾಣಿಯ ಹೊಟ್ಟೆಯ ಪೇಶಿಯನ್ನು ಹಳೆಯ ಬಟ್ಟೆಯ ಚಿಂದಿಯಂತೆ ನೀರಿನಲ್ಲಿ ತೊಳೆಯುತಿದ್ದಾನೆ ಅಡಿಗೆಯವ ಬಗೆಬಗೆಯ ಶಾಕಪಾಕಗಳನ್ನು ಸಿದ್ಧಪಡಿಸುತಿದ್ದಾನೆ ಮೋದಕಗಳು ತಯಾರಾ ಗುತ್ತಿವೆ; ಅಪ್ಪ ಎಣ್ಣೆಯಲ್ಲಿ ಬೇಯುತ್ತಿದೆ (ಸ್ವಗತ) ಈಗ ಯಾರಾದರೂ ನನ್ನ ಬಳಿ ಬಂದು 'ಅಡಿಗೆ ಸಿದ್ಧವಾಗಿದೆ ಊಟಕ್ಕೆ ಬಾ' ಎಂದು ಕಾಲು ತೊಳೆಯಲಿಕ್ಕೆ ನೀರು ಕೊಟ್ಟಿದ್ದರೆ ಆಗ್ತಿತ್ತು! (ಬೇರೊಂದೆಡೆ ನೋಡಿ, ಪ್ರಕಾಶ) ಓಹೋ ಇಲ್ಲಿ ಭಾರಿ ಭಾರಿ ಆಭರಣಗಳನ್ನು ತೊಟ್ಟ ಬೆಲೆವೆಣ್ಣುಗಳು, ಬಂಧುಲರು ಅಪ್ಸರೆಯರಂತೆ ಗಂಧರ್ವರಂತೆ ತುಂಬಿದ್ದಾರೆ ನಿಜಕ್ಕೂ ಈ ಮನೆ ಒಂದು ಸ್ವರ್ಗದಂತೆಯೆ ಇದೆ ಓಯ್, ಬಂಧುಲರೆ ಯಾರು ನೀವು? ಏನು ನಿಮ್ಮ ಕಥೆ?

**ಬಂಧುಲರು** : ನಾವೋ–

ಹೆರವರ ಮನೆಯಲ್ಲಾಡಿ ದಿನ ಕಳೆದವರು
ಹೆರವರ ಅನ್ನವನೆ ತಿಂದು ಬೆಳೆದವರು
ಬೇರೊಬ್ಬಳ ಗಂಡನಿಂದ
ಮತ್ತೊಬ್ಬನ ಹೆಂಡತಿಗೆ ಹುಟ್ಟಿದವರು
ಹೆರವರ ದುಡ್ಡಿನಲ್ಲೆ ಬಾಳು ಸವೆಸುವವರು
ನಮ್ಮ ಗುಣನಡತೆಯ ಕತೆಯ ಬಿತ್ತರವನ್ನು
ನಾವು ಹೇಳಬಾರದು; ನೀವು ಕೇಳಬಾರದು
ಆನೆಯ ಮರಿಯಂತೆ ಹಾಯಾಗಿ ಮೈಬೆಳೆಸಿಕೊಂಡವರು
ನಾವು ಬಂಧುಲರು ಸ್ವಾಮಿ, ನಾವು ಬಂಧುಲರು ॥ ೨೮ ॥

**ವಿದೂಷಕ** : ಹ್ಞಾ ಮುಂದಿನ ದಾರಿ ತೋರಿಸಪ್ಪಾ

**ಚೇಟಿ** : ಮುಂದಕ್ಕೆ ಬಾ ಇದೋ ಆರನೆಯ ಆವರಣವನ್ನು ಪ್ರವೇಶಿಸು ಆರ್ಯ.

**ವಿದೂಷಕ** : (ಹೊಕ್ಕು ನೋಡಿ) ಈಹೀಹೀ, ಊಹೂಹೂ, ಇಲ್ಲಿಯೂ, ಈ ಆರನೆಯ ಆವರಣದಲ್ಲಿ, ಚಿನ್ನ–ರನ್ನದ ಕೃತಕ ತೋರಣಗಳು ನಡುನಡುವೆ ನೀಲಮಣಿಯ ನೀಲಿಮೆ ಕಾಮನಬಿಲ್ಲು ಮೂಡಿದಂಥ ಮೋಡಿ! ಇಲ್ಲಿ ಅಕ್ಕಸಾಲಿಗರು ವೈಡೂರ್ಯ, ಮುತ್ತು, ಹವಳ, ಪುಷ್ಯರಾಗ, ಇಂದ್ರನೀಲ,

ಕರ್ಕೇತರಕ, ಪದ್ಮರಾಗ, ಮರತಕ ಮುಂತಾದ ಬಗೆಬಗೆಯ ರತ್ನಗಳ ಜಾತಿಯ ಬಗೆಗೆ ಪರಸ್ಪರ ಚರ್ಚಿಸುತಿದ್ದಾರೆ ಚಿನ್ನದಲ್ಲಿ ಕೆಂಪು ಕಲ್ಲು ಕೂಡಿಸ್ತಾ ಇದ್ದಾರೆ ಚಿನ್ನದ ಹಾರಗಳಲ್ಲಿ ಕುಸುರು ಕೆಲಸದ ಚಿತ್ತಾರಗಳನ್ನು ಕಡೆಯುತ್ತಾ ಇದ್ದಾರೆ ಕೆಂಪುಸರಿಗೆಯಲ್ಲಿ ಮುತ್ತಿನ ಸರ ಪೋಣಿಸ್ತಾ ಇದ್ದಾರೆ ವೈಡೂರ್ಯಗಳನ್ನು ಅರಕ್ಕೆ ಹಾಕಿ ತಿಕ್ತಾ ಇದ್ದಾರೆ ಶಂಖ–ಚಿಪ್ಪುಗಳನ್ನು ಕೆತ್ತಿ ಕಡೆಯುತಿದ್ದಾರೆ ಹವಳಗಳನ್ನು ಸಾಣೆಯಲ್ಲಿ ತೀಡುತಿದ್ದಾರೆ ಒದ್ದೆಯಾದ ಕುಂಕುಮಕೇಸರಿಯನ್ನು ಒಣಗಿಸ್ತಾ ಇದ್ದಾರೆ ಇತ್ತ ಕಸ್ತೂರಿಯನ್ನು ಸಾರಿಸು ತಿದ್ದಾರೆ ಇತ್ತ ಗಂಧ ತೇಯುತಿದ್ದಾರೆ; ಬಗೆಬಗೆಯ ಪರಿಮಳದ್ರವ್ಯಗಳನ್ನು ಬೆರಸುತಿದ್ದಾರೆ ಇತ್ತ ಸೂಳೆಯರನ್ನು ಬಯಸಿಬಂದ ತರುಣರಿಗೆ ಕರ್ಪೂರ ಬೆರಸಿದ ವೀಳೆಯದ ಉಪಚಾರ ನಡೆದಿದೆ ಓಹೋ, ಕಣ್ಣು ಹಾರಿಸುವುದೇನು! ಮುಗುಳು ಬೀರುವುದೇನು! ನಗೆಚಾಟಿಕೆಗಳೇನು! ನಾಲಗೆ ಚಪ್ಪರಿಸಿ ಕುಡಿಯುವವರ ಗದ್ದಲದಲ್ಲಿ ಕಳ್ಳಿನ ಪಾತ್ರೆಗೆ ಪುರುಸೊತ್ತೇ ಇಲ್ಲ ಇಲ್ಲಿ ಚೇಟರು; ಓ ಇಲ್ಲಿ ಚೇಟಿಯರು ಓ ಇವರು– ಹೆಂಡತಿ, ಮಕ್ಕಳು, ಮನೆಮಾರು ಎಲ್ಲ ಬಿಟ್ಟು ಇಲ್ಲಿಗೆ ಸಾರ್ತಿಯಾದ ಮನುಷ್ಯರು! ಕಳ್ಳು ತಟ್ಟೆಯಲ್ಲಿ ಕಂಠಪೂರ್ತಿಕುಡಿದ ಗಣಿಕೆಯರು ಕೈಬಿಟ್ಟ ಮೇಲೆ ಇವರು ಆ ತಟ್ಟೆಯನ್ನೆ ಚೀಪುತಿದ್ದಾರೆ! ಹ್ಲಾ, ಮುಂದಿನ ದಾರಿ ತೋರಿಸವ್ವಾ

**ಚೇಟಿ** ಮುಂದಕ್ಕೆ ಬಾ ಇದೋ ಏಳನೆಯ ಆವರಣವನ್ನು ಪ್ರವೇಶಿಸು ಆರ್ಯ

**ವಿದೂಷಕ** (ಹೊಕ್ಕು ನೋಡಿ) ಓಹೋಹೋ ಆಶ್ಚರ್ಯವಯ್ಯಾ! ಇಲ್ಲಿಯೂ, ಈ ಏಳನೆಯ ಆವರಣದಲ್ಲಿ ಚೊಕ್ಕವಾದ ಹಕ್ಕಿಗೂಡಿನಲ್ಲಿ ಹಾಯಾಗಿ ಕುಳಿತಿರುವ ಪಾರಿವಾಳದ ಜೋಡಿಗಳು ಪರಸ್ಪರ ಚುಂಬಿಸಿಕೊಳ್ಳುತ್ತ ಸುಖಪಡುತ್ತಿವೆ ಮೊಸರನ್ನ ತಿಂದು ಹೊಟ್ಟೆ ಉಬ್ಬರಿಸಿಕೊಂಡು ಮಂತ್ರ ಪಠಿಸುವ ಬ್ರಾಹ್ಮಣನ ಹಾಗೆ ಪಂಜರದ ಗಿಳಿ ಸುಭಾಷಿತ ನುಡಿಯುತ್ತಿದೆ ಮನೆಯವರ ವಿಶ್ವಾಸಗಳಿಸಿ ಕೊಬ್ಬಿದ ಕೆಲಸದವಳಂತೆ ಈ ಮೈನಾ ತುಂಬ ಕರಕರೆ ಮಾಡುತ್ತಿದೆ ಬಗೆಬಗೆಯ ಹಣ್ಣಿನ ರಸ ಕುಡಿದು ಕೊರಳು ತುಂಬಿದ ಈ ಕೋಗಿಲೆ ನೀರುತರುವ ಹೆಣ್ಣಿನಂತೆ ಕುಕಿಲುತ್ತಿದೆ ನಾಗೊಂದಿಗೆಗಳಲ್ಲಿ ಪಂಜರಗಳ ಸಾಲು ಜೋತಾಡುತ್ತಿದೆ ಇತ್ತ ಲಾವುಗೆ ಹಕ್ಕಿಗಳನ್ನು ಹೋರಾಟಕ್ಕೆ ಇಳಿಸಿದ್ದಾರೆ ಇತ್ತ ಕಪಿಂಜಲಗಳಿಗೆ ಮಾತು ಕಲಿಸುತಿದ್ದಾರೆ ಇತ್ತ ಪಂಜರದ ಪಾರಿವಾಳಗಳನ್ನು ಮೇಲಕ್ಕೆ ಹಾರಿಸುತಿದ್ದಾರೆ ಈ ಸಾಕು ನವಿಲು ಮೈತುಂಬ ಬಣ್ಣದ ಮಣಿ ಪೋಣಿಸಿದಂತೆ ಗರಿಗೆದರಿ ಸಂತಸದಿಂದ ಅತ್ತಿಂದಿತ್ತ ನಲಿಯುತ್ತಿದೆ ಬಿಸಿಲಿಗೆ ಬೆಂದ ಉಪ್ಪರಿಗೆಯನ್ನು ಅದು ತನ್ನ ಗರಿಯ ಗಾಳಿಯಿಂದ ಬೀಸಿ ಸಂತೈಸುತ್ತಿರುವಂತಿದೆ (ಇನ್ನೊಂದೆಡೆಗೆ ನೋಡಿ) ಈ ರಾಜಹಂಸಗಳು ಬೆಳದಿಂಗಳ ಮುದ್ದೆಯಂತೆ, ಹೆಣ್ಮಕ್ಕಳ ಬೆನ್ನ ಹಿಂದೆಯೆ, ಅವರಿಗೆ ನಡೆ ಕಲಿಸಿಕೊಡುವವರಂತೆ [illegible]

ಸಾಕುಸಾರಸಗಳು ಮುದಿ ಪಂಢರಂತೆ ಅತ್ತಿತ್ತ ಹಾರಾಡುತ್ತಿವೆ ಆಹಾಹಾ, ಆಶ್ಚರ್ಯವಯ್ಯಾ ನಾನಾ ಬಗೆಯ ಪಕ್ಷಿಗಳಿಂದ ಈ ಗಣಿಕೆ ಒಂದು ಪಕ್ಷಿ ಪ್ರದರ್ಶನವನ್ನೆ ಏರ್ಪಡಿಸಿದಂತಿದೆ ನಿಜವಾಗಿ ಹೇಳೋದಾದರೆ, ಈ ಸೂಳೆಯರ ಮನೆ ನೋಡಿದರೆ ಒಳ್ಳೇ ನಂದನವನ ಇದ್ದ ಹಾಗೆ ಇದೆ ಹ್ಞಾ, ಮುಂದಿನ ದಾರಿ ತೋರಿಸವ್ವಾ

**ಚೇಟಿ** ಮುಂದಕ್ಕೆ ಬಾ ಇದೋ ಎಂಟನೆಯ ಆವರಣವನ್ನು ಪ್ರವೇಶಿಸು ಆರ್ಯ

**ವಿದೂಷಕ** (ಹೊಕ್ಕು ನೋಡಿ) ತಾಯಿ, ಯಾರಪ್ಪಾ ಇವನು, ಒಳ್ಳೆಯ ಪಟ್ಟೆಶಾಲು ಹೊದ್ದುಕೊಂಡವನು, ಭಾರಿಭಾರಿ ಬಂಗಾರಗಳನ್ನು ಮೈಮೇಲೆ ತೊಟ್ಟುಕೊಂಡವನು, ಅತ್ತಿತ್ತ ವಾಲುತ್ತ ಮೈಬಳುಕಿಸುತ್ತ ನಡೆದಾಡುತಿದ್ದಾನೆ!

**ಚೇಟಿ** ಆರ್ಯ, ಇವನು ನಮ್ಮ ಯಜಮಾನಿಯ ಸೋದರ

**ವಿದೂಷಕ** . (ಬೇರೆಡೆಗೆ ಮುಖ ತಿರುಗಿಸಿ) ಎಷ್ಟು ತಪಸ್ಸು ಮಾಡಿ ಇವನು ವಸಂತಸೇನೆಯ ಸೋದರನಾಗಿ ಹುಟ್ಟಿದಾಂತ! ಅಥವಾ–

ಹಾಗಲ್ಲ; ಇವನೇನೊ ನೋಡಲಿಕೆ ಭವ್ಯಪುರುಷ<br>
ಕಣ್‌ಸೆಳೆವ ರೂಪ, ಮೈತುಂಬ ಪರಿಮಳದ ಗಂಧಲೇಪ<br>
ಏನಿದ್ದರೇನಂತೆ?<br>
ಮಸಣದ ಬೀದಿಯಲಿ ಬೆಳೆದ ಸಂಪಗೆಯ ಗಿಡದಂತೆ<br>
ಯಾರೂ ಹತ್ತಿರ ಸುಳಿದು ಮೂಸುವವರಿಲ್ಲ ॥ ೨೯ ॥

(ಬೇರೆಡೆಗೆ ನೋಡಿ) ಅವ್ವಾ, ಇವಳು ಮತ್ತೆ ಯಾರು? ಮೈತುಂಬ ಹೂವಿನ ಹೊದಿಕೆ ಹೊದ್ದು, ಎಣ್ಣೆ ತಿಕ್ಕಿ ನಸೆಯಾದ ಕಾಲುಗಳನ್ನು ಚಪ್ಪಲಿಯೊಳಗೆ ಸಿಕ್ಕಿಸಿಕೊಂಡು ಎತ್ತರದ ಆಸನದಲ್ಲಿ ಕೂತಿದ್ದಾಳೆ?

**ಚೇಟಿ** ಆರ್ಯ, ಈಕೆ ನಮ್ಮ ಯಜಮಾನಿಯ ತಾಯಿ

**ವಿದೂಷಕ** · ಓಹೋಯ್, ಈ ದುಗ್ಗಾಣಿ ಡಾಕಿನಿಯ ಹೊಟ್ಟೆಯೇ! ಏನು ಗಾತ್ರ, ಅದರದ್ದು! ಗರ್ಭಗುಡಿಯಲ್ಲಿ ಶಿವಲಿಂಗ ಇಡುವಂತೆ ಈಕೆಯನ್ನು ಮೊದಲು ಇಲ್ಲಿ ಕೂಡಿಸಿ ಆಮೇಲೆ ಈ ಮನೆಗೆ ಬಾಗಿಲು ಇಟ್ಟಿದ್ದಾರೇನು?

**ಚೇಟಿ** : ಆಸೆಗೇಡಿ, ನಮ್ಮ ಅಮ್ಮನವರನ್ನು ಹೀಗೆ ಹಾಸ್ಯ ಮಾಡಬೇಡ ಆಕೆಗೆ ಆರೋಗ್ಯ ನೆಟ್ಟಗಿಲ್ಲ ಎಂದು ಹಾಗಾಗಿದೆ

**ವಿದೂಷಕ** .(ವಿನೋದವಾಗಿ) ಸ್ವಾಮಿ ಹೊಟ್ಟೆ ಉಬ್ಬರಿಸುವ ಅನಾರೋಗ್ಯವೆ, ಹೀಗೆ ಕೂತುಣ್ಣುವ ರೀತಿಯಲ್ಲಿ ಈ ಬ್ರಾಹ್ಮಣನ ಮೇಲೂ ಸ್ವಲ್ಪ ಅನುಗ್ರಹದೃಷ್ಟಿ ಬೀರು

**ಚೇಟಿ** : ಆಸೆಗೇಡಿ, ಸಾಯ್ತಿ ನೋಡು

**ವಿದೂಷಕ** (ವಿನೋದವಾಗಿ) ತೊತ್ತಿನ ಮಗಳೆ, ಹೀಗೆ ಸುಖವಾಗಿ ಕೂತು, ಹೊಟ್ಟೆ ಉಬ್ಬಿರಿಸಿಕೊಂಡು ಸಾಯೋದರಲ್ಲೂ ಒಂದು ಸುಖವುಂಟು

ಮತ್ತು ಬರಿಸುವ ಕಳ್ಳುಸಾರಾಯಿ ಕುಡಿದು
ಈ ತಾಯಿಗೆ ಇಂಥ ಈ ಪಾಡು ಬಂದಿದೆ
ಎಲ್ಲಾದರು ಸತ್ತರೆ ಈ ನಿನ್ನ ತಾಯಮ್ಮ
ಸಾವಿರ ನರಿಗಳಿಗೆ ಅವುತಣದ ಊಟ ॥ ೩೦ ॥

ಅವ್ವಾ, ಏನು ನಿಮಗೆ ನೌಕಾಸಾರಿಗೆ ವ್ಯವಹಾರವೇನಾದರೂ ಉಂಟಾ?

**ಚೇಟಿ** ಇಲ್ಲಯ್ಯ, ಇಲ್ಲ

**ವಿದೂಷಕ** ಕೇಳೋದೇನು? ಪ್ರೇಮದ ತಿಳಿನೀರು ತುಂಬಿದ ಮದನಸಮುದ್ರದಲ್ಲಿ ನಿಮ್ಮ ನೌಕಾಯಾತ್ರೆ ಮೊಲೆ, ಸೊಂಟ, ತೊಡೆಗಳೇ ಸುಂದರವಾದ ಹಡಗುಗಳು ಹ್ಞೂ ಹೀಗೆ ಬಲು ಅಚ್ಚರಿಗಳಿಂದ ಕೂಡಿದ ಎಂಟು ಅಂಕಣದ ಈ ವಸಂತಸೇನೆಯ ಮನೆಯನ್ನು ಕಂಡ ಮೇಲೆ– ನಿಜಕ್ಕು ಸ್ವರ್ಗದ ಸೊಬಗನ್ನೆಲ್ಲ ಸೂರೆ ಮಾಡಿ ಒಂದೇ ಕಡೆ ಕಲೆ ಹಾಕಿದಂತೆ ಕಾಣಿಸ್ತಾ ಇದೆ ಹೊಗಳೋದಕ್ಕೆ ನನಗೆ ಮಾತೇ ಸಿಗ್ತಾ ಇಲ್ಲ ಏನಿದು ಸೂಳೆಯ ಮನೆಯೋ, ಅಲ್ಲ, ಕುಬೇರನ ಅರಮನೆಯ ಒಂದು ಭಾಗವೋಂತ! ಸರಿ, ಎಲ್ಲಿ ನಿಮ್ಮ ಯಜಮಾನಿ?

**ಚೇಟಿ** ಅಲ್ಲಿ ಹೂದೋಟದಲ್ಲಿದ್ದಾಳೆ ಅತ್ತ ಹೋಗು ಆರ್ಯ

**ವಿದೂಷಕ** (ಹೊಕ್ಕು ನೋಡಿ) ಓಹೋಹೋ, ಏನು ಈ ತೋಟದ ಚೆಲುವು! ಸೊಗಸಾಗಿ ಹೂ ಬಿಡುವಂತೆ ಕಾಳಜಿಯಿಂದ ಬೆಳೆಸಿದ ಬಗೆಬಗೆಯ ಮರಗಳು ನಿಬಿಡವಾಗಿ ಬೆಳೆದ ಮರಗಳ ನೆಳಲಲ್ಲಿ ತರುಣಿಯರ ತೊಡೆಯ ಗಾತ್ರಕ್ಕೆ ತಕ್ಕುದಾದ ಪಟ್ಟೆಯ ಉಯ್ಯಾಲೆ ಚೆಲುಬಣ್ಣದ ಸೇವಂತಿಗೆ, ಶೇಫಾಲಿಕೆ, ಜಾಜಿ, ಮಲ್ಲಿಗೆ, ಹೊಸಮಲ್ಲಿಗೆ, ಗೋರಟೆ, ಅತಿಮುಕ್ತ ಮುಂತಾದ ಹೂವುಗಳು ನೆಲದ ಮೇಲೆ ಉದುರಿಬಿದ್ದಿವೆ ನಿಜಕ್ಕು ನಂದನವನ ಇದರ ಮುಂದೆ ಏನೂ ಅಲ್ಲ (ಬೇರೆಡೆ ನೋಡಿ) ಇಲ್ಲಿ, ಈಗ ತಾನೆ ಉದಿಸಿಬರುವ ಸೂರ್ಯಮಂಡಲದಂತೆ ಸೊಗಯಿಸುವ ಕೆಂದಾವರೆಗಳಿಂದ ಈ ಕೆರೆ ಸಂಜೆಯ ಹೊತ್ತಿನ ನೆನಪು ಬರಿಸುತ್ತಿದೆ

ಅಲ್ಲದೆ–

ಹೊಸತಾಗಿ ಚಿಗುರಿ ಮೈತುಂಬ ಹೂಬಿಟ್ಟ
ಈ ಅಶೋಕದ ಗಿಡ
ರಣರಂಗದಲ್ಲಿ ನೆತ್ತರ ಕೆಸರು ಮೈಗಂಟಿದ
ಸೈನಿಕನವೋಲಿಹುದು ॥ ೩೧ ॥

ಇರಲಿ, ನಿಮ್ಮ ಯಜಮಾನಿ ಎಲ್ಲಿ?

**ಚೇಟಿ** ಅಯ್ಯಾ, ಕಣ್ಣುಬಿಟ್ಟು ಸ್ವಲ್ಪ ಬಗ್ಗಿ ನೋಡು ಅದೋ ಅಲ್ಲಿ ಯಜಮಾನಿ

**ವಿದೂಷಕ** (ಕಂಡು ಬಳಿಬಂದು) ನಿನಗೆ ಮಂಗಳವಾಗಲಿ

**ವಸಂತಸೇನೆ** . ಅರೆ, ಮೈತ್ರೇಯ! (ಎದ್ದು ನಿಂತು) ಸ್ವಾಗತ ಇದೋ ಆಸನ ಇಲ್ಲಿ ಕುಳಿತುಕೊಳ್ಳೋಣಾಗಲಿ

**ವಿದೂಷಕ** ನೀನೂ ಕುಳಿತುಕೋ (ಇಬ್ಬರೂ ಕೂಡುತ್ತಾರೆ)

**ವಸಂತಸೇನೆ** . ಸಾಹುಕಾರನ ಮಗ ಕ್ಷೇಮ ತಾನೆ?

**ವಿದೂಷಕ** · ಹೌದು ತಾಯಿ, ಕ್ಷೇಮ

**ವಸಂತಸೇನೆ** ಆರ್ಯಮೈತ್ರೇಯ, ಈಗ ಕೂಡ–

ಗುಣವೆಂಬ ಚಿಗುರೆಲೆಯ
ವಿನಯಶೀಲತೆಯೆಂಬ ಟೊಂಗೆಟಿಸಿಲುಗಳ
ವಿಶ್ವಾಸದ ಬೇರು ಬಿಟ್ಟ
ಕೀರ್ತಿಯೆಂಬ ಹೂವು ತೊಟ್ಟ
ತನ್ನ ಗುಣವಂತಿಕೆಯ ಹಣ್ಣು ತುಂಬಿರುವ
ಅಂಥ ಸಜ್ಜನಿಕೆಯಾ ಹಿರಿಯ ಮರವನ್ನು
ಗೆಳೆತನದ ಹಕ್ಕಿಗಳು
ಆಶ್ರಯಿಸಿಕೊಂಡಿವೆ ತಾನೆ ಆರಾಮವಾಗಿ ॥ ೩೨ ॥

**ವಿದೂಷಕ** (ಸ್ವಗತ) ಈ ಕೆಟ್ಟ ಹೆಣ್ಣು ಸರಿಯಾಗಿ ಗುರುತಿಸಿದ್ದಾಳೆ ಪರಿಸ್ಥಿತಿಯನ್ನು! (ಪ್ರಕಾಶ) ಹೌದು

**ವಸಂತಸೇನೆ** . ಅದಿರಲಿ ಏನು ಬರೋಣವಾಯಿತು?

**ವಿದೂಷಕ** . ಕೇಳು ತಾಯಿ, ಪೂಜ್ಯನಾದ ಚಾರುದತ್ತ ತಲೆಯಲ್ಲಿ ಕೈಜೋಡಿಸಿಕೊಂಡು ನಿನ್ನ ಬಳಿ ಹೀಗೆ ವಿಜ್ಞಾಪಿಸಿಕೊಳ್ಳುತಿದ್ದಾನೆ:

**ವಸಂತಸೇನೆ** :(ಕೈಜೋಡಿಸಿ) ಏನು ಆಜ್ಞೆ ಕೊಡಿಸಿದ್ದಾನೆ?

**ವಿದೂಷಕ** "ನೀನಿತ್ತ ಆ ಚಿನ್ನದ ಒಡವೆಗಳನ್ನು ನಾನು ನಮ್ಮದೇ ಸೊತ್ತು ಎಂದು ವಿಶ್ವಾಸದಿಂದ ಜೂಜಿನಲ್ಲಿ ಪಣಕ್ಕಿಟ್ಟು ಕಳೆದುಕೊಂಡೆ ರಾಜಾಪಚಾರ ಮಾಡಿದ ಆ ಜೂಜುಕಾರನೂ ತಲೆ ತಪ್ಪಿಸಿಕೊಂಡಿದ್ದಾನೆ ಎಲ್ಲಿದ್ದಾನೋ ಪತ್ತೆಯೇ ಇಲ್ಲ"

**ಚೇಟಿ** : ಯಜಮಾನಿ, ನೀನು ಗೆದ್ದೆ ಆರ್ಯಚಾರುದತ್ತನೂ ಜೂಜುಗಾರ ಆಗಿಬಿಟ್ಟ

**ವಸಂತಸೇನೆ** :(ಸ್ವಗತ) ಏನು? ಕಳ್ಳ ಕದ್ದರೂ ಆತ್ಮಾಭಿಮಾನಕ್ಕಾಗಿ ಜೂಜಿನಲ್ಲಿ ಕಳೆದುಹೋಯಿತು ಎನ್ನುತಿದ್ದಾನಲ್ಲ? ಅದರಿಂದಲೆ ಅವನೆಂದರೆ ನನಗೆ ಮೆಚ್ಚು

**ವಿದೂಷಕ** "ಅದರಿಂದ ಅದರ ಪ್ರತಿಯಾಗಿ ಈ ಮುತ್ತಿನ ಹಾರವನ್ನು ನೀನು ಸ್ವೀಕರಿಸಬೇಕು"

**ವಸಂತಸೇನೆ** . (ಸ್ವಗತ) ಆ ಅಲಂಕಾರವನ್ನು ತಂದು ತೋರಿಸಲೇ ಹೇಗೆ? (ಆಲೋಚಿಸಿ) ಅಥವಾ ಈಗ ಬೇಡ

**ವಿದೂಷಕ** : ಏನವ್ವಾ, ಈ ಮುತ್ತಿನ ಹಾರವನ್ನೇಕೆ ತೆಗೆದುಕೊಳ್ತಾ ಇಲ್ಲ?

**ವಸಂತಸೇನೆ** . (ನಕ್ಕು ಗೆಳತಿಯ ಮುಖವನ್ನು ನೋಡುತ್ತ) ಮೈತ್ರೇಯ, ಮುತ್ತಿನ ಹಾರವನ್ನು ತೆಗೆದುಕೊಳ್ಳದೆ ಎಲ್ಲಾದರೂ ಉಂಟೆ? (ಎಂದು ತೆಗೆದುಕೊಂಡು ಪಕ್ಕದಲ್ಲಿಟ್ಟುಕೊಳ್ಳುತ್ತಾಳೆ )

(ಸ್ವಗತ) ಏನಿದು, ಹೂವೆಲ್ಲ ಉದುರಿಹೋದ ಮೇಲೆಯೂ ಮಾವಿನ ಗಿಡದಿಂದ ಜೇನಹನಿ ತೊಟ್ಟಿಕ್ಕುತ್ತಿದೆಯಲ್ಲ! (ಪ್ರಕಾಶ) ಆರ್ಯ, ಆ ಜೂಜುಕೋರನಾದ ಆರ್ಯಚಾರುದತ್ತನ ಬಳಿ ನನ್ನ ಮಾತಿನಂತೆ ಹೀಗೆ ವಿಜ್ಞಾಪಿಸಿಕೋ: "ನಾನು ಕೂಡ ಇಂದು ಸಂಜೆ ಆರ್ಯನನ್ನು ಕಾಣಲು ಬರುವವಳಿದ್ದೇನೆ" ಎಂದು

**ವಿದೂಷಕ** . (ಸ್ವಗತ) ಅಲ್ಲಿ ಹೋಗಿ ಇನ್ನು ಏನೆಲ್ಲ ದೋಚಲಿಕ್ಕಿದ್ದಾಳೋ! (ಪ್ರಕಾಶ) ಆಯಿತವ್ವಾ, ಹೇಳ್ತೇನೆ (ಸ್ವಗತ) 'ಈ ಸೂಳೆಯರ ಸಹವಾಸ ಬೇಡಯ್ಯಾ, ಬಿಟ್ಟುಬಿಡೂ' ಎಂತ (ಎಂದು ಹೋಗುತ್ತಾನೆ )

**ವಸಂತಸೇನೆ** : ಚೇಟಿ, ಈ ಆಭರಣವನ್ನು ತೆಗೆದುಕೊ ಚಾರುದತ್ತನ ಬಳಿ ರಮಿಸಲು ಹೋಗೋಣ

**ಚೇಟಿ** · ಯಜಮಾನಿ, ನೋಡು ನೋಡು ಮೋಡ ತುಂಬಿ ಕತ್ತಲು ಕವೀತಿದೆ

**ವಸಂತಸೇನೆ** . ತುಂಬಲಿ ಮೋಡ, ಕತ್ತಲು ಕವಿಯಲಿ
ಭೋರೆಂದು ಎಡೆಬಿಡದೆ ಮಳೆ ಸುರಿಯಲಿ
ನಲ್ಲನೆಡೆ ಹೊರಟಿರುವ ನನ್ನ ಈ ಹೃದಯಕ್ಕೆ
ಈ ಯಾವುದೂ ಕೂಡ ಗಣ್ಯವಲ್ಲ ॥ ೩೩ ॥

ಚೇಟಿ, ಹಾರ ಹಿಡಿದುಕೊಂಡು ಬೇಗನೆ ಬಾ

(ಎಂದು ಎಲ್ಲರೂ ಹೋಗುತ್ತಾರೆ.)

**"ಮದನಿಕೆ ಮತ್ತು ಶರ್ವಿಲಕ"**

**ಎಂಬ ನಾಲ್ಕನೆಯ ಅಂಕ**

**ಮುಗಿಯಿತು.**

ಅಂಕ : ಐದು

# ಜಡಿಮಳೆಯ ದಿವಸ

(ಪ್ರವೇಶ: ಆಸನದಲ್ಲಿ ಕುಳಿತಿರುವ, ಉತ್ಕಂಠಿತನಾದ ಚಾರುದತ್ತ)

**ಚಾರುದತ್ತ** · (ಮೇಲೆ ನೋಡಿ) ಅಕಾಲದಲ್ಲಿ ಮೋಡ ತುಂಬಿ ಕತ್ತಲು ಕವಿಯುತ್ತಿದೆ

ಸಾಕುನವಿಲುಗಳು ಬಿಚ್ಚಿ ಗರಿಯನ್ನು ನೋಡುತಿಹವು ಮೇಲೆ
ಮಾನಸದ ಕಡೆಗೆ ಉತ್ಸುಕತೆಯಿಂದ ಹೊರಟಿಹವು ಹಂಸಮಾಲೆ
ಈ ಅಕಾಲದಲಿ ಕವಿದಿರುವ ಮೋಡ ಬರಿಸಿಹುದು ಕತ್ತಲನ್ನು
ಉತ್ಕಂಠನಾದ ಜನದ ಬಗೆಯಲ್ಲಿ ಮತ್ತು ಮುಗಿಲಿನಲ್ಲಿ ॥ ೧ ॥

ಅಲ್ಲದೆ–

ನೀರೆರೆದ ಕೋಣನೊಡಲಿನಂತೆ
ಅಥವ ತುಂಬಿಯಂತೆ
ಕಪ್ಪಾಗಿದೆ ಮೋಡ
ಈ ಮಿಂಚಿನ ಹೊಂಬೆಳಕೋ
ಅದರ ಹೆಗಲಿನ ಮೇಲೆ ಇಟ್ಟ ಪೀತಾಂಬರ
ಬೆಳ್ಳಕ್ಕಿಗಳ ಹಿಂಡು ಅದು ಹಿಡಿದ ಶಂಖ
ಹೀಗೆ ಮುಗಿಲಿನ ಮೇಲೆ ದಾಳಿ ಮಾಡಲು ಹೊರಟ
ಇನ್ನೊಬ್ಬ ಹರಿಯಂತೆ ಇಹುದು ಈ ಮೋಡ ॥ ೨ ॥

ಅಲ್ಲದೆ–

ಹರಿಯ ಮೈಯಂತೆಯೇ ಕಪ್ಪು ಬಣ್ಣದ ಮೋಡ
ಸುತ್ತುಸುರುಳಿಯ ಸುತ್ತಿ ಒತ್ತಾಗಿ ಸಾಗುತಿಹ
ಬೆಳ್ಳಕ್ಕಿವಿಂಡೆಂಬ ಶಂಖವನು ಹಿಡಿದು
ಮಿಂಚಿನ ಗೊಂಚಲಿನ ಪೀತಾಂಬರವನುಟ್ಟು
ಮೇಲೆದ್ದು ಬರುತಿಹುದು ಚಕ್ರಧರನಂತೆ ॥ ೩ ॥

ಮೋಡದೊಡಲಿಂದ ನೀರು ಸುರಿಯುತಿದೆ ಧಾರೆ ಕಡಿಯದಂತೆ
ಬೆಳ್ಳಿ ರಾಶಿಯನು ಸೋಸಿ ಕರಗಿಸಿದ ರಸವೆ ಹರಿಯುವಂತೆ
ಒಮ್ಮೆ ಮರೆಯಾಗಿ ಒಮ್ಮೆ ಕಾಣಿಸುತ ಮಿಂಚುದೀಪದಲ್ಲಿ
ಹರಿದ ಚಿಂದಿ ಈ ಮುಗಿಲ ಬಟ್ಟೆಯಿಂದೆಳೆಯೆಳೆಯೆ ಉದುರಿದಂತೆ
॥ ೪ ॥

ಒಮ್ಮೆ ಜಕ್ಕವಕ್ಕಿಗಳ ಜೋಡಿ ಎಣೆಗೂಡಿದಂಥ ಮೋಡಿ
ಒಮ್ಮೆ ಹಂಸಗಳ ಸಾಲಿ ಓಡಾಡುತಿರುವಂಥ ಲೀಲೆ
ಒಮ್ಮೆ ಮೀನುಗಳು ಮೊಸಳೆಗಳು ಸೇರಿ ಅತ್ತಿತ್ತ ಹೊರಳುವಂತೆ
ಒಮ್ಮೆ ಎತ್ತರದ ಮಹಡಿಮನೆಗಳೇ ಮೂಡಿ ಬರುವಂತೆ
ಒಮ್ಮೊಮ್ಮೆ ಒಂದೊಂದು ಆಕೃತಿಯ ತಾಳುತಿಹ
ಗಾಳಿಗಲ್ಲಾಡುತಿಹ ಈ ಮುಗಿಲ ಮೋಡಿಗೆ
ಆಕಾಶವೇ ಒಂದು ಚಿತ್ರಪಟದಂತಿದೆ || ೫ ||

ಮೋಡ ತುಂಬಿ ಕಣ್‌ಕತ್ತಲು ಬರಿಸಿದ ಈ ಮುಗಿಲೇ
ಧೃತರಾಷ್ಟ್ರನ ಮೋರೆ
ಬಲಕೆ ಹಮ್ಮಿ ಮೈಬಿಮ್ಮಿ ಬಗ್ಗಿಸುವ ಈ ನವಿಲೇ
ದುರ್ಯೋಧನ ಬೇರೆ
ಮಾತು ಮರೆತು ಕುಳಿತ ಕೋಗಿಲೆಯೆ ಜೂಜಿನಾಟದಲಿ
ಸೋತ ಧರ್ಮರಾಜ
ಕಾಡಿನಿಂದ ಅಜ್ಞಾತದೆಡೆಗೆ ಹೊರಟ ಹಂಸಾವಲಿ
ಪಾಂಡವರೆ ಸಾಜ || ೬ ||

(ಆಲೋಚಿಸಿ) ಮೈತ್ರೇಯ ವಸಂತಸೇನೆಯ ಬಳಿ ಹೋಗಿ ಬಹಳ ಹೊತ್ತಾಯಿತು. ಇನ್ನೂ ಏಕೆ ಬಂದಿಲ್ಲ?

**ವಿದೂಷಕ** . (ಪ್ರವೇಶಿಸಿ) ಓಹೋಯ್, ಏನು ಆ ಸೂಳೆಯ ಲೋಭ! ಏನು ಒರಟು ಸ್ವಭಾವ ಹಾರ ತಗೊಂಡದ್ದೇ ಬೇರೆ ಮಾತೇ ಇಲ್ಲ ಅದು ಇದು ಕೆಲವು ಸ್ನೇಹದ ಮಾತುಗಳನ್ನಾಡಿ ಹೀಗೆಯೆ ತಗೊಂಡೇ ಬಿಟ್ಟಳು ಮುತ್ತಿನ ಹಾರವನ್ನು ಇಷ್ಟು ಸಂಪತ್ತು ಇದೆ ಆದರೆ–"ಆರ್ಯಮೈತ್ರೇಯ, ವಿಶ್ರಮಿಸಿಕೊ, ಒಂದು ಲೋಟ ನೀರಾದರೂ ಕುಡಿದು ಹೋಗು" ಅಂತ ಅವಳ ಬಾಯಲ್ಲಿ ಬರಲಿಲ್ಲ! ಈ ಸೂಳೇಮಕ್ಳ ಮೋರೆ ನೋಡಬಾರದು (ಬೇಸರದಿಂದ) ಜನ ಅನ್ನೋದು ನಿಜ: ಗಡ್ಡೆಯಿಲ್ಲದೆ ಹುಟ್ಟಿದ ತಾವರೆಬಳ್ಳಿ, ಮೋಸ ಮಾಡದ ವ್ಯಾಪಾರಿ, ಕದ್ದುಕೊಳ್ಳದ ಸೊನ್ನೆಗಾರ, ಜಗಳ ಇಲ್ಲದ ಹಳ್ಳಿ, ದ್ರಾಪೆಯಿಲ್ಲದ ಸೂಳೆ – ಇವಿಷ್ಟು ಕಾಣಸಿಗೋದು ಭಾರೀ ಕಷ್ಟ ಆದ್ದರಿಂದ ಗೆಳೆಯನ ಬಳಿ ಹೋಗಿ ಅವನನ್ನು ಸೂಳೆಯ ವ್ಯವಹಾರದಿಂದ ತಪ್ಪಿಸ್ತೇನೆ (ನಡೆದಾಡಿ, ನೋಡಿ) ಓಹ್, ಪ್ರಿಯಮಿತ್ರ ಇಲ್ಲೆ ತೋಟದಲ್ಲೆ ಕೂತಿದ್ದಾನೆ ಬಳಿಗೆ ಹೋಗುತ್ತೇನೆ (ಬಳಿಸಾರಿ) ನಿನಗೆ ಮಂಗಲವಾಗಲಿ ಉತ್ತರೋತ್ತರ ವೃದ್ಧಿಯಾಗಲಿ

**ಚಾರುದತ್ತ** . (ನೋಡಿ) ಓಹ್, ನನ್ನ ಗೆಳೆಯ ಮೈತ್ರೇಯ ಬಂದುಬಿಟ್ಟಿದ್ದಾನೆ ಗೆಳೆಯ, ಸ್ವಾಗತ ಕೂತುಕೊ

**ವಿದೂಷಕ** . ಕೂತುಕೊಂಡೆ

**ಚಾರುದತ್ತ** ಗೆಳೆಯ, ಹೇಳು, ಹೋದ ಕೆಲಸ ಏನಾಯಿತು?

**ವಿದೂಷಕ** ಕೆಲಸ ಹಾಳಾಯಿತು

**ಚಾರುದತ್ತ** : ಏನು ಆಕೆ ಮುತ್ತಿನ ಹಾರವನ್ನು ತಗೊಂಡಿಲ್ಲವೇನು?

**ವಿದೂಷಕ** ನಮಗೆಲ್ಲಿದೆ ಅಂಥ ಭಾಗ್ಯ? ಎಳೆ ತಾವರೆಯಂತೆ ನಸೆಯಾದ ಬೊಗಸೆಯನ್ನು ತಲೆಯಲ್ಲಿಟ್ಟು ತಗೊಂಡೇಬಿಟ್ಳು

**ಚಾರುದತ್ತ** ಮತ್ತೇಕೆ ಕೆಲಸ ಕೆಟ್ಟಿತು ಎಂದೆ?

**ವಿದೂಷಕ** ಓಯ್, ಮತ್ತೆ ಕೆಡದೆ ಎಂಥದು? ಉಂಡದ್ದಲ್ಲ; ತಿಂದದ್ದಲ್ಲ ಎಂಥದೋ ಪುಡಿಗಾಸುಬೆಲೆಯ ಚಿನ್ನದ ಆಭರಣವನ್ನು ಕಳ್ಳರು ಕದ್ದರೂಂತ ಜಗತ್ತಿನಲ್ಲೆ ಅಪೂರ್ವವಾದ ಮುತ್ತಿನ ಹಾರವನ್ನು ಕಳಕೊಳ್ಳೋದಾ?

**ಚಾರುದತ್ತ** ಗೆಳೆಯ, ಹಾಗಲ್ಲ–

ಯಾವ ನಂಬಿಕೆಯ ಭರವಸೆಯ ಮೇಲೆ
ಅವಳು ನಮ್ಮಲ್ಲಿ ಈ ಚಿನ್ನವನ್ನಿಟ್ಟಳೋ
ಆ ಹಿರಿಯ ನಂಬಿಕೆಗೆ, ಅಂಥ ವಿಶ್ವಾಸಕ್ಕೆ
ನಾವು ತೆರಬೇಕಾದ ಬೆಲೆಯಿದು ॥ ೭ ॥

**ವಿದೂಷಕ** ಓ ಗೆಳೆಯ, ನನಗೆ ಹೊಟ್ಟೆಯಲ್ಲಿ ಸಂಕಟ ಆಗ್ಲಿಕ್ಕೆ ಇನ್ನೂ ಒಂದು ಕಾರಣ ಉಂಟುಃ ತನ್ನ ಗೆಳತಿಗೆ ಸನ್ನೆ ಮಾಡಿ, ಮೋರೆಗೆ ಬಟ್ಟೆ ಅಡ್ಡಹಿಡಿದು ನನ್ನನ್ನು ಗೇಲಿಮಾಡಿ ನಕ್ಕಳು ಗೊತ್ತಾ? ನಾನು, ಒಬ್ಬ ಬ್ರಾಹ್ಮಣ, ಇವತ್ತು ನಿನ್ನ ಕಾಲಿಗೆ ತಲೆ ತಾಗಿಸಿ ಅಡ್ಡ ಬಿದ್ದು ಬೇಡಿಕೊಳ್ತಾ ಇದ್ದೇನೆಃ ಸಾವಿರ ತೊಂದರೆಗಳಿಗೆ ತವರಾದ ಈ ಸೂಳೆಯರ ಸಹವಾಸ ಸಾಕು; ಬಿಟ್ಟು ಬಿಡು ಈ ಸೂಳೆಯರೂಂತಂದ್ರೆ ಚಪ್ಪಲಿನೊಳಗೆ ಸೇರಿಕೊಂಡ ಹರಳಿನ ಹಾಗೆ– ಮತ್ತೆ ತೆಗೆದು ಬಿಸಾಡೋದು ತಾಪತ್ರಯ ಅಲ್ಲದೆ ಓ ಗೆಳೆಯ, ಸೂಳೆ– ಆನೆ– ಕರಣೀಕ– ಬುದ್ಧಭಿಕ್ಕು– ಗೂಢಚರ ಮತ್ತು ಕತ್ತೆ– ಇವು ಇದ್ದಲ್ಲಿ ದುಷ್ಟರು ಕೂಡ ಹಾಯೋದಿಲ್ಲ

**ಚಾರುದತ್ತ** . ಗೆಳೆಯ, ಸಾಕು ಈಯೆಲ್ಲ ತೆಗಳಿಕೆಯ ಮಾತು ನನ್ನ ಪಾಡಿನಿಂದಾಗಿಯೆ ನಾನು ನಿರಾಕೃತನಾಗಿದ್ದೇನೆ ನೋಡುಃ

ಬೀಸ ಧಾವಿಸಲು ಯತ್ನಿಸಿದರೂ ಕುದುರೆ
ತ್ರಾಣ ಕುಸಿಯಲು ಕಾಲು ಓಡಲೊಪ್ಪುವುದಿಲ್ಲ
ಹಾಗೆಯೇ ಚಪಲಮನದೀ ಮನುಜನಾಸೆಗಳು
ನೂರು ಕಡೆ ತಿರುಗಾಡಿ ಕೈಸಾಗದಿರೆ ಕೊನೆಗೆ
ಮನದ ಮಂಡಿಗೆಯಲ್ಲೆ ಕೊನೆಗೊಳುವವು ॥ ೮ ॥

ಅಲ್ಲದೆ ಗೆಳೆಯ–

ಯಾರ ಬಳಿ ದುಡ್ಡಿದೆಯೊ
ಅವರಿಗವಳೊಲಿಯುವಳು
ದುಡ್ಡಿಗೆ ಮರುಳಾಗುವ ಪೈಕಿ ಅವಳು!

(ಸ್ವಗತ) ಅಲ್ಲ, ಗುಣಕ್ಕೆ ಮರಳಾಗುವ ಪೈಕಿ ಅವಳು (ಪ್ರಕಾಶ)

ದುಡ್ಡು ಕೈಬಿಟ್ಟಿರುವ
ಬಡವರಾದರೆ ನಾವು
ಅವಳು ಮೊದಲೇ ನಮ್ಮ ಕೈಬಿಟ್ಟ ಹಾಗೆ ॥ ೯ ॥

**ವಿದೂಷಕ** : (ಕೆಳಕ್ಕೆ ನೋಡಿ, ಸ್ವಗತ) ಇವನು ಅಟ್ಟ ನೋಡಿ ನಿಟ್ಟುಸಿರು ಬಿಡೋದು ನೋಡಿದರೆ ನನಗನ್ನಿಸುತ್ತೆ: ನಾನು ತಡೆದಷ್ಟು ಇವನ ಉಮ್ಮಳ ಹೆಚ್ಚಾಗ್ತಾ ಇದೆ ಕಾಮ ಏನಿದ್ದರೂ ಕುಟಿಲ ಅಂತನ್ನೋ ಮಾತು ನಿಜ (ಪ್ರಕಾಶ) ಓ ಗೆಳೆಯ, ಮತ್ತೆ ಅವಳು ಹೇಳಿದಳು: ಇವತ್ತು ಸಂಜೆ ನಾನು ಅತ್ತಲಾಗಿ ಬರ್ತೇನೇಂತ ಚಾರುದತ್ತನ ಬಳಿ ಹೇಳು – ಅಂತ ನನ್ನ ಅಂದಾಜು ಅವಳಿಗೆ ಆ ಮುತ್ತಿನ ಹಾರದಿಂದ ತೃಪ್ತಿಯಾಗಲಿಲ್ಲ ಇನ್ನೂ ಏನನ್ನೋ ಕೇಳ್ಳಿಕ್ಕೆ ಬರ್ತಾ ಇದ್ದಾಳೆ

**ಚಾರುದತ್ತ** : ಗೆಳೆಯ, ಬರಲಿ ಸಂತುಷ್ಟಳಾಗಿ ಮರಳುತ್ತಾಳಂತೆ

* * * *

**ಚೇಟ** : (ಪ್ರವೇಶಿಸಿ) ತಿಳ್ಕೊಳ್ಳಿ ಜನರೇ ತಿಳ್ಕೊಳ್ಳಿ–

ತುಂಡು ಮೋಡಗಳು ಮೇಲಿಂದ ಮೇಲೆ
ಮಳೆ ಸುರಿಸುತಿದ್ದ ಹಾಗೆ
ನನ್ನ ಬೆನ್ನಿನ ತೊಗಲು ಚಂಡಿಮುದ್ದೆ!
ಈ ಶಿಮದ ಗಾಳಿ ಮೇಲಿಂದ ಮೇಲೆ
ಬೀಸುತಿದ್ದ ಹಾಗೆ
ನಾನು ಒಳಗಿಂದೊಳಗೆ ನಡುಗುತಿದ್ದೆ! ॥ ೧೦ ॥

ಏಳು ತೂತುಗಳಿರುವ ಕೊಳಲಿನಲ್ಲಿ
ಹೊರಡಿಸುತ್ತೇನೆ ಸೊಗಸಾದ ನಾದ
ಏಳು ತಂತಿಗಳಿರುವ ವೀಣೆಯನ್ನು
ಬಾರಿಸುತ್ತೇನೆ ಸೊಗಸಾಗಿ ಮಿಾಟ
ಹಾಡು ಹಾಡುತ್ತೇನೆ ಕತ್ತೆಯಪ್ಪನ ಹಾಗೆ

ಯಜಮಾನಿ ವಸಂತಸೇನೆ ಅಪ್ಪಣೆ ಮಾಡಿದ್ದಾಳೆ: ಕುಂಭೀಲಕ, ನೀನು ಮುಂದೆ ಹೋಗು ನಾನು ಬರುತ್ತಿರುವ ಸುದ್ದಿಯನ್ನು ಆರ್ಯಚಾರುದತ್ತನಿಗೆ ಮುಟ್ಟಿಸು – ಎಂದು ಅದರಿಂದ ಸದ್ಯ ಆರ್ಯಚಾರುದತ್ತನ ಮನೆಗೆ ಹೋಗುತ್ತೇನೆ (ನಡೆದಾಡಿ, ಪ್ರವೇಶಿಸಿ, ದಿಟ್ಟಿಸಿ) ಆರ್ಯಚಾರುದತ್ತ ಇಲ್ಲೆ ತೋಟದಲ್ಲಿದ್ದಾನೆ ಜತೆಗೆ ಈ ದುಷ್ಟ ಬ್ರಹ್ಮಚಾರಿಯೂ ಇದ್ದಾನೆ. ಅಲ್ಲಿಗೇ ಹೋಗುತ್ತೇನೆ ಏನು, ತೋಟದ ಬಾಗಿಲು ಮುಚ್ಚಿದೆ! ಇರಲಿ ಈ ದುಷ್ಟ ಬ್ರಹ್ಮಚಾರಿಗೆ ಸನ್ನೆ ಮಾಡ್ತೇನೆ (ಎಂದು ಮಣ್ಣುಗುಳಿಗೆಗಳನ್ನು ಎಸೆಯುತ್ತಾನೆ )

**ವಿದೂಷಕ** ಅರೆ, ಯಾರಿದು, ಬೇಲಿ ಬಿಗಿದ ಬೇಲದ ಗಿಡಕ್ಕೆ ಹೇಗೆ ಹಾಗೆ ನನ್ನ ಮೇಲೆ ಕಲ್ಲು ತೂರುತಿದ್ದಾರೆ?

**ಚಾರುದತ್ತ** : ಉದ್ಯಾನದ ತಂಗುಮನೆಯ ಕಡೆಗಟ್ಟಿನಲ್ಲಿ ಆಡುತ್ತಿರುವ ಪಾರಿವಾಳ ಗಳು ಬೀಳಿಸಿರಬೇಕು

**ವಿದೂಷಕ** : ತೊತ್ತಿನ ಮಗನೆ, ಕೆಟ್ಟ ಪಾರಿವಾಳವೆ, ನಿಲ್ಲು ನಿಲ್ಲು, ಈ ದಂಟಿ ಯಿಂದ ಒಳ್ಳೆ ಕಳಿತ ಮಾವಿನ ಹಣ್ಣನ್ನು ಹೇಗೆ ಹಾಗೆ ನಿನ್ನನ್ನು ಉಪ್ಪರಿಗೆ ಯಿಂದ ಕೆಳಕ್ಕೆ ಉರುಳಿಸ್ತೇನೆ (ಎಂದು ದಂಟಿ ಎತ್ತಿಕೊಂಡು ಹೊರಡುತ್ತಾನೆ )

**ಚಾರುದತ್ತ** . (ಜನಿವಾರದಲ್ಲಿ ಹಿಡಿದೆಳೆದು) ಗೆಳೆಯ, ಕೂತುಕೊ ಯಾಕೆ ಸುಮ್ಮನೆ ಓಡಿಸ್ತೀಯಾ? ಪಾಪ, ಅದು ತನ್ನ ನಲ್ಲೆಯೊಡನೆ ಲಲ್ಲೆಯಾಡ್ತಾ ಇದೆ ಇರಲಿ ಪಾಪ

**ಚೇಟ** ಏನು? ಪಾರಿವಾಳದತ್ತ ನೋಡ್ತಾ ಇದ್ದಾನೆ! ನನ್ನನ್ನು ನೋಡ್ತಾ ಇಲ್ಲ ಇರಲಿ ಇನ್ನೊಂದು ಮಣ್ಣ ಗುಳಿಗೆಯಿಂದ ಮತ್ತೊಮ್ಮೆ ಹೊಡೆಯುತ್ತೇನೆ (ಹಾಗೆಯೆ ಮಾಡುತ್ತಾನೆ )

**ವಿದೂಷಕ** (ಸುತ್ತ ನೋಡಿ) ಓಹೋ, ಕುಂಭೀಲಕನಾ? ಹೋಗಿ ಏನೂಂತ ಕೇಳ್ತೇನೆ (ಹೋಗಿ ಬಾಗಿಲು ತೆರೆದು) ಅರೆ, ಕುಂಭೀಲಕ, ಬಾರಯ್ಯ, ನಿನಗೆ ಸ್ವಾಗತ ಉಂಟು

**ಚೇಟ** ಅಯ್ಯ, ಅಡ್ಡಬಿದ್ದೆ

**ವಿದೂಷಕ** : ಅರೆ, ಇಂಥ ಕತ್ತಲು ಕವಿದ ದುರ್ದಿನದಲ್ಲಿ ನೀನು ಎತ್ತಲಾಗಿ ಇದು?

**ಚೇಟ** : ಆಕೆಽಽ

**ವಿದೂಷಕ** : ಯಾವ ಆಕೆ?

**ಚೇಟ** . ಆಕೆಽಽ

**ವಿದೂಷಕ** . ಅರೆ, ತೊತ್ತಿನ ಮಗನೆ, ಏನಯ್ಯಾ ಇದು? ಬರಗಾಲದಲ್ಲಿ ಊರ್ಧ್ವಶ್ವಾಸ ಎಳೆಯುವ ಮುದಿ ಬೇಡನ ಹಾಗೆ ಕ್ಯಾಕರಿಸ್ತಾ ಇದೀಯಾ ಆಕೇ ಆಕೇಂತ!

**ಚೇಟ** ನೀನು ಯಾಕೆ ಮತ್ತೆ ಇಂದ್ರೋತ್ಸವದಲ್ಲಿ ಬಲಿ ತಿನ್ನೋಕೆ ಆಸೆ ಪಡುವ ಕಾಗೆಯ ಹಾಗೆ ಹಳಹಳಿಸ್ತಿದೀಯಾ?

**ವಿದೂಷಕ** : ಏನು ಸಂಗತಿ ಹೇಳಯ್ಯ

**ಚೇಟ** : (ಸ್ವಗತ) ಇರಲಿ ಹೀಗೆ ಹೇಳ್ತೇನೆ (ಪ್ರಕಾಶ) ನಿನಗೊಂದು ಸಮಸ್ಯೆ ಕೊಡ್ತೇನೆ

**ವಿದೂಷಕ** : ನಾನು ನಿನ್ನ ತಲೆ ಮೇಲೆ ಕಾಲಿಡ್ತೇನೆ

**ಚೇಟ** : ಹಾಗಾದರೆ ನಿನಗೆ ಗೊತ್ತಾ? ಯಾವ ಸಮಯದಲ್ಲಿ ಮಾವು ಮೊಗ್ಗು ಬಿಡೋದು?

**ವಿದೂಷಕ** : ಅರೆ ಸೂಳೆಮಗನೆ, ಗ್ರೀಷ್ಮದಲ್ಲಿ ಅಲ್ಲವಾ?

**ಚೇಟ** : (ನಗುತ್ತ) ಆಹ್ಹಾ ಅಲ್ಲಲ್ಲ

**ವಿದೂಷಕ** : (ಸ್ವಗತ) ಈಗ ಏನು ಉತ್ತರಕೊಡೋದು? (ಯೋಚಿಸಿ) ಇರಲಿ ಚಾರುದತ್ತನನ್ನು ಹೋಗಿ ಕೇಳ್ತೇನೆ (ಪ್ರಕಾಶ) ಏಯ್, ಒಂದು ಕ್ಷಣ ನಿಲ್ಲು (ಚಾರುದತ್ತನ ಬಳಿಗೆ ಬಂದು) ಓ ಗೆಳೆಯ, ಕೇಳ್ತಾ ಇದೇನೆ, ಮಾವು ಮೊಗ್ಗು ಬಿಡೋದು ಯಾವ ಸಮಯದಲ್ಲಿ?

**ಚಾರುದತ್ತ** : ಮೂರ್ಖ, ವಸಂತದಲ್ಲಿ ಅಲ್ಲವಾ?

**ವಿದೂಷಕ** . (ಚೇಟನ ಬಳಿ ಬಂದು) ಮೂರ್ಖ, ವಸಂತದಲ್ಲಿ ಅಲ್ಲವಾ?

**ಚೇಟ** : ನಿನಗೆ ಎರಡನೇ ಸಮಸ್ಯೆ ಹಾಕ್ತೇನೆಃ ಸಮೃದ್ಧವಾದ ಗ್ರಾಮಗಳನ್ನು ರಕ್ಷಿಸುವಂಥಾದ್ದು ಯಾವುದು?

**ವಿದೂಷಕ** · ಅರೆ, ರಸ್ತೆ

**ಚೇಟ** : (ನಗುತ್ತ) ಆಹ್ಹಾ ಅಲ್ಲಲ್ಲ

**ವಿದೂಷಕ** : ಇರಲಿ ಸಂದಿಗ್ಧದಲ್ಲಿ ಬಿದ್ದೆನಲ್ಲ (ಯೋಚಿಸಿ) ಇರಲಿ ಚಾರುದತ್ತನನ್ನೆ ಕೇಳ್ತೇನೆ (ತಿರುಗಿ ಚಾರುದತ್ತನ ಬಳಿ ಬಂದು) ಗೆಳೆಯ, ಸಮೃದ್ಧವಾದ ಗ್ರಾಮಗಳನ್ನು ರಕ್ಷಿಸುವಂಥಾದ್ದು ಯಾವುದು?

**ಚಾರುದತ್ತ** : ಗೆಳೆಯ, ಸೇನೆಯಲ್ಲವಾ?

**ವಿದೂಷಕ** : (ಚೇಟನ ಬಳಿ ಬಂದು) ಏಯ್ ತೊತ್ತಿನ ಮಗನೆ, ಸೇನೆಯಲ್ಲವಾ?

**ಚೇಟ** ಎರಡನ್ನೂ ಒಟ್ಟು ಮಾಡಿ ಬೇಗ ಹೇಳು ನೋಡೋಣ

**ವಿದೂಷಕ** : ಸೇನೆವಸಂತ

**ಚೇಟ** · ಓಹ್ ದಡ್ಡ ಬ್ರಹ್ಮಚಾರಿ, ತಿರುಗಿಸಿ ಹೇಳಯ್ಯ

**ವಿದೂಷಕ** : (ಕಾಲುಗಳನ್ನು ತಿರುಗಿಸಿ ನಿಂತು) ಸೇನೆವಸಂತ

**ಚೇಟ** · [illegible] ಶಬಗಳನು ತಿರುಗಿಸಿ ಹೇಳಯ

**ವಿದೂಷಕ** · (ಆಲೋಚಿಸಿ) ವಸಂತಸೇನೆ

**ಚೇಟ** ಆಕೇऽऽ ಬಂದಿದ್ದಾಳೇಂತ

**ವಿದೂಷಕ** ಹಾಗಾದರೆ ಚಾರುದತ್ತನಿಗೆ ಸುದ್ದಿ ಮುಟ್ಟಿಸ್ತೇನೆ (ಬಳಿಗೆ ಬಂದು) ಅಯ್ಯಾ ಚಾರುದತ್ತ, ಸಾಲಕೊಟ್ಟ ದಣಿ ಬಂದಿದ್ದಾರೆ

**ಚಾರುದತ್ತ** . ನಮ್ಮ ಮನೆಯಲ್ಲಿ ಯಾರಪ್ಪಾ ಅಂಥ ಸಾಲ ಕೊಡುವ ದಣಿ?

**ವಿದೂಷಕ** ಮನೆಯಲ್ಲಿ ಇಲ್ಲದಿದ್ದರೆ ಮನೆ ಬಾಗಿಲಲ್ಲಿದ್ದಾರೆ ಇದೋ ಹೊರಗೆ ವಸಂತಸೇನೆ ಬಂದಿದ್ದಾಳೆ

**ಚಾರುದತ್ತ** · ಗೆಳೆಯ, ಏನು ನನ್ನನ್ನು ಕುಚೋದ್ಯ ಮಾಡ್ತಾ ಇದೀಯಾ?

**ವಿದೂಷಕ** ನನ್ನ ಮಾತಿನಲ್ಲಿ ನಂಬಿಕೆ ಇಲ್ಲದಿದ್ರೆ ಈ ಕುಂಭೀಲಕನನ್ನು ಕೇಳು ಏ ಸೂಳೆಮಗನೆ, ಕುಂಭೀಲಕ, ಬಾ ಇಲ್ಲಿ

**ಚೇಟ** · (ಬಂದು) ಅಯ್ಯ, ಅಡ್ಡಬಿದ್ದೆ

**ಚಾರುದತ್ತ** ಸ್ವಾಗತ ಏನಪ್ಪಾ ನಿಜವಾಗಿಯೂ ವಸಂತಸೇನೆ ಬಂದದ್ದು ಹೌದಾ?

**ಚೇಟ** : ಇದೋ ಇಲ್ಲೇ ಬರ್ತಾ ಇದ್ದಾಳೆ ವಸಂತಸೇನೆ

**ಚಾರುದತ್ತ** ಭದ್ರ, ಸಂತೋಷದ ಸುದ್ದಿ ತಂದವರನ್ನು ನಾನು ಎಂದೂ ಬರಿಗೈಯಲ್ಲಿ ಕಳಿಸಿದ್ದಿಲ್ಲ ತಗೋ ಈ ಉಡುಗರೆಯನ್ನು (ಎಂದು ಮೇಲುದ ವನ್ನು ಕೊಡುತ್ತಾನೆ )

**ಚೇಟ** . (ತಗೊಂಡು, ನಮಸ್ಕರಿಸಿ, ಸಂತೋಷದಿಂದ) ಹಾಗಾದರೆ ಬರಬಹುದೂಂತ ಯಜಮಾನಿಗೆ ತಿಳಿಸ್ತೇನೆ (ಎಂದು ಹೋಗುತ್ತಾನೆ )

**ವಿದೂಷಕ** ಓಹೋಯ್, ಗೊತ್ತಾಯಿತಾ, ಕೆಟ್ಟಮಳೆ ಹಿಡಿದ ಈ ದುರ್ದಿನದಲ್ಲಿ ಕೂಡ ಏಕೆ ಬಂದಿದ್ದಾಳೇಂತ?

**ಚಾರುದತ್ತ** · ಗೆಳೆಯ, ನನಗೆ ಸರಿಯಾಗಿ ಗೊತ್ತಾಗಿಲ್ಲ

**ವಿದೂಷಕ** · ನನಗೆ ಗೊತ್ತಾಗಿದೆ: ಮುತ್ತಿನ ಹಾರ ಕಮ್ಮಿ ಬೆಲೇದ್ದು, ತನ್ನ ಬಂಗಾರ ಹೆಚ್ಚು ಬೆಲೆ ಬಾಳುವಂಥಾದ್ದೂಂತ ಅಸಮಾಧಾನದಿಂದ ಇನ್ನಷ್ಟು ಕೇಳೋಕೆ ಬಂದಿದ್ದಾಳೆ

**ಚಾರುದತ್ತ** ಸಮಾಧಾನಪಟ್ಟು ತೆರಳ್ತಾಳೆ ಬಿಡು

* * * *

(ಪ್ರವೇಶ: ಉಜ್ವಲವಾಗಿ ಅಭಿಸಾರಿಕೆಯ ವೇಷಾಲಂಕಾರಗಳನ್ನು ತೊಟ್ಟ ಉತ್ಕಂಠಿತೆಯಾದ ವಸಂತಸೇನೆ, ಕೊಡೆ ಹಿಡಿಯುವ ಹುಡುಗಿ ಮತ್ತು ವಿಟ.)

ವಿಟ . (ವಸಂತಸೇನೆಯನ್ನು ಕುರಿತು)–

ಕೈಯಲ್ಲಿ ಕಮಲವಿರದಾ ಲಕ್ಷ್ಮಿಯಿವಳು
ಮನ್ಮಥನ ಕೈಯ ಚೆಲುವಾಯುಧವೊ ಇವಳು
ಕುಲದ ಹೆಣ್ಮಕ್ಕಳಿಗೆ ತಲೆಬೇನೆಯಿವಳು
ಕಾಮನುದ್ಯಾನದಲಿ ಹೂತ ಹೂವು
ಸೊಗದ ಚೆಲುನಡೆಯವಳು
ಕೊಡಿಕೆಯ ಹೊತ್ತಿನೊಳು
ನಾಚಿಕೊಳ್ಳುವ ಕಲೆಯ ಬಲ್ಲವಳು
ರತಿಯ ರಂಗಸ್ಥಳದಿ ಮೆಚ್ಚಿ ಬೆಂಬತ್ತಿರುವ
ಪಥಿಕರದೆ ಪಡೆಯನ್ನು ಪಡೆದವಳು ಇವಳು ॥ ೧೨ ॥

ವಸಂತಸೇನೆ, ನೋಡು ನೋಡು–

ಬೆಟ್ಟಗಳ ತುದಿಯಲ್ಲಿ
ಜೋತಾಡುತಿರುವ ಈ
ಗುಡುಗುತಿಹ ಮೋಡಗಳು
ಗಂಡನೂರಲ್ಲಿರದ
ಬೇಸರದ ಹುಡುಗೆಯರ
ಬಗೆಯನ್ನು ಹೋಲುತಿವೆ
ಗುಡುಗಿನಬ್ಬರ ಕೇಳಿ
ನವಿಲುಗಳು ಜಿಗಿಯುತ್ತ
ಮಣಿಯಿಂದ ಕಡೆದಂಥ
ಬೀಸಣಿಗೆಯಂಥ
ಚೆಲುಗರಿಗಳಿಂದ
ಗಾಳಿಯನು ಬೀಸುತಿವೆ
ಮುಗಿಲಿಗೇನೇ ॥ ೧೩ ॥

ಅಲ್ಲದೆ–

ಮಳೆಯ ಧಾರೆಗೆ ಸಿಕ್ಕ ಕಪ್ಪೆಗಳು
ಕೆಸರಿಡಿದ ತಮ್ಮ ಮೋರೆಗಳಿಂದ
ಕುಡಿಯುತಿವೆ ನೀರನ್ನು!
ಮತ್ತೇರಿದೀ ನವಿಲು
ಕೊರಳುಬ್ಬಿ ಹಾಡುತಿದೆ!
ಹೂಬಿಟ್ಟ ಈ ನೀಪ
ದೀಪದ ಕುಡಿಯಂತೆ ಮಿಂಚುತಿದೆ!
ಸನ್ಯಾಸಿಯ ಸುತ್ತಮುತ್ತ

ಕುಲಗೇಡಿಗಳ ಸಂತೆ ನೆರೆಯುವಂತೆ
ಮೋಡಗಳು ಮುತ್ತಿಹವು ಚಂದ್ರನನ್ನು!
ಸೂಳೆಯರ ಮನೆಯಲ್ಲಿ
ಬೆಳೆದ ಹುಡುಗಿಯ ಹಾಗೆ
ನಿಂತಲ್ಲಿ ನಿಲದೆ, ಸಿಕ್ಕ ಸಿಕ್ಕೆಡೆಗೆಲ್ಲ
ಹೊಂಚುತಿದೆ ಮಿಂಚು ॥ ೧೪ ॥

**ವಸಂತಸೇನೆ** . ಭಾವ, ಚನ್ನಾಗಿ ಹೇಳಿದೆ ಈಕೆ–
ಈ ಇರುಳ ಸವತಿ ದಾರಿ ತಡೆಯುತ್ತಿಹಳು
ಕೋಪಗೊಂಡವಳಂತೆ ನನ್ನ ಮೇಲೆ
"ಎಲೆ ಮೊದ್ದು ಹೆಣ್ಣೆ, ನಿನಗೇಕೆ ಕಿಚ್ಚು
ಈ ಮೋಡದುಬ್ಬರದ, ಪೆರ್ಮೊಲೆಯ ಜವ್ವನದ
ನನ್ನೊಡನೆ ನನ್ನಿನಿಯ ರಮಿಸುತಿರಲು?"
ಎಂದು ಗುಡುಗಿನ ನೆಪದಿ ಗದರುತಿಹಳು ॥ ೧೫ ॥

**ವಿಟ** · ಹೌದು ಹೌದು, ಅದು ನಿಜ ಈ ಇರುಳ ಸವತಿಯನ್ನು ನೀನು ಎಷ್ಟು ಟೀಕಿಸಿದರೂ ಒಪ್ಪುತ್ತೆ

**ವಸಂತಸೇನೆ** · ಭಾವ, ಹೆಣ್ಣುಮಕ್ಕಳ ಸಹಜ ಸ್ವಭಾವವನ್ನು ಹೊತ್ತು ಬಂದ ಈ ಇರುಳ ಸವತಿಯನ್ನು ದೂರಿ ಏನು ಫಲ? ಭಾವ, ನೋಡು–
ಸುರಿಯಲಿ ಮಳೆ
ಗುಡುಗಲಿ ಮೋಡ
ಬೇಕಿದ್ದರೆ ಹೊಡೆಯಲಿ ಸಿಡಿಲು
ಬಯಸಿದ ನಲ್ಲನ
ಬಳಿ ಹೊರಟವಳಿಗೆ
ತಡೆಯಾಗದು ಮಳೆ ಅಥವಾ ಬಿಸಿಲು ॥ ೧೬ ॥

**ವಿಟ** ವಸಂತಸೇನೆ, ನೋಡು ನೋಡು ಇಲ್ಲಿ–
ಗಾಳಿ ಬೀಸಿದೆಡೆ ರೊಯ್ಯನೋಡುತಿಹ ಮೋಡ
ಬಿರುಮಳೆಯ ಬಾಣಗಳ ಸುರಿಸುತಿದೆ ನೋಡ
ಗುಡುಗಿನ ಭೇರಿಯ ಬಾರಿಸಿ
ಕೋಲ್ಮಿಂಚಿನ ವಿಜಯಧ್ವಜ ಹಾರಿಸಿ
ಕಸಿದುಕೊಳುತಿದೆಯಲ್ಲ
ಬಾಂದಳದಿ ಚಂದಿರನ ಕಿರಣಗಳನೆಲ್ಲ
ದಾಳಿ ಮಾಡಿದ ಊರಿನೆದೆಯಲ್ಲೆ ನಿಂದ
ರಾಜ ಬಲವಂತದಿಂದ

ತ್ರಾಣ ಕಳಕೊಂಡ ಶತ್ರುವಿನ ಕೈಯಿಂದ
ಕಂದಾಯ ಕಸಿಯುವಂದ ॥ ೧೭ ॥

**ವಸಂತಸೇನೆ** ಅದೇನೋ ನಿಜ ಇಲ್ಲಿ ಈ ಇದನ್ನು ನೋಡು ಮತ್ತೆ–
ನೀರು ಕುಡಿದು ಹೊಟ್ಟೆ ಬೀಗಿ ಬಾಗಿದ,
ಮದ್ದಾನೆಯಂತೆ ಕಪ್ಪಿನ ಮುದ್ದೆಯಾದ,
ಮಿಂಚಿನ ಧಳಕು ಬೆಳ್ಳಕ್ಕಿಗಳ ಬೆಳಕನ್ನು
ಮೈಯಲ್ಲಿ ಬೆರಸಿಕೊಂಡು
ಗುಡುಗುತಿರುವ ಈ ಮೋಡಗಳು ಮೊದಲೆ
ಚುಚ್ಚಿ ನೋಯಿಸುತಿವೆ ನನ್ನ ಬಗೆಯನ್ನು
ಅದು ಸಾಲದಿದ್ದುದಕೆ
ದುಷ್ಟ ಬುದ್ಧಿಯ ಈ ಹಾಳುಗೇಡಿ ಬಕ
'ಮಳೇಃ ಮಳೇಃ' ಎಂದು ಸಾರುವೊಲು ಕೂಗುತ್ತ
ಇದ್ದ ಗಾಯಕ್ಕೆ ಉಪ್ಪನೆರೆಯುತ್ತ
ಬಾರಿಸುತಿದೆ ವಿರಹಿಣಿಯರ ಸಾವುಡೋಲು ॥ ೧೮ ॥

**ವಿಟ** . ವಸಂತಸೇನೆ, ಅದು ನಿಜ ಓ ಇದನ್ನಷ್ಟು ನೋಡು–
ತಲೆಯ ಮೇಲೆ ಬೆಳ್ಳಕ್ಕಿಗಳ ಬಿಳಿಯ ಪಾಗು
ಮಿಂಚುತಿಹ ಮಿಂಚುಗಳ ಚಾಮರದ ಸೋಗು
ಇಂಥ ಸಡಗರದಿಂದ ಇಡಿಯ ಆಕಾಶವೇ
ಒಂದು ಮದ್ದಾನೆಯನು ಹೋಲುತಿದೆಯಲ್ಲವೆ? ॥ ೧೯ ॥

**ವಸಂತಸೇನೆ** ಭಾವ, ನೋಡು ನೋಡು–
ಹಸಿ ತಮಾಲದಂತೆ ಕಪ್ಪಾದ ಮೋಡಗಳು
ಕಬಳಿಸಿವೆ ಸೂರ್ಯನನು
ಬರಿದಾಗಿದೆ ಬಾನು!
ಸುರಿಮಳೆಯ ಧಾರೆಗೆ ಕುಸಿಯುತಿವೆ ಹುತ್ತಗಳು
ಬಾಣ ತಾಗಿಸಿಕೊಂಡ ಮತ್ತಗಜಗಳಂತೆ!
ಅರಮನೆಯ ಅಟ್ಟಗಳ ಮೇಲೆ
ಹೊಳೆವ ಚಿನ್ನದ ದೀಪಮಾಲೆಯಂತೆ
ಸಂಚರಿಸುತಿದೆ ಮಿಂಚು!
ಕೈಸಾಗದ ಗಂಡನ ಕೈಹಿಡಿದ ಹೆಣ್ಣು
ಹೆರವರ ಕೈಸೇರುವಂತೆ
ಈ ಬೆಳದಿಂಗಳೂ ಕೂಡ ಉದ್ದಂಡ ಮೋಡಗಳ
ಕೈಯಲ್ಲಿ ಸಿಕ್ಕು ಸೆರೆಯಾಗಿದೆ! ॥ ೨೦ ॥

ವಿಟ ವಸಂತಸೇನೆ, ನೋಡು ನೋಡು,
ಸಾಲುಗಟ್ಟಿ ಮುನ್ನುಗ್ಗುತಿರುವ ಮದ್ದಾನೆಗಳಿದೆ ಮಾಟ
ಮಿಂಚಿನೊಂದು ಸರಪಳಿಯ ಜೀನು ಬಿಗಿದ ಕಾರ್ಮುಗಿಲಿನಾಟ
ಧಾರೆ ಸುರಿದು ನೆಲವನ್ನು ಬೆಳ್ಳಿಯಾ ಸರಿಗೆಯಲ್ಲಿ ಬಿಗಿದು
ಎತ್ತುತಿರುವಂತೆ ತಳದಿಂದ ಮೇಲೆ ದೇವೇಂದ್ರನಾಜ್ಞೆ ಪಡೆದು
|| ೨೧ ||

ಅಲ್ಲದೆ ನೋಡು–

ಕಾಳ್ಕೋಣದ ಪಡೆಯಂತೆಯೆ
ಕರಿಬಣ್ಣದ ಮೋಡಗಳು
ಬಿರುಗಾಳಿಗೆ ಜೋತಾಡುತ
ಚಲಿಸುತ್ತಿವೆ ಅತ್ತಿತ್ತ
ಒಳಗೊಳಗೆಯೆ ತಳಮಳಿಸಿದ
ಕಡಲಿನ ಒಡಲಂತೆ!
ಹೊಸವಾಸನೆ ಹೊಡೆಯುವ ನೆಲ
ಹೊಸ ಹಸಿರಿನ ಚಿಗುರೊಡೆದು
ಬಾಯ್ಬಿಡುತಿರುವಂತಿದೆ
ಎಳೆಕಡಿಯದೆ ಸುರಿಯುವ ಮಳೆ
ಎನ್ನುವ ಮುತ್ತಿನ ಬಾಣಗಳಿಂದ || ೨೨ ||

**ವಸಂತಸೇನೆ** ಭಾವ, ಭಾವ ಇಲ್ಲಿ ಈ ಮೋಡ–
ಬಾರಯ್ಯ ಬಾ ಎಂದು ಸೋಗೆನವಿಲುಗಳು ಕೂಗಿ ಕರೆಯುತಿರಲು
ಜವದಿ ಮೇಲೇರಿ ಹಾರಿ ತವಕದಲಿ ಬೆಳ್ಳಕ್ಕಿ ಅಪ್ಪಿಕೊಳಲು
ತಾವರೆಯ ತೊರೆದ ಹಂಸಗಳು ಹೆದರಿ ಕಣ್ಕಣ್ಣು ನೋಡುತಿರಲು
ಅಡರುತಿದೆ ಮೋಡ ದಿಕ್ಕುದಿಕ್ಕುಗಳಿಗೆ ಕಾಡಿಗೆಯ ಕಪ್ಪು ಬಳಿದು
|| ೨೩ ||

ವಿಟ ಅದು ನಿಜ ಇಲ್ಲಿ ನೋಡು–
ಜಗವೆಲ್ಲ ಮೈಮರೆತು
ನಲುಗದೆಯೆ ಮರವಟ್ಟು
ಮಲಗಿರುವ ಹಾಗಿದೆ
ನೀರ ಧಾರಾಗೃಹದ ಒಳಗೆ
ಬಾನಂಗಳದಿ ಬಿಡಿಸಿಟ್ಟ
ಮೋಡಗಳ ಕೊಡೆಯ ಕೆಳಗೆ!
ತಾವರೆಯ ಕಣ್ಗಳನು ಮುಚ್ಚಿ
ಹಗಲು–ಇರುಳುಗಳ ಭೇದ ಮರೆತು

ಮಿಂಚು ಹೊಳೆದಾಗೊಮ್ಮೆ
ತುಸುಬೆಳಕು ಆಮೇಲೆ
ದಿಸೆಯ ಮೋರೆಯ ಮೇಲೆ
ಕತ್ತಲೆಯ ಕಪ್ಪು ಪತ್ತಲದ
ಹೊದ್ದಿಕೆಯ ಮುಸುಕನೆಳೆದು ॥ ೨೪ ॥

**ವಸಂತಸೇನೆ** ಭಾವ, ಹೌದು ಓ ನೋಡು ನೋಡು-
ಮೂರ್ಖನಿಗೆ ಮಾಡಿದುಪಕಾರದಂತೆ
ಬೆಳಕಿಗೇ ಬಾರದಿವೆ ತಾರಕೆಗಳು
ಗಂಡನನ್ನಗಲಿರುವ ಹೆಂಗಳೆಯರಂತೆ
ಬೆಪ್ಪುಮುಪ್ಪಾಗಿಹವು ಎಣ್‌ದಿಸೆಗಳು
ಇಂದ್ರದೇವನ ಸಿಡಿಲಿನಾಯುಧದ ಬೆಂಕಿಗೆ
ಒಳಗೊಳಗೆ ಬೆಂದ ಈ ಬಾಂದಳವೆ ಬಹುಶಃ
ಕರಕರಗಿ ನೀರಾಗಿ ಹರಿಯುತಿದೆ ಕೆಳಗೆ ॥ ೨೫ ॥

ಅಲ್ಲದೆ ನೋಡು-

ಒಮ್ಮೆ ಮೇಲೇರಿ
ಇನ್ನೊಮ್ಮೆ ಕೆಳಗಿಳಿದು
ಈ ಮೋಡ
ನೀರ ಸುರಿಸುವುದೇನು
ಮತ್ತದರ ಗುಡುಗಾಟವೇನು
ಸುತ್ತೆಲ್ಲ ಕತ್ತಲೆ ಕವಿಸುವುದೇನು?
ಮೊತ್ತ ಮೊದಲ ಬಾರಿಗೆ
ಸಿರಿತನದ ಸವಿಯುಂಡ ಮನುಜನಂತೆ
ತೊಡುತಿಹುದು ಇದು ಗಳಿಗೆಗೊಂದು ರೂಪ ॥ ೨೬ ॥

**ವಿಟ** : ಹೌದು ಹೌದು-
ಮಿಂಚುಗಳ ಸೆಲೆಯಿಂದ ಉರಿಯುತಿರುವ ಹಾಗೆ
ಬೆಳ್ಳನೆಯ ಬೆಳ್ಳಕ್ಕಿಗಳ ಮಾಲೆಯಿಂದ
ಗೊಳ್ಳನೆಯೆ ನಗುತಿರುವ ಹಾಗೆ
ಸುರಿಮಳೆಯ ಕೂರಂಬು ಸುರಿಸುತಿರುವೀ
ಕಾಮನ ಬಿಲ್ಲಿನಿಂದಿದೊ ಬಾನೆ ಬಳುಕುತಿರುವ ಹಾಗೆ
ಕಿವಿಗಡಚಿಕ್ಕುವೀ ಸಿಡಿಲಿನಬ್ಬರದಿಂದ
ಬೊಬ್ಬಿರಿಯುತಿರುವ ಹಾಗೆ
ಬೀಸುಗಾಳಿಗಳಿಂದ ಓಲಾಡುತಿರುವ ಹಾಗೆ
ಕಾಳಸರ್ಪನ ತೆರದ ಕಪ್ಪು ಮೋಡಗಳಿಂದ

ಬುಸುಗುಡುವ ಈ ಬಾನು
ಹೇಗೆ ಕಣ್‌ಸೆಳೆಯುತಿದೆ
ಹೊಗೆಯನುಗುಳುವ ಹಾಗೆ || ೨೭ ||

**ವಸಂತಸೇನೆ** ಓ ಮುಗಿಲೆ, ನಿಜವಾಗಿ ನಿನಗೆ ನಾಚಿಕೆಯಿಲ್ಲ
ನನ್ನ ನಲ್ಲನ ಮನೆಗೆ ನಾನು ಹೊರಟಿರುವಾಗ
ಗುಡುಗಿ ಬೆದರಿಸುತಿರುವೆಯಲ್ಲ!
ನಿನ್ನ ಈ ನೀರ ಧಾರೆಯ ಕೈಗಳಿಂದ
ನನ್ನ ನೇವರಿಸುತಿರುವೆಯಲ್ಲ! || ೨೮ ||

ಓ ದೇವೇಂದ್ರನೆ,

ನಾನೇನು ನಿನ್ನ ಮೊದಲ ಪ್ರಣಯಿನಿಯೆ?
ಏಕೆ ಈ ಮುಗಿಲ ಗುಡುಗಿನ ಸಿಂಹನಾದ?
ಬಯಸಿದಾತನ ಮನೆಗೆ ಹೊರಟ ಈ ಹೆಣ್ಣಿಗೆ
ತರವಲ್ಲ ದಾರಿಯಲಿ ಮಳೆಯ ತಡೆಯೊಡ್ಡುವುದು || ೨೯ ||

ಅಲ್ಲದೆ–

ನೀನಹಲ್ಯೆಯ ಬಳಿ
ನಾನೆ ಗೌತಮನೆಂದು ಸುಳ್ಳು ಹೇಳಿ
ಅವಳ ರಮಿಸಿದವನಲ್ಲವೇ ಹಿಂದೆ?
ನಿನ್ನ ಹಾಗೆಯೆ ನೋಡು ನನಗು ವಿರಹದ ದುಃಖ
ಉಳಿದವರ ಸುಖದುಃಖ ಗೊತ್ತಿರದ ಓ ಇಂದ್ರ
ದಯವಿಟ್ಟು ಮೋಡಗಳ ದೂರ ಸರಿಸು || ೩೦ ||

ಅಲ್ಲದೆ–

ಓವೊ ದೇವೇಂದ್ರ
ಗುಡುಗುಗಳ ಗುಡುಗಿಸು
ಸುರಿಸು ಮಳೆಯನ್ನು
ನೂರು ಸಿಡಿಲುಗಳನ್ನು ಸಿಡಿಸು ಬೇಕಿದ್ದರೆ
ತನ್ನ ಪ್ರಿಯನೆಡೆಗೆ ಹೊರಟ ಹೆಣ್ಣುಗಳನ್ನು
ತಡೆಯುವುದು ನಿನಗಂತು ಶಕ್ಯವಿಲ್ಲ || ೩೧ ||

ಮೋಡ ಗುಡುಗಿದರೆ ಅದು ಸಹಜ
ಒರಟರು ಯಾವಾಗಲು ಗಂಡಸರು
ಆದರೆ ಓ ಮಿಂಚುವೆಣ್ಣೆ,

ಹೆಣ್ಣು ಹೃದಯದ ದುಃಖ
ತಿಳಿಯದಾಯಿತೆ ನಿನಗು? ॥ ೩೨ ॥

**ವಿಟ** : ಛೆಛೆ, ಅದನ್ನು ಛೇಡಿಸಬೇಡ, ಮಿಂಚು ನಿನಗೆ ಉಪಕಾರ ಮಾಡುತ್ತಿದೆ:

ಐರಾವತದ ಎದೆಯ ಮೇಲೆ
ಚಲಿಸುವ ಚಿನ್ನದ ಸಂಕಲೆಯಂತೆ
ಬೆಟ್ಟದ ನೆತ್ತಿಯ ಮೇಲೆ
ಹಾರುವ ಬೆಳ್ಳನೆ ಪತಾಕೆಯಂತೆ
ದೇವೇಂದ್ರನ ಒಳಮನೆಯಲ್ಲಿ
ಹಚ್ಚಿಟ್ಟಿಹ ಚೆಲು ದೀಪದಂತೆ
ತೋರಿಸುತಿದೆಯಲ ಈ ಮಿಂಚು
ನಿನ್ನಿನಿಯನ ಮನೆದಾರಿಯ ನಿನಗೆ! ॥ ೩೩ ॥

**ವಸಂತಸೇನೆ** : ಅದು ಹೌದು ಭಾವ, ಇದೇ ಆ ಮನೆ

**ವಿಟ** . ಎಲ್ಲ ಕಲೆಗಳ ಪಾರಂಗತೆಯಾದ ನಿನಗೆ ನಾನು ಹೇಳಬೇಕಾದ್ದು ಏನೂ ಇಲ್ಲ ಆದರೂ ಒಲವು ಮಾತನಾಡಿಸುತ್ತಿದೆ: ಆತನ ಬಳಿ ನೀನು ಹೆಚ್ಚು ಕೋಪ ತೋರಿಸಿಕೊಳ್ಳಬಾರದು

ಕೋಪಿಸಿಕೊಂಡೆಯೋ ಪ್ರೇಮಕ್ಕೆ ಕೊರತೆ
ಅಥವಾ ಕೋಪವೆ ಇರದಿದ್ದರೆ
ಒಸರದು ಪ್ರೇಮದ ಒರತೆ
ಕೋಪಿಸಿಕೊಳಬೇಕು
ಅವನನು ಕೋಪಗೊಳಿಸಬೇಕು
ಮರುಚಣದಲೆ ಒಲಿಯಬೇಕು
ಹಾಗೆಯೆ ನಿನ್ನಿನಿಯನ ಒಲಿಸಿಕೊಳಬೇಕು ॥ ೩೪ ॥

ಆಯಿತು, ಅದಿರಲಿ ಓಹೋಯ್, ಆರ್ಯಚಾರುದತ್ತನಿಗೆ ಹೀಗೆಂದು ತಿಳಿಸಿರಿ:

ಹೊನ್ನೆ-ಈಚಲು ಅರಳಿ ಕಂಪು ಮೂಗಿಗೆ ಹೊಡೆವ,
ಮೋಡ ತುಂಬಿದ ಇಂಥ ಸಮಯದಲ್ಲು
ಮಿಂಚು-ಗುಡುಗುಗಳಿಂದ ಹೆದರಿಕೊಂಡರು ಕೂಡ
ನಿನ್ನ ಕಾಣುವ ಹಿರಿಯ ಬಯಕೆಯಿಂದ
ಸಂತಸದ ಹರಕೆಯಿಂದ
ಒಳಗೆ ಕಾಮದ ಕಾವು ಹೊತ್ತು
ಮಳೆಗೆ ಮಿಂದ ಮುಂಗುರುಳು ಹೊತ್ತು
ಈ ಇವಳು

ತನ್ನ ಮನದೊಡೆಯನಾ ಮನೆಯೆಡೆಗೆ ಬಂದಿಹಳು
ಕೆಸರಿಂದ ಗೆಜ್ಜೆಗಳ ತೊಟ್ಟಿರುವ ಕಾಲುಗಳ
ತೊಳೆಯುತ್ತ ನಿಂದಿಹಳು || ೩೫ ||

**ಚಾರುದತ್ತ** (ಕಿವಿಗೊಟ್ಟು) ಗೆಳೆಯ, ಅದು ಯಾರು ಏನೆಂದು ತಿಳಿದುಕೊಂಡು ಬಾ

**ವಿದೂಷಕ** ಅಪ್ಪಣೆ ಮಾರಾಯ (ವಸಂತಸೇನೆಯ ಬಳಿ ಬಂದು ಆದರದಿಂದ) ನಿನಗೆ ಮಂಗಳವಾಗಲಿ

**ವಸಂತಸೇನೆ** ಆರ್ಯ, ನಮಸ್ಕಾರ ಆರ್ಯನಿಗೆ ಸ್ವಾಗತ (ವಿಟನನ್ನು ಕುರಿತು) ಭಾವ, ಈ ಕೊಡೆಹಿಡಿಯುವಾಕೆ ನಿನ್ನ ಜತೆಯೆ ಇರಲಿ

**ವಿಟ** . (ಸ್ವಗತ) ಉಪಾಯವಾಗಿ ನನ್ನನ್ನು ದೂರಕಳಿಸಿದಳು! (ಪ್ರಕಾಶ) ಹಾಗೆಯೆ ಆಗಲಿ ವಸಂತಸೇನೆ–

ಸುಳ್ಳು–ಸೆಡವು–ವಂಚನೆಯ ಬೆಳೆವ ಹೊಲ
ಕಪಟನಾಟಕದ ತವರು ನೆಲ
ಶಾರ್ಠ್ಯದ ಕಲೆ
ಸುರತಕೇಲಿಯ ತಾಲೀಮು ಶಾಲೆ
ಎಲ್ಲ ಬಗೆಯ ಶೃಂಗಾರ ಜಾತ್ರೆಗಳ ಗುಡಿ
ಮಾಲು ತೆರೆದಿಟ್ಟ ಬೀದಿಯಂಗಡಿ
ಈ ಸೂಳೆಯೆಂದರೆ
ಬಂದವರ ಸಮನಾಗಿ ರಂಜಿಸುವ ದಾಕ್ಷಿಣ್ಯ
ಇಲ್ಲಿ ಮಾರುವ ಪಣ್ಯ
ನಿನ್ನ ವ್ಯವಹಾರಕ್ಕೆ ಬರಲಿ ಒಳ್ಳೆಯ ಬೆಲೆ
ತರಲಿ ಸುಖದ ಸುಗ್ಗಿಯ ಸೆಲೆ || ೩೬ ||

(ಎಂದು ವಿಟ ಹೊರಟು ಹೋಗುತ್ತಾನೆ )

**ವಸಂತಸೇನೆ** : ಆರ್ಯಮೈತ್ರೇಯ, ಎಲ್ಲಿ ನಿಮ್ಮ ಜೂಜುಕೋರ?

**ವಿದೂಷಕ** : (ಸ್ವಗತ) ಹೀಹೀ, ಜೂಜುಕೋರ ಎಂದು ಹೇಳಿ ಈಕೆ ನನ್ನ ಗೆಳೆಯನನ್ನು ಗೌರವಿಸಿದಂತೆಯೆ ಆಯಿತು (ಪ್ರಕಾಶ) ತಾಯಿ, ಇಲ್ಲಿದ್ದಾನೆ, ಈ ಒಣಕಲು ತೋಟದ ತೋಪಿನಲ್ಲಿ

**ವಸಂತಸೇನೆ** ಆರ್ಯ, ಯಾವುದು ನಿಮ್ಮ ಒಣಕಲು ತೋಟದ ತೋಪು?

**ವಿದೂಷಕ** · ಎಲ್ಲಿ ತಿನ್ನೋದು–ಕುಡಿಯೋದು ಏನೂ ನಡೆಯೋದಿಲ್ಲ ಅದು

**ವಸಂತಸೇನೆ** : (ಮುಗುಳು ನಗುತ್ತಾಳೆ )

**ವಿದೂಷಕ** . ಸರಿ, ಒಳಗೆ ಬರೋಣವಾಗಲಿ

**ವಸಂತಸೇನೆ** (ಜನಾಂತಿಕ) ಒಳಗೆ ಹೋಗಿ ನಾನು ಹೇಗೆ ಮಾತಾಡಬೇಕು?

**ಚೇಟಿ** . "ಅಯ್ಯಾ ಜೂಜುಕೋರ, ಇಂದಿನ ಸಂಜೆ ನಿನಗೆ ಹಿತವಾಗಿದೆಯೇ" ಎಂದು

**ವಸಂತಸೇನೆ** ನನಗೆ ಮಾತನಾಡಲು ಸಾಧ್ಯವಾದರೆ!

**ಚೇಟಿ** · ಸಂದರ್ಭವೆ ಮಾತನಾಡಿಸುತ್ತದೆ

**ವಿದೂಷಕ** : ಒಳಗೆ ಹೋಗೋಣಾಗಲಿ

**ವಸಂತಸೇನೆ** · (ಒಳಹೊಕ್ಕು, ಬಳಿಬಂದು, ಹೂಗಳಿಂದ ಹೊಡೆಯುತ್ತ) ಓ ಜೂಜುಕೋರ, ಇಂದಿನ ಸಂಜೆ ಹಿತವಾಗಿದೆಯೇ ನಿನಗೆ?

**ಚಾರುದತ್ತ** (ದಿಟ್ಟಿಸಿ) ಅರೆ, ವಸಂತಸೇನೆ ಬಂದಿದ್ದಾಳೆ (ಸಂತಸದಿಂದ ಎದ್ದು ನಿಂತು) ಅಯಿ ಪ್ರಿಯೆ,

ಎಲ್ಲ ಸಂಜೆಗಳನ್ನು ಜಾಗರದಿ ಕಳೆದಿರುವೆ
ಇರುಳುಗಳ ಕಳೆದಿರುವೆ ನಿಟ್ಟುಸಿರುಗರೆದು
ಅರಳುಕಣ್ಣಿನ ಹೆಣ್ಣೆ,
ಇಂದು ನೀ ಬಂದಿರುವೆ
ನಿನ್ನೊಡನೆ ನಾನು ಕಳೆಯುವೀ ಸಂಜೆ
ದುಃಖ–ದುಮ್ಮಾನಗಳ ಇನ್ನು ಮುಂದೆ
ನನ್ನೆಡೆಗೆ ಬರಗೊಡದು ಖಂಡಿತ || ೩೭ ||

ಅದರಿಂದ ನಿನಗೆ ಸ್ವಾಗತ ಇದೋ ಆಸನ ಇಲ್ಲಿ ಕೂಡಬೇಕು

**ವಿದೂಷಕ** ಇದೋ ಆಸನ ಇಲ್ಲಿ ಕೂತುಕೊಳ್ಳೋಣಾಗಲಿ
(ವಸಂತಸೇನೆ ಕೂಡುತ್ತಾಳೆ ಅನಂತರ ಎಲ್ಲರೂ ಕೂಡುತ್ತಾರೆ )

**ಚಾರುದತ್ತ** ಗೆಳೆಯ, ನೋಡುನೋಡು–

ಕಿವಿಯಲ್ಲಿ ಮುಡಿದಿರುವ
ಈಚಲದ ಗೊಂಚಲಿಂದ
ಜಿನುಗಿದ ಮಳೆನೀರು
ತೊಟ್ಟಿಕ್ಕಿ ತೊಟ್ಟಿಕ್ಕಿ
ಒಂದು ಮೊಲೆ ತೊಯ್ದಿದೆ
ಯುವರಾಜಪದವಿಯಲಿ
ಅಭಿಷೇಕಗೊಂಡಿರುವ
ಶ್ರೀರಾಜಕುವರನಂತೆ! || ೩೮ ||

ಅದರಿಂದ ಗೆಳೆಯ, ವಸಂತಸೇನೆಯ ಬಟ್ಟೆಗಳು ನಾಂದಿವೆ ಬೇರೆ ಎರಡು ಒಳ್ಳೆಯ ಬಟ್ಟೆಗಳನ್ನು ತಂದು ಕೊಡುವೆಯಂತೆ

**ವಿದೂಷಕ** ಅಪ್ಪಣೆ ಮಾರಾಯ

**ಚೇಟಿ** . ಆರ್ಯ ಮೈತ್ರೇಯ, ನೀನು ಇರು ನಾನೆ ಆರ್ಯೆಯನ್ನು ಉಪಚರಿಸುತ್ತೇನೆ

(ಹಾಗೆಯೆ ಮಾಡುತ್ತಾಳೆ )

**ವಿದೂಷಕ** : (ಮರೆ ಮಾಚಿ) ಈಕೆಯನ್ನು ಏನೋ ಕೇಳಬೇಕೂಂತ ಇದ್ದೇನೆ ಕೇಳಲಾ?

**ಚಾರುದತ್ತ** ಆಯಿತು ಕೇಳು

**ವಿದೂಷಕ** (ಪ್ರಕಾಶ) ಮತ್ತೆ, ಇಂಥ ತಿಂಗಳ ಬೆಳಕೂ ಇಲ್ಲದ ಕತ್ತಲು ಕವಿದ ಕೆಟ್ಟ ದುರ್ದಿನದಲ್ಲಿ ಏನು ಇತ್ತ ಬರೋಣವಾಯಿತು?

**ಚೇಟಿ** ಬ್ರಾಹ್ಮಣ ತುಂಬ ಭೋಳೆ ಇದ್ದಾನೆ

**ವಸಂತಸೇನೆ** · ಅಲ್ಲಲ್ಲ, ಚೂಟಿ ಅನ್ನು

**ಚೇಟಿ** ನಮ್ಮ ಯಜಮಾನಿ ಇದನ್ನು ಕೇಳಲು ಬಂದಿದ್ದಾಳೆ: ಆ ಮುತ್ತಿನ ಹಾರದ ಬೆಲೆ ಎಷ್ಟು ಎಂದು

**ವಿದೂಷಕ** (ಜನಾಂತಿಕ) ಓಯ್, ನಾನು ಹೇಳಿಲ್ಲವಾ? ಆ ಮುತ್ತಿನ ಹಾರ ಕಮ್ಮಿ ಕಿಮ್ಮತ್ತಿನದ್ದು ಅವಳ ಚಿನ್ನ ಹೆಚ್ಚು ಕಿಮ್ಮತ್ತಿನದೂಂತ ಆಕೆಗೆ ಸಮಾಧಾನ ಆಗಿಲ್ಲ ಇನ್ನಷ್ಟು ಪರಿಹಾರ ಕೇಳ್ಳಿಕ್ಕೆ ಬಂದಿದ್ದಾಳೆ

**ಚೇಟಿ** ಆ ಹಾರವನ್ನು ನಮ್ಮ ಯಜಮಾನಿ ತನ್ನದೇ ಎಂದು ಭಾವಿಸಿ ಜೂಜಿನಲ್ಲಿ ಕಳಕೊಂಡಳು ಈಗಂತು ರಾಜನ ಸುದ್ದಿಯನ್ನು ಊರಿಂದೂರಿಗೆ ಮುಟ್ಟಿಸುವ ಆ ಜೂಜುಗಾರ ಎಲ್ಲಿ ಹೋದ ಎಂದೇ ಗೊತ್ತಿಲ್ಲ

**ವಿದೂಷಕ** · ಏನು, ನಾನು ಹೇಳಿದ್ದನ್ನೆ ನನಗೆ ತಿರುಗಿಸ್ತಾ ಇದೀಯಾ!

**ಚೇಟಿ** : ಅವನ ಪತ್ತೆಯಾಗುವ ತನಕ ಅದರ ಬದಲಿಗೆ ಈ ಚಿನ್ನ ತಗೋಬೇಕೂಂತ (ಎಂದು ತೋರಿಸುತ್ತಾಳೆ )

**ವಿದೂಷಕ** : (ವಿಚಾರಮಗ್ನನಾಗುತ್ತಾನೆ )

**ಚೇಟಿ** ಆರ್ಯನಿಗೆ ಏನೋ ಬಹಳ ಯೋಚನೆಗಿಟ್ಟುಕೊಂಡಂತಿದೆ ಏನು, ಇದನ್ನೇನಾದರೂ ಈ ಮೊದಲು ಕಂಡದ್ದುಂಟಾ?

**ವಿದೂಷಕ** : ಅದರ ಕೆತ್ತನೆಯ ಕೆಲಸದ ಮೋಡಿ ನೋಡಿ ಕಣ್ಣು ಅದರಲ್ಲೆ ನೆಟ್ಟುಹೋಯಿತು

**ಚೇಟಿ** : ಆರ್ಯ, ನಿನ್ನ ಕಣ್ಣು ಮೋಸ ಮಾಡಿದೆ ಇದು ಅದೇ ಚಿನ್ನದ ಒಡವೆ

**ವಿದೂಷಕ** : (ಸಂತೋಷದಿಂದ) ಓ ಗೆಳೆಯ, ನಮ್ಮ ಮನೆಯಲ್ಲಿ ಕಳವಾಯಿತಲ್ಲ ಇದು ಅದೇ ಚಿನ್ನದ ಒಡವೆ!

**ಚಾರುದತ್ತ** : ಗೆಳೆಯ,

ಅವಳಿಟ್ಟ ನ್ಯಾಸವನು ಮರಳಿಸುವುದಕ್ಕೆ
ಯಾವ ನೆಪವನ್ನು ಹೂಡಿದೆವೊ ನಾವು
ಅದನೆ ನಮಗೂ ಮರಳಿ ತಿರುಗಿಸಿದ ಹಾಗಿದೆ
ಆದರಿದು ನಿಜವೇನು, ಅಥವ ಬರಿಯಣಕವೆ? ॥ ೩೯ ॥

**ವಿದೂಷಕ** ಓ ಗೆಳೆಯ, ನಿಜವಯ್ಯ, ನನ್ನ ಬ್ರಾಹ್ಮಣ್ಯದಾಣೆಗು ನಿಜ

**ಚಾರುದತ್ತ** ತುಂಬ ಸಂತೋಷ

**ವಿದೂಷಕ** (ಜನಾಂತಿಕ) ಓಯ್, ಇದು ಎಲ್ಲಿ ಸಿಕ್ಕಿತೂಂತ ವಿಚಾರಿಸಲೇನಯ್ಯ?

**ಚಾರುದತ್ತ** ತಪ್ಪೇನು?

**ವಿದೂಷಕ** (ಚೇಟಿಯ ಕಿವಿಯಲ್ಲಿ) ಹೀಗೇಂತ

**ಚೇಟಿ** (ವಿದೂಷಕನ ಕಿವಿಯಲ್ಲಿ) ಹೀಗೇಂತ

**ಚಾರುದತ್ತ** ಏನು ಮಾತು ನಡೆದಿದೆ? ನಾವೇನು ಹೊರಗಿನವರಾ?

**ವಿದೂಷಕ** (ಚಾರುದತ್ತನ ಕಿವಿಯಲ್ಲಿ) ಹೀಗೇಂತ

**ಚಾರುದತ್ತ** : ಭದ್ರೆ, ಇದು ಅದೇ ಚಿನ್ನದ ಒಡವೆ ಅನ್ನೋದು ನಿಜವಾ?

**ಚೇಟಿ** · ಹೌದು ಆರ್ಯ

**ಚಾರುದತ್ತ** ಭದ್ರೆ, ನಾನು ಎಂದೂ ಒಳ್ಳೆಯ ಸುದ್ದಿ ತಂದವರನ್ನು ಬರಿಗೈಯಲ್ಲಿ ಕಳಿಸಿದ್ದಿಲ್ಲ ಇದೊ ತಗೋ, ಈ ಉಂಗುರ ನಿನಗೆ ಉಡುಗರೆ (ಎಂದು ಬೆರಳು ತಡವಿ ಉಂಗುರ ಇಲ್ಲದ ಕೈಯನ್ನು ನೋಡಿ ನಾಚಿಕೆಯನ್ನು ನಟಿಸುತ್ತಾನೆ )

**ವಸಂತಸೇನೆ** (ಸ್ವಗತ) ಅದಕೆಂದೆ ಅಲ್ಲವೆ ನಾನು ನಿನ್ನನ್ನು ಪ್ರೀತಿಸುತ್ತಿರುವುದು!

**ಚಾರುದತ್ತ** (ಜನಾಂತಿಕ) ಕಷ್ಟವಯ್ಯಾ ಕಷ್ಟ–

ದುಡ್ಡಿರದ ಜನದ ಜೀವನಕೆ ಲೋಕದಲಿ
ಮೊದಲಿಂದಲೂ ಕೂಡ ಅರ್ಥವಿಲ್ಲ
ಏನು ಮಾಡಿದ್ದಕ್ಕು ಪ್ರತಿಯಾಗಿ ಮಾಡಲಿಕೆ
ಕೈಸಾಗದಂಥವರ ಕೋಪಕೂ ಬೆಲೆಯಿಲ್ಲ
ಅವರನುಗ್ರಹವನ್ನು ಕೇಳುವವರಿಲ್ಲ ॥ ೪೦ ॥

ಅಲ್ಲದೆ–

ಗರಿಕಿತ್ತ ಹಕ್ಕಿ,
ಒಣಗಿದ ಮರ,
ನೀರಿಂಗಿದ ಕೆರೆ,
ಹಲ್ಲು ಕಿತ್ತ ಹಾವು
ಲೋಕದಲಿ ಇದರ ಜತೆ

ಎಣಿಸಬೇಕಾದಂಥ
ಇನ್ನೊಂದು ವಸ್ತು: ಬಡವ || ೪೧ ||

ಅಲ್ಲದೆ–

ಬಡವರೆಂದರೆ ಬಿಡಾರ ಕಿತ್ತ ಹಾಳು ಮನೆ
ನೀರಿಂಗಿದ ಬೋಳು ಬಾವಿ
ಒಣಗಿ ನೆಲಕ್ಕೊರಗಿದ ಮುದಿ ಮರ!
ಹಿಂದೆ ಕಂಡವರು ತಮ್ಮವರು ಮತ್ತೆ ಬಂದಾಗ
ಆ ಸಂಗಮದ ಸಂಭ್ರಮದ ಮೈಮರೆವಿನಲಿ ಕೂಡ
ಅವರ ಸಂತಸದ ಗಳಿಗೆ
ಹುಸಿಗೊಳ್ಳುವುದು ಹೀಗೆ || ೪೨ ||

**ವಿದೂಷಕ** ಯಾಕಯ್ಯ ಸುಮ್ಮನೆ ಅದನ್ನೆ ನೆನೆದು ನೆನೆದು ಮತ್ತೂ ದುಃಖಿಸ್ತೀಯಾ? (ಪ್ರಕಾಶ, ವಿನೋದವಾಗಿ) ಏನಪ್ಪಾ, ಆ ಚಿನ್ನ ಕಟ್ಟಿಟ್ಟಿದ್ದ ನನ್ನ ಸ್ನಾನದ ಪಂಚೆ ಮೊದಲು ನನಗೆ ಕೊಟ್ಟುಬಿಡು

**ವಸಂತಸೇನೆ** · ಆರ್ಯಚಾರುದತ್ತ, ನೀನು ಮುತ್ತಿನ ಹಾರ ಕಳಿಸಿ ನಾನು ದುಡ್ಡಿನ ಮೋರೆ ನೋಡುವವಳೂಂತ ಮಾಡಿದೆಯಲ್ಲ ಇದು ನ್ಯಾಯವಾ?

**ಚಾರುದತ್ತ** (ನಾಚಿಕೆ ಬೆರೆತ ನಗೆ ಬೀರಿ) ವಸಂತಸೇನೆ, ನೋಡು ನೋಡು–
ನಿಜದ ಸಂಗತಿಯನ್ನು ಯಾರು ನಂಬುತ್ತಾರೆ
ಗಾಳಿಗೆ ಹಿಡಿಯುತ್ತಾರೆ ಜನರು ನನ್ನನ್ನೆ
ನಿಸ್ಸತ್ವವಾದ ಈ ದಾರಿದ್ರ್ಯ ಲೋಕದಲಿ
ಎಲ್ಲ ಸಂಶಯಗಳಿಗು ತವರು ನೋಡು || ೪೩ ||

**ವಿದೂಷಕ** ಚೇಟಿ, ಏನು ನೀನೂ ಇಲ್ಲೇ ಮಲಕ್ಕೊಳ್ಳುವವಳಾ?

**ಚೇಟಿ** · (ನಕ್ಕು) ಆರ್ಯಮೈತ್ರೇಯ, ಏನು ಬೋಳೇತನ ತೋರಿಸ್ತಾ ಇದೀಯಾ?

**ವಿದೂಷಕ** ಓಹೋಯ್ ಗೆಳೆಯ, ನೆಮ್ಮದಿಯಿಂದ ಕುಳಿತ ಜನವನ್ನು ಕಂಬಿ ಕೀಳಿಸುವಂತೆ ಮುಸಲಧಾರೆಯ ಜಡಿಮಳೆ ಮತ್ತೆ ಸುರಿಯತೊಡಗಿದೆ

**ಚಾರುದತ್ತ** ಸರಿಯಾಗಿ ಹೇಳಿದೆ ನೀನು–
ಮೋಡದೊಡಲಿನಿಂದ ಸುರಿಯುತಿದೆ ನೀರಧಾರೆ
ಕೆಸರಿನೆಡೆಯಿಂದ ಮೇಲೆ ಚಿಮ್ಮುವ ಕಮಲ ನಾಳದಂತೆ!
ಚಂದ್ರನಗಲಿಕೆಯಿಂದ ತಳ್ಳಂಕಗೊಂಡಿರುವ
ಮುಗಿಲೆ ಸುರಿಸುತಿಹ ಕಣ್ಣೀರಿನಂತೆ || ೪೪ ||

ಅಲ್ಲದೆ–

ಬಲದೇವನ ಮೇಲುದವನು ಹೋಲುವ
ಕಾರ್ಮೋಡಗಳಿದೊ ಸುರಿಸುತ್ತಿವೆ
ಅರ್ಜುನನ ಶರದಂತೆ ಒರಟಾದ, ಬಿರುಸಾದ,
ಸಜ್ಜನರ ಬಗೆಯಂತೆ ತಿಳಿಯಾದ ನೀರಿನೆಳೆಯನ್ನು
ದೇವೇಂದ್ರನ ಮುತ್ತಿನ ಪೆಟ್ಟಿಗೆಯನ್ನೆ
ಚೆಲ್ಲುವರಿದು ನೆಲದೆಡೆಗೆ ಸುರಿಸಿದಂತೆ || ೪೫ ||

ಪ್ರಿಯೆ, ನೋಡು ನೋಡು–

ಬಾಗೆಯೆಲೆ ಪುಡಿಯನ್ನು ಮೈಗೆಲ್ಲ ಬಳಿದಂತೆ
ಕಪ್ಪು ಮೋಡಗಳಿಂದ ಒಪ್ಪಗೊಂಡಿದೆ ಬಾನು
ಪಕ್ಕದಲೆ ಬೀಸುತಿಹ ತಂಪಾದ, ಕಂಪಾದ
ಸಂಜೆಹೊತ್ತಿನ ಗಾಳಿ ಬೀಸಣಿಗೆ ಬೀಸುತಿದೆ
ಮೋಡದೊಡಗೂಡಲಿಕೆ ಬಯಸಿ ಮನ ಬಂದಂತೆ
ತಿರುಗುತಿಹ ರಾಗರಂಜಿತೆ ಮಿಂಚುಕನ್ನೆ
ಇನಿಯನನ್ನೆಂತಂತೆ ಅಂಬರವನಪ್ಪುತಿದೆ || ೪೬ ||

**ವಸಂತಸೇನೆ** (ಶೃಂಗಾರಭಾವವನ್ನು ನಟಿಸುತ್ತ ಚಾರುದತ್ತನನ್ನಪ್ಪಿಕೊಳ್ಳುತ್ತಾಳೆ )

**ಚಾರುದತ್ತ** : (ಸ್ಪರ್ಶಸುಖವನ್ನು ನಟಿಸಿ, ಪ್ರತಿಯಾಗಿ ತಾನೂ ಅಪ್ಪಿಕೊಂಡು)–
ಓ ಮೋಡವೆ,
ಸಾಗಲಿ ನಿನ್ನಯ ಗುಡುಗಿನ ಆರ್ಭಟ
ಕಾಮಪೀಡಿತವಾದ ನನ್ನ ಈ ಮೈಗೆ
ತಂಪುದೊರೆತಿದೆ ನಿನ್ನ ಕರುಣೆಯಿಂದ
ಈ ಸ್ಪರ್ಶದ ರೋಮಾಂಚಕೆ
ಅನುರಾಗಕೆ ಗರಿಗೆದರಿದೆ ಮೈ
ಈಚಲ ಹೂಗೊಂಚಲಿನಂತೆ || ೪೭ ||

**ವಿದೂಷಕ** : ಈ ಹಾಳು ದುರ್ದಿನ ಸೂಳೆಮಗನ್ದೆ, ಈಗ ಸಾರ್ತಿಯಾಗಿದೀಯಾ ಪಾಪ ಈಕೆಯನ್ನು ಮಿಂಚು ಗುಡುಗುಗಳಿಂದ ಹೆದರಿಸಲಿಕ್ಕೆ!

**ಚಾರುದತ್ತ** : ಗೆಳೆಯ, ಯಾಕೆ ಅದನ್ನು ಬೈತೀಯಾ–
ನೂರುವರ್ಷದ ಕಾಲ ಎಡೆಬಿಡದೆ ಇಂಥದೇ
ದುರ್ದಿನವು ಬರುತಿರಲಿ
ಬಿಡದೆ ಸುರಿಯಲಿ ಜಡಿಮಳೆ
ಮಿಂಚು ಬೇಕಾದಂತೆ ಮಿಂಚುತಿರಲಿ
ನನ್ನಂಥ ಜನರಿಗೆ ತೀರ ದುರ್ಲಭವಾದ

ಈ ನಲ್ಲೆಯಪ್ಪುಗೆ
ಇಂಥ ದುರ್ದಿನದಲ್ಲೆ ದೊರಕಿತಲ್ಲ || ೪೮ ||

ಅಲ್ಲದೆ ಗೆಳೆಯ,

ಬಯಸಿ, ಮನೆಯನ್ನರಸಿ ಬಂದಿರುವ ಕನ್ನೆಯರ
ಮಳೆಯ ನೀರಿಗೆ ತೊಯ್ದು ತಂಪು ಮೈಯನ್ನು
ತೂರಿ ಮೈಯೊಳಗೆ ಅಪ್ಪಿ ಹಿಡಿಯುವುದು
ಸಣ್ಣ ಸಂಗತಿಯಲ್ಲ; ಅಂಥವರ ಬಾಳು ಧನ್ಯ || ೪೯ ||

ಪ್ರಿಯೆ ವಸಂತಸೇನೆ,

ಚಪ್ಪರದ ಮುಚ್ಚಿಗೆಗೆ
ಬಿಗಿದ ಕಟ್ಟು ಸಡಿಲುತಿದೆ
ಹೇಗೊ ಕಂಬದ ಮೇಲೆ
ಕುಸಿಯದೆಯೆ ನಿಂತಿದೆ
ಚಿತ್ತಾರದ ಈ ಗೋಡೆ ಕೂಡ
ಬಳಿದ ಸುಣ್ಣ ತೊಳೆದು ಹೋಗಿ
ಮಳೆ ನೀರಿಗೆ ನೆನೆದಿದೆ || ೫೦ ||

(ಮೇಲೆ ನೋಡಿ) ಅರೆ ಕಾಮನ ಬಿಲ್ಲು! ಪ್ರಿಯೆ, ನೋಡು ನೋಡು–

ಮಿಂಚಿನ ನಾಲಿಗೆ ಚಾಚಿ
ಕಾಮನ ಬಿಲ್ಲಿನ ತೋಳನು ಚೆಲ್ಲಿ
ಮೋಡದ ಕೆನ್ನೆಯನಗಲಿಸಿ
ಆಕಳಿಸುತ್ತಿದೆ ಬಾನು || ೫೧ ||

ಅದರಿಂದ, ಬಾ, ಒಳಗಡೆ ಹೋಗೋಣ (ಎಂದು ಎದ್ದು ನಡೆಯುತ್ತಾನೆ)

ತಾಳಿಯ ಸೋಗೆಯಲಿ ತಾರಧ್ವನಿ
ಹಾಗೆಯೇ ಈ ಮರದ
ಟೊಂಗೆ ಟಿಸಿಲುಗಳಲ್ಲಿ ಮಂದ್ರನಾದ
ಕಲ್ಲುಗಳ ಮೇಲೆ ಬಿದ್ದಾಗ ಬಿರುಸುದನಿ
ನೀರಲ್ಲಿ ಭೋರೆನುವ ಚಂಡಧ್ವನಿ
ತಾಳಕ್ಕೆ ತಕ್ಕಂತೆ ವೀಣೆ ಬಾರಿಸಿದಂತೆ
ಸುರಿಮಳೆಯ ಹೊನಲಲ್ಲು ಗಾನದ ಲಯ || ೫೨ ||

(ಎಂದು ಎಲ್ಲರೂ ಹೋಗುತ್ತಾರೆ)

**"ಜಡಿಮಳೆಯ ದಿವಸ" ಎಂಬ**

**ಐದನೆಯ ಅಂಕ ಮುಗಿಯಿತು**

## ಅಂಕ ಆರು

# ಗಾಡಿ ಅದಲು-ಬದಲು

(ಪ್ರವೇಶ : ಚೇಟಿ)

**ಚೇಟಿ** ಇನ್ನೂ ಏನು ಯಜಮಾನಿ ಎಳ್ತಾ ಇಲ್ಲ? ಹೋಗಿ ಎಬ್ಬಿಸ್ತೇನೆ (ಎಂದು ನಡೆಯನ್ನು ನಟಿಸುತ್ತಾಳೆ )

(ಪ್ರವೇಶ : ಮೈಮುಚ್ಚಿ ಮಲಗಿದ ವಸಂತಸೇನೆ )

**ಚೇಟಿ** (ದಿಟ್ಟಿಸಿ) ಏಳು ಏಳು ಯಜಮಾನಿ, ಬೆಳಗಾಯಿತು

**ವಸಂತಸೇನೆ** (ಎಚ್ಚರಗೊಂಡು) ಏನು ರಾತ್ರಿಯೇ ಬೆಳಕಾಗಿ ಹೋಯಿತಾ?

**ಚೇಟಿ** ನಮಗಂತು ಇದು ಬೆಳಗು ಆರ್ಯೆಗೆ ಇದು ರಾತ್ರಿಯೇನೊ!

**ವಸಂತಸೇನೆ** ಚೇಟಿ, ನಿಮ್ಮ ಜೂಜುಕೋರ ಎಲ್ಲಿ?

**ಚೇಟಿ** ಆರ್ಯೆ, ವರ್ಧಮಾನಕನಿಗೆ ಅಪ್ಪಣೆಮಾಡಿ ಆರ್ಯಚಾರುದತ್ತ ಹಳೆಯ ಹೂದೋಟ ಪುಷ್ಪಕರಂಡಕದತ್ತ ಹೋದ

**ವಸಂತಸೇನೆ** ಏನೆಂದು ಅಪ್ಪಣೆ ಮಾಡಿ?

**ಚೇಟಿ** · ಕತ್ತಲು ಇರುವಾಗಲೇ ಗಾಡಿಕಟ್ಟು ಅದರಲ್ಲಿ ವಸಂತಸೇನೆ ಹೋಗಲಿ- ಎಂದು

**ವಸಂತಸೇನೆ** ಚೇಟಿ, ನಾನು ಎಲ್ಲಿಗೆ ಹೋಗಬೇಕಂತೆ?

**ಚೇಟಿ** ಆರ್ಯೆ, ಎಲ್ಲಿ ಆರ್ಯಚಾರುದತ್ತ ಇದ್ದಾನೆ ಅಲ್ಲಿಗೆ

**ವಸಂತಸೇನೆ** (ಚೇಟಿಯನ್ನು ಅಪ್ಪಿಹಿಡಿದು) ಚೇಟಿ, ರಾತ್ರಿ ಹೊತ್ತು ಸರಿಯಾಗಿ ನೋಡೋದಕ್ಕೆ ಆಗಲಿಲ್ಲ ಈಗಂತು ಕಣ್ತುಂಬ ಕಾಣ್ತೇನೆ ಚೇಟಿ, ನಾನು ಇಲ್ಲಿ ಒಳಮನೆಯ ಚೌಕಿಗೆ ಪ್ರವೇಶ ಪಡೆದದ್ದು ನಿಜವಾ?

**ಚೇಟಿ** · ಬರಿಯ ಒಳಮನೆಯ ಚೌಕಿ ಅಷ್ಟೆ ಅಲ್ಲ ಎಲ್ಲರ ಹೃದಯದೊಳಗೆ ಕೂಡ

**ವಸಂತಸೇನೆ** ಇದರಿಂದ ಚಾರುದತ್ತನ ಪರಿವಾರ ಬೇಸರಗೊಂಡಿದೆಯೆ?

**ಚೇಟಿ** ಬೇಸರಗೊಳ್ಳಲಿಕ್ಕುಂಟು

**ವಸಂತಸೇನೆ** ಯಾವಾಗ?

**ಚೇಟಿ** · ಆರ್ಯೆ ಇಲ್ಲಿಂದ ಹೊರಟುಹೋದಾಗ

**ವಸಂತಸೇನೆ** ಆಗ ಮೊದಲು ಬೇಸರಪಡಬೇಕಾದವಳು ನಾನು (ಒಲೈಸುವ ಧಾಟಿಯಲ್ಲಿ) ಚೇಟಿ, ತಗೊ ಈ ಮುತ್ತಿನ ಹಾರವನ್ನು ನನ್ನ ಸೋದರಿ

ಧೂತಾದೇವಿಗೆ ಕೊಂಡುಹೋಗಿ ಕೊಡು ಮತ್ತೆ ಹೀಗೆ ಹೇಳು : "ನಾನು ಚಾರುದತ್ತನ ಗುಣಕ್ಕೆ ಮನಸೋತ ದಾಸಿ ಎಂದ ಮೇಲೆ ನಿನ್ನ ದಾಸಿ ಕೂಡ ಅದರಿಂದ ಈ ಮುತ್ತಿನ ಹಾರ ನಿನ್ನ ಕೊರಳ ಸಿಂಗಾರವಾಗಿಯೆ ಇರಲಿ "

**ಚೇಟಿ** ಆರ್ಯೆ, ಒಂದು ವೇಳೆ ಇದರಿಂದ ಚಾರುದತ್ತ ಆಕೆಯ ಮೇಲೆ ಕೋಪಿಸಿಕೊಂಡರೆ?

**ವಸಂತಸೇನೆ** ಹೋಗು ಕೋಪಿಸಿಕೊಳ್ಳೋದಿಲ್ಲ

**ಚೇಟಿ** (ತೆಗೆದುಕೊಂಡು) ಯಜಮಾನಿಯ ಅಪ್ಪಣೆ (ಎಂದು ಹೋಗಿ ಮತ್ತೆ ಬರುತ್ತಾಳೆ ) ಆರ್ಯೆ, ಧೂತಾದೇವಿ ಹೇಳುತಿದ್ದಾಳೆ: "ಇದನ್ನು ಆರ್ಯಪುತ್ರ ನಿಮಗೆಂದು ಕೊಟ್ಟದ್ದಾಯಿತು ನಾನು ಅದನ್ನು ತೆಗೆದುಕೊಳ್ಳೋದು ತರವಲ್ಲ ಆರ್ಯಪುತ್ರನೆ ನನಗೆ ಎಲ್ಲಕ್ಕಿಂತ ಮಿಗಿಲಾದ ಬಂಗಾರ ಎನ್ನುವುದು ನಿನಗೆ ಗೊತ್ತಿರಬೇಕಲ್ಲ "

(ಪ್ರವೇಶ : ಮಗುವನ್ನು ಹಿಡಿದುಕೊಂಡ ರದನಿಕೆ)

**ರದನಿಕೆ** ಬಾ ಮಗೂ, ಬಾ ಈ ಬಂಡಿಯಲ್ಲಿ ಆಡೋಣ

**ಮಗು** (ದೀನವಾಗಿ) ರದನಿಕೆ, ಇದು ಯಾಕೆ ಈ ಮಣ್ಣಿನ ಬಂಡಿ? ಆ ಚಿನ್ನದ ಬಂಡಿಯನ್ನೆ ನನಗೆ ತಂದು ಕೊಡು

**ರದನಿಕೆ** (ದುಃಖದಿಂದ ನಿಟ್ಟುಸಿರುಗರೆದು) ಇನ್ನೆಲ್ಲಿಯದು ಮಗು, ನಮಗೆ ಚಿನ್ನದ ವಿಚಾರ? ತಂದೆಗೆ ಮತ್ತೆ ಕೈಗೂಡಿ ಬಂದಾಗ ಚಿನ್ನದ ಬಂಡಿಯಲ್ಲೆ ಆಡುವೆಯಂತೆ (ಸ್ವಗತ) ಯಾವುದಕ್ಕು ಇವನ ಮನವೊಲಿಸಿಕೊಳ್ಳುತ್ತೇನೆ ಆರ್ಯೆ ವಸಂತಸೇನೆಯ ಬಳಿ ಹೋಗುತ್ತೇನೆ (ಬಳಿಬಂದು) ಆರ್ಯೆ, ನಮಸ್ಕಾರ

**ವಸಂತಸೇನೆ** ರದನಿಕೆ, ಬಾಮ್ಮ ಯಾರ ಮಗು ಇದು? ತೊಡಿಗೆ ಇಲ್ಲದ ಬೋಳುಮೈಯಾದರೂ ಚಂದ್ರನಂಥ ಚೆಲುಮೋರೆಯ ಈತ ನನ್ನ ಬಗೆಯನ್ನು ತಣಿಸುತಿದ್ದಾನೆ

**ರದನಿಕೆ** ಇವ ಆರ್ಯಚಾರುದತ್ತನ ಮಗನಲ್ಲವಾ, ರೋಹಸೇನ

**ವಸಂತಸೇನೆ** (ತೋಳು ಚಾಚಿ) ಬಾ ನನ್ನ ಕಂದ, ಅಪ್ಪಿಕೊ (ಎಂದು ತೊಡೆಯಲ್ಲಿ ಕೂಡಿಸಿಕೊಂಡು) ಇವ ಥೇಟ ತಂದೆಯ ಪಡಿಯಚ್ಚು

**ರದನಿಕೆ** ಬರೇ ರೂಪದಲ್ಲಿ ಅಷ್ಟೆ ಅಲ್ಲ ನನಗೆ ಅನ್ನಿಸುತ್ತದೆ : ಗುಣದಲ್ಲಿ ಕೂಡ ಹಾಗೆಯೆ ಇವನಿಂದಾಗಿ ಆರ್ಯಚಾರುದತ್ತನ ಮನಸ್ಸಿಗೆ ಒಂದಿಷ್ಟು ನೆಮ್ಮದಿ.

**ವಸಂತಸೇನೆ** ಈಗ ಇವನು ಅಳೋದು ಯಾಕಂತೆ?

**ರದನಿಕೆ** ಇವ ನೆರಮನೆಯವರ ಹುಡುಗನ ಚಿನ್ನದ ಬಂಡಿಯಲ್ಲಿ ಆಡ್ತಾ ಇದ್ದ ಆ ಹುಡುಗ ಅದನ್ನು ಕೊಂಡುಹೋಗಿ ಬಿಟ್ಟ ಇವ ಬಂಡಿ ಬೇಕೂಂತ ಚಂಡಿ ಹಿಡಿದು ಕೂತ ಕಡೆಗೆ ನಾನು ಈ ಆವೆಯ ಮಣ್ಣಿನ ಬಂಡಿ ಮಾಡಿಕೊಟ್ಟೆ ಅದಕ್ಕೆ ಹೇಳ್ತಾನೆ "ರದನಿಕೆ, ಇದು ಯಾಕೆ ಈ ಮಣ್ಣಿನ ಬಂಡಿ? ಆ ಚಿನ್ನದ ಬಂಡಿಯನ್ನೆ ನನಗೆ ತಂದುಕೊಡು"– ಹಾಗೇಂತ

**ವಸಂತಸೇನೆ** ಹಾಯ್, ಹಾಯ್, ಇನ್ನೊಬ್ಬರ ಸಿರಿಯಿಂದ ಇವನೂ ಸಂತಾಪ ಪಡುವಂತಾಯಿತೆ? ಅಯ್ಯೋ ಅದೃಷ್ಟವೆ, ತಾವರೆಯೆಲೆಯ ಮೇಲೆ ಬಿದ್ದ ನೀರ ಹನಿಯಂತಿರುವ ಮನುಷ್ಯರ ಭಾಗ್ಯದೊಡನೆ ನೀನು ಚಿನ್ನಾಟವಾಡುವೆ (ಎಂದು ಕಂಬನಿ ಮಿಡಿಯುತ್ತ) ಮಗೂ, ಅಳಬೇಡಮ್ಮ, ಚಿನ್ನದ ಬಂಡಿಯಲ್ಲೆ ಆಡುವೆಯಂತೆ

**ಮಗು** ರದನಿಕೆ, ಯಾರೀಕೆ?

**ವಸಂತಸೇನೆ** ನಿನ್ನ ತಂದೆಯ ಗುಣಕ್ಕೆ ಮನಸೋತ ದಾಸಿ

**ರದನಿಕೆ** ಕಂದ, ಆಕೆ ನಿನಗೆ ತಾಯಿಯಾಗಬೇಕು

**ಮಗು** ರದನಿಕೆ, ನೀನು ಸುಳ್ಳು ಹೇಳ್ತೀಯಾ ಈಕೆ ನನ್ನ ತಾಯಿಯಾದರೆ ಮೈತುಂಬ ಚಿನ್ನಯಾಕೆ ಹಾಕ್ಕೊಂಡಿದಾಳೆ?

**ವಸಂತಸೇನೆ** . ಕಂದ, ಈ ಮುದ್ದು ಮೋರೆಯಿಂದ ಎಂಥ ದೈನ್ಯದ ಮಾತನ್ನಾಡುತ್ತಿರುವೆ? (ನಾಟ್ಯದಿಂದ ಆಭರಣಗಳನ್ನು ಕಳಚಿ, ಕಂಬನಿ ಮಿಡಿಯುತ್ತ) ಈಗ ನಿನ್ನ ತಾಯಿಯಾದೆ, ಅಲ್ಲ? ತಗೊ ಈ ಆಭರಣವನ್ನು ಚಿನ್ನದ ಬಂಡಿ ಮಾಡಿಸಿಕೊ

**ಮಗು** ಹೋಗು ನಾನು ತಗೊಳ್ಳೋಲ್ಲ ನೀನು ಅಳ್ತಾ ಇದ್ದಿ

**ವಸಂತಸೇನೆ** (ಕಂಬನಿ ಒರಸಿಕೊಂಡು) ಇಲ್ಲ ಮಗೂ, ಅಳೋದಿಲ್ಲ ಹೋಗು ಆಡು (ಆಭರಣಗಳನ್ನು 'ಆವೆಯ ಮಣ್ಣಿನ ಆಟದ ಬಂಡಿ'ಯಲ್ಲಿ ತುಂಬಿಸಿ) ಕಂದ, ಚಿನ್ನದ ಬಂಡಿ ಮಾಡಿಸಿಕೊ (ಮಗುವನ್ನು ಕರೆದುಕೊಂಡು ರದನಿಕೆ ಹೋಗುತ್ತಾಳೆ )

* * * * *

**ಚೇಟ** (ಗಾಡಿಯಲ್ಲಿ ಕುಳಿತು ಪ್ರವೇಶಿಸಿ) ರದನಿಕೆ ರದನಿಕೆ, ಆರ್ಯೆವಸಂತಸೇನೆಗೆ ಹೇಳು: ಹೊರಬಾಗಿಲಲ್ಲಿ ಮರೆಯಲ್ಲಿ ಗಾಡಿ ಸಜ್ಜಾಗಿದೆ– ಎಂತ

**ರದನಿಕೆ** (ಪ್ರವೇಶಿಸಿ) ಆರ್ಯೆ, ಈತ ವರ್ಧಮಾನಕ ವಿಜ್ಞಾಪಿಸಿಕೊಳ್ತಾ ಇದಾನೆ– ಹೊರಬಾಗಿಲಲ್ಲಿ ಗಾಡಿ ಸಜ್ಜಾಗಿದೆಯಂತೆ

**ವಸಂತಸೇನೆ** ಚೇಟಿ, ಒಂದು ಕ್ಷಣ ನಿಲ್ಲಲಿ ನಾನು ಅಷ್ಟರಲ್ಲಿ ಸಿಂಗರಿಸಿಕೊಂಡು ಬಂದುಬಿಡ್ತೇನೆ

**ರದನಿಕೆ** · (ಹೊರಬಂದು) ವರ್ಧಮಾನಕ, ಒಂದು ಕ್ಷಣ ನಿಲ್ಲು ಆರ್ಯೆ ಅಲಂಕರಿಸಿಕೊಂಡು ಬರ್ತಾಳೆ

**ಚೇಟ** ಓಹೋ, ನಾನೂ ಗಾಡಿಗೆ ಹಾಸೋ ಕಂಬಳಿ ಮರೆತು ಬಂದಿದ್ದೇನೆ ಅದನ್ನು ಹಿಡಕೊಂಡು ಬಂದುಬಿಡ್ತೇನೆ ಈ ಮೂಗುದಾರ ಬಿಗಿದ ಎತ್ತುಗಳೂ ಸುಮ್ಮಗೆ ಕೂಡುವಂಥವಲ್ಲ ಇರಲಿ ಗಾಡಿಯಲ್ಲೆ ಹೋಗಿ ಬಂದು ಬಿಡ್ತೇನೆ (ಎಂದು ಚೇಟ ಹೋಗುತ್ತಾನೆ )

**ವಸಂತಸೇನೆ** ಚೇಟಿ, ನನ್ನ ಅಲಂಕಾರದ ಸಜ್ಜಿಕೆಗಳನ್ನು ತಾ ಸಿಂಗರಿಸಿಕೊಳ್ತೇನೆ (ಎಂದು ಸಿಂಗರಿಸಿಕೊಳ್ಳುತ್ತಾ ನಿಲ್ಲುತ್ತಾಳೆ )

* * * * *

**ಸ್ಥಾವರಕ ಚೇಟ** (ಗಾಡಿಯಲ್ಲಿ ಕುಳಿತು ಪ್ರವೇಶಿಸಿ) ಮಹಾರಾಜನ ಭಾವಮೈದ ಸಂಸ್ಥಾನಕ ಅಪ್ಪಣೆ ಕೊಡಿಸಿದ್ದಾನೆ ಸ್ಥಾವರಕ, ಗಾಡಿ ಹಿಡಕೊಂಡು ಹಳೆಯ ಹೂದೋಟ ಪುಷ್ಪಕರಂಡಕಕ್ಕೆ ಕೂಡಲೆ ಬಾ– ಎಂತ ಇರಲಿ ಅಲ್ಲಗೇ ಹೋಗ್ತೇನೆ ಎಳೀರೋ ಎತ್ತುಗಳೇ ಎಳೀರಿ ಹೈಯ್ಯಾ ಹೈಽಽ (ಮುಂದು ವರಿದು ದಿಟ್ಟಿಸಿ) ಏನು ದಾರಿತುಂಬ ಹಳ್ಳಿಯವರ ಗಾಡಿಗಳು ಅಡ್ಡಾದಿಡ್ಡಿ ನಿಂತಿವೆ ಏನುಮಾಡೋದು ಈಗ? (ರೀವಿಯಿಂದ) ಓಯ್, ಪಕ್ಕಕ್ಕೆ ಸರೀರೋ, ದಾರಿ ಬಿಡ್ರೋ (ಕಿವಿಗೊಟ್ಟು) ಏನೆಂದಿರಿ? ಇದು ಯಾರ ಗಾಡೀಂತಲಾ? ಇದು ಮಹಾರಾಜನ ಭಾವಮೈದ ಸಂಸ್ಥಾನಕನ ಗಾಡಿ ಬೇಗ ದಾರಿ ಬಿಟ್ಟು ಸರೀರಿ (ದಿಟ್ಟಿಸಿ) ಇವ ಯಾರಪ್ಪ ಜೂಜುಮನೆಯ ಯಜಮಾನನ್ನು ಕಂಡು ಜೂಜಿನಲ್ಲಿ ಸೋತೋಡಿದ ಜೂಜುಕೋರನಂತೆ ನನ್ನನ್ನು ಕಂಡವನೆ ಕಣ್ಣು ತಪ್ಪಿಸಿಕೊಂಡು ಅತ್ತಲಾಗಿ ಹೋದ ಯಾರಿರಬಹುದು? ಅಥವಾ ಯಾರಾದರೆ ನನಗೇನು? ನಾನಂತು ಬೇಗ ಹೋಗ್ತೇನೆ ಓಯ್ ಹಳ್ಳಿಗಮಾರರು, ಪಕ್ಕಕ್ಕೆ ಸರೀರಿ, ಪಕ್ಕಕ್ಕೆ ಸರೀರಿ ಏನೆಂದಿರಿ? "ಸ್ವಲ್ಪ ನಿಲ್ಲು; ಹೂತುಹೋದ ಗಾಡಿಯ ಗಾಲಿಯನ್ನು ಸ್ವಲ್ಪ ಮೇಲೆತ್ತಿಕೊಡು"– ಎಂದಿರಾ? ಏಯ್, ಏನಯ್ಯಾ ಮಹಾರಾಜನ ಭಾವ ಮೈದ ಸಂಸ್ಥಾನಕನ ಖಾಸಾ ಗಾಡಿ ಹೊಡೆಯೋ ವೀರ ನಾನು ಹೂತು ಹೋದ ಗಾಲಿ ಎತ್ತೋದಾ? ಅಥವಾ ಒಬ್ಬನೇ ಒದ್ದಾಡ್ತಿದಾನೆ ಪಾಪ ಸ್ವಲ್ಪ ಸಹಾಯ ಮಾಡೋಣ ಈ ಗಾಡಿಯನ್ನು ಆರ್ಯಚಾರುದತ್ತನ ಹಿತ್ತಿಲ ಹೊರಬಾಗಿಲಲ್ಲಿ ಇಡ್ತೇನೆ (ಎಂದು ಗಾಡಿಯನ್ನು ನಿಲ್ಲಿಸಿ) ಇದೋ ಬಂದೆ (ಎಂದು ಹೋಗುತ್ತಾನೆ )

**ಚೇಟಿ** : ಆರ್ಯೆ, ಗಾಲೀ ಸದ್ದು ಕೇಳಿಸ್ತಾ ಇದೆ ಗಾಡಿ ಬಂತು ಕಾಣುತ್ತೆ

**ವಸಂತಸೇನೆ** · ಚೇಟಿ, ಹೋಗು ನನ್ನ ಹೃದಯ ಚಡಪಡಿಸುತ್ತಿದೆ ಹೊರ ಬಾಗಿಲಿನ ದಾರಿ ತೋರಿಸು

**ಚೇಟಿ** · ಬಾ ಆರ್ಯೆ, ಇತ್ತ ಬಾ

**ವಸಂತಸೇನೆ** : (ನಡೆದುಬಂದು) ಚೇಟಿ, ಇನ್ನು ನೀನು ವಿಶ್ರಮಿಸಿಕೊ

**ಚೇಟಿ** ಅಪ್ಪಣೆ (ಎಂದು ಹೋಗುತ್ತಾಳೆ)

**ವಸಂತಸೇನೆ** (ಬಲಗಣ್ಣು ಅದುರುವುದನ್ನು ಸೂಚಿಸಿ, ಗಾಡಿಯನ್ನೇರಿ) ಏನಿದು, ಬಲಗಣ್ಣು ಅದುರುತ್ತಿದೆ? ಅಥವಾ ಚಾರುದತ್ತನ ದರ್ಶನವೆ ಎಲ್ಲ ಅಪಶಕುನವನ್ನೂ ಪರಿಹರಿಸುತ್ತದೆ

**ಸ್ಥಾವರಕ ಚೇಟ** (ಪ್ರವೇಶಿಸಿ) ಗಾಡಿಗಳನ್ನೆಲ್ಲ ಸರಿಸಿದ್ದಾಯಿತು ಇನ್ನು ಹೋಗ್ತೇನೆ (ಎಂದು ನಾಟ್ಯದಿಂದ ಗಾಡಿಯೇರಿ ನಡೆಸುತ್ತ, ಸ್ವಗತ) ಗಾಡಿ ಭಾರವಾಗಿದೆಯಲ್ಲ? ಅಥವ ಗಾಡಿಗಳನ್ನು ದೂಡಿ ಬಳಲಿದ ನನಗೆ ಗಾಡಿ ಭಾರವಾದಂತೆ ಅನ್ನಿಸ್ತಾ ಇರಬೇಕು ಇರಲಿ ಹೊಗ್ತೇನೆ ಹೋಗ್ರೋ ಎತ್ತುಗಳೇ ಹೈಯ್ಯಾ ಹೈಽಽ

(ಪರದೆಯ ಮರೆಯಲ್ಲಿ)

ಓವ್ರೋ ಕಾವಲುದಳದವರೆ, ನಿಮ್ಮನಿಮ್ಮ ತುಕಡಿಯ ತಾಣಗಳಲ್ಲಿ ಎಚ್ಚರವಾಗಿ ನಿಂದಿರಿ ಈ ಗೊಲ್ಲರ ಹುಡುಗ ಸೆರೆಯನ್ನು ಮುರಿದು, ಸೆರೆಮನೆಯ ಕಾವಲಿನವನನ್ನೂ ಕೊಂದು ಸಂಕಲೆ ಬಿಡಿಸಿಕೊಂಡು ಕೈತಪ್ಪಿ ಹೋಗುತಿದ್ದಾನೆ ಹಿಡೀರಿ ಹಿಡೀರಿ

(ಪರದೆಯನ್ನು ಪಕ್ಕಕ್ಕೆ ಸರಿಸಿ ಆರ್ಯಕನ ಪ್ರವೇಶ ಗಾಬರಿಗೊಂಡಿದ್ದಾನೆ ಮೋರೆಗೆ ಮುಸುಕೆಳೆದುಕೊಂಡಿದ್ದಾನೆ ಒಂದು ಕಾಲಲ್ಲಿ ಬೇಡಿ ಜೋತಾಡುತ್ತಿದೆ ರಂಗದ ಮೇಲೆ ಅತ್ತಿತ್ತ ಸುಳಿಯುತ್ತಾನೆ)

**ಚೇಟ** (ಸ್ವಗತ) ಪೇಟೆ ತುಂಬ ಭಾರಿ ಗಲಾಟೆ ಎದ್ದಿದೆಯಲ್ಲ ನಾನು ಬೇಗ ಬೇಗ ಹೋಗಿಬಿಡ್ತೇನೆ (ಎಂದು ಹೋಗುತ್ತಾನೆ)

**ಆರ್ಯಕ** ರಾಜನ ಸೆರೆಯೆಂಬ ಈ ಸಾವಿನ
ಸಂಕಟದ ಹೆಗ್ಗಡಲನ್ನು ದಾಟಿ
ತುದಿಗಾಲಲಿ ಜೋತಾಡುವ
ತುಂಡುಸಂಕಲೆಯನೆಳೆಯುತ್ತ
ತಿರುಗುತಿದ್ದೇನೆ ನಾನು
ಕಟ್ಟು ಬಿಚ್ಚಿಸಿಕೊಂಡ ಆನೆಯಂತೆ ॥ ೧ ॥

ಓಹ್, ಸಿದ್ಧರ ಕಣಿನುಡಿಯಿಂದ ಹೆದರಿಕೊಂಡ ಮಹಾರಾಜ ಪಾಲಕ ನನ್ನನ್ನು ಗೊಲ್ಲರ ಕೇರಿಯಿಂದ ಹಿಡಿದು ತಂದು ಕೊಲ್ಲುವುದಕ್ಕಾಗಿ ಕತ್ತಲೆಯ ಮನೆಯಲ್ಲಿ ತಳ್ಳಿದ ಪ್ರಿಯಮಿತ್ರ ಶರ್ವಿಲಕನ ಆಸರೆಯಿಂದಾಗಿ ನಾನು ಆ ಸೆರೆಯಿಂದ ತಪ್ಪಿಸಿಕೊಂಡು ಬಂದೆ (ಕಂಬನಿ ಮಿಡಿಯುತ್ತ)

ನನ್ನ ಹಣೆಯಲಿ ಭಾಗ್ಯ ಬರೆದಿರುವುದಾದರೆ
ಅದರಲ್ಲಿ ನನ್ನ ತಪ್ಪೇನು?
ಮತ್ತೇಕೆ ನನ್ನನ್ನು ಕಾಡಾನೆಯಂತೆಲ್ಲ

ಹಿಡಿದು ಕಟ್ಟಿಡುವ ಹವಣು?
ದೈವವೇ ಒಲಿದು ಕೈಚಾಚಿ ಕೊಡಮಾಡಿದರೆ
ಅದನು ತಪ್ಪಿಸಲು ಸಾಧ್ಯವೆ?
ರಾಜ ನನ್ನಂಥವರಿಗೆಟಕುವಂಥವನಲ್ಲ
ಬಲವಂತರೊಡನೆ ಎಂಥ ಜಿದ್ದು? ॥ ೨ ॥

ಭಾಗ್ಯಹೀನನಾದ ನಾನು ಈಗೆತ್ತ ಹೋಗಲಿ? (ದಿಟ್ಟಿಸಿ) ಇದು ಯಾರೊ ಒಬ್ಬ ಸಜ್ಜನನ ಮನೆ ಹೊರಬಾಗಿಲು ತೆರೆದೇ ಇದೆ

ಹರಕು ಮುರುಕಾದ ಹಳೆಯ ಮಣ್ಣಿನ ಮನೆ
ಬಿರುಕುಬಿಟ್ಟಿದೆ ಬಾಗಿಲಿನ ಸಂದಿಗೊಂದಿ
ಕೀಲು ಮೊದಲೇ ಇಲ್ಲ; ಹಾಗಾದರೀ ಮನೆಯ
ಯಜಮಾನ ಖಂಡಿತಕು ನನ್ನಂತೆ ಯಾವುದೋ
ಆಪತ್ತಿಗೊಳಗಾಗಿ ದುರ್ದೆಸೆಯಲಿರಬೇಕು ॥ ೩ ॥

ಅದರಿಂದ ಇಲ್ಲೆ ಒಳಹೊಕ್ಕು ನಿಲ್ಲುತ್ತೇನೆ

(ತೆರೆಯ ಮರೆಯಲ್ಲಿ)

ಹೋಗ್ರೋ ಎತ್ತುಗಳೆ, ಹೋಗ್ರೋ ಹೈಯ್ಯಾ ಹೈऽऽऽ

**ಆರ್ಯಕ** (ಕಿವಿಗೊಟ್ಟು) ಅರೆ ಗಾಡಿ ಈ ಕಡೆಗೆಯೆ ಬರ್ತಾ ಇದೆ
ಜೂಜಿನ ಗೋಷ್ಠಿಯ ಗಾಡಿಯಿರಬಹುದೆ ಇದು?
ಯಾರೊ ಕಿಡಿಗೇಡಿಗಳಿರಲಿಕಿಲ್ಲವಲ್ಲ?
ಅಥವ ಮದುಮಗಳನ್ನು ಕೊಂಡೊಯ್ಯಲಿಕ್ಕೆಂದು
ಬಂದಿರುವ ದಿಬ್ಬಣದ ಗಾಡಿಯಿರಬಹುದೆ?
ಅಥವ ಹೊರಗೆತ್ತಲೋ ಪಯಣ ಹೊರಟೀ ಗಾಡಿ
ಯಾವನೋ ದೊಡ್ಡಕುಳದವನದಿರಬಹುದೆ?
ಏನೊ ಆಕಸ್ಮಿಕದಿ ಇತ್ತ ಬಂದಿರಬಹುದೆ?
ಅಥವ ನನಗಾಗಿಯೆ ದೈವ ಕಳಿಸಿರಬಹುದೆ
ಅದಕೆಂದೆ ಏಕಾಂತದೀ ತಾಣದಲ್ಲಿ
ನನಗೆಂದೆ ಕಾಯುತಿರಬಹುದೆ? ॥ ೪ ॥

**ವರ್ಧಮಾನಕ ಚೇಟ** (ಗಾಡಿಯೊಳಗೆ ಪ್ರವೇಶಿಸಿ) ಅಮ್ಮಯ್ಯ; ಗಾಡಿಗೆ ಹಾಸುವ ಕಂಬಳಿ ತಂದದ್ದಾಯಿತು ರದನಿಕೆ, ಆರ್ಯೆವಸಂತಸೇನೆಗೆ ಹೇಳು: ಸಜ್ಜಾಗಿ ನಿಂತಿರುವ ಗಾಡಿಯನ್ನೇರಿ ಆರ್ಯೆ ಹಳೆಯ ಹೂದೋಟ ಪುಷ್ಪ ಕರಂಡಕದತ್ತ ಹೋಗಬಹುದು– ಎಂತ

**ಆರ್ಯಕ** (ಕಿವಿಗೊಟ್ಟು) ಇದು ವೇಶ್ಯೆಯ ಗಾಡಿ ಊರ ಹೊರಗೆ ಹೊರಟದ್ದೂ ಹೌದು ಇರಲಿ ಹತ್ತಿಬಿಡ್ತೇನೆ (ಎಂದು ಮೆಲ್ಲನೆ ಬಳಿಸಾರುತ್ತಾನೆ )

**ಚೇಟ** (ಕಿವಿಗೊಟ್ಟು) ಏನು ಕಾಲ್ಗೆಜ್ಜೆಯ ಸದ್ದು ಹಾಗಾದರೆ ಆಕೆ ಬಂದಿದ್ದಾಳೆ ಆರ್ಯೆ, ಮೂಗುದಾರ ಹಾಕಿದ್ರೂ ಈ ಎತ್ತುಗಳು ಬಲು ಘಾಟಿ ನೀನು ಹಿಂಬದಿಯಲ್ಲೆ ಹತ್ತವ್ವ (ಆರ್ಯಕ ಹಾಗೆಯೆ ಮಾಡುತ್ತಾನೆ)

**ಚೇಟ** ದಾಪುಗಾಲಿನ ಹೆಜ್ಜೆಗೆ ದನಿಗೊಡುವ ಗೆಜ್ಜೆಯ ಸಪ್ಪಳ ನಿಂತಿದೆ ಗಾಡಿಯೂ ಒಜ್ಜೆಯಾಗಿದೆ ಅಂದರೆ ಆರ್ಯೆ ಗಾಡಿ ಹತ್ತಿದ್ದಾಯಿತು, ಎಂದರ್ಥ ಇನ್ನು ಹೋಗ್ತೇನೆ ಹೊರಡಿ ಎತ್ತುಗಳೇ, ಹೊರಡಿ ಹೈಯ್ಯಾ ಹೈಽಽ (ಎಂದು ಮುಂದುವರಿಯುತ್ತಾನೆ)

**ವೀರಕ** (ಪ್ರವೇಶಿಸಿ) ಓವ್ರೋ ಜಯ, ಜಯಮಾನ, ಚಂದನಕ, ಮಂಗಲ, ಪುಷ್ಪಭದ್ರ ಮುಂತಾದ ಕಾವಲುಭಟರೆ,

ನೀವೇನು ಹಾಯಾಗಿ ನಿಂತಿರುವಿರಿಲ್ಲಿ?
ಸೆರೆಯಲಿದ್ದ ಆ ಗೊಲ್ಲರ ಹುಡುಗ
ಸೆರೆಯನ್ನೂ ಅರಸನ ಬಗೆಯನ್ನೂ
ಜತೆಯಲ್ಲೆ ತುಂಡರಿಸಿ ಹೊರಟು ಹೋಗಿದ್ದಾನೆ ॥ ೫ ॥

ಅರೆ, ನೀನು ಎದುರಿನ ಹೆದ್ದಾರಿಯ ಬಾಗಿಲ ಬಳಿ ನಿಲ್ಲು, ನೀನು ಪಡುಬದಿಯಲ್ಲಿ ನೀನು ತೆಂಕು ಬದಿಯಲ್ಲಿ ನಿಲ್ಲು ನಾನೂ ಚಂದನಕನ ಜತೆಗೆ ಈ ತುಂಡು ಪಾಗಾರ ಹತ್ತಿ ಸುತ್ತ ಕಣ್ಣು ಹಾಯಿಸುತ್ತೇನೆ ಬಾ ಚಂದನಕ ಬಾ ಇತ್ತಲಾಗಿ ಬಾ

**ಚಂದನಕ** (ಗಾಬರಿಗೊಂಡು ಪ್ರವೇಶಿಸಿ) ಏ ವೀರಕ, ಏ ವಿಶಲ್ಯ, ಏ ಭೀಮಾಂಗದ, ಏ ದಂಡಕಾಲ, ಏ ದಂಡಶೂರ ಮತ್ತು ಉಳಿದವರೆ,

ಎದೆಗೆಡದೆ ಮುಂದೆ ಬನ್ನಿ
ಒಡನೆ ಯತ್ನಿಸಿರೆಲ್ಲ
ನಮ್ಮರಸನ ಸಂಪತ್ತು
ಬೇರೊಬ್ಬನ ಕೈಸೇರದ ಹಾಗೆ
ಬೇಗನೆ ನಡೆಯಲಿ ಕೆಲಸ ॥ ೬ ॥

ಅಲ್ಲದೆ–

ಹೂದೋಟಗಳಲ್ಲಿ,
ಸಭೆಯ ಕೂಟಗಳಲ್ಲಿ,
ದಾರಿಗಳಲ್ಲಿ,
ಗೊಲ್ಲರ ಕೇರಿಗಳಲ್ಲಿ,
ಪಟ್ಟಣದ ನಡೆಯಲ್ಲಿ,
ಅಂಗಡಿಗಳೆಡೆಯಲ್ಲಿ,
ಎಲ್ಲಿ ಇರಬಹುದೆಂದು

ನಿಮಗೆ ಸಂಶಯವುಂಟು
ಅಲ್ಲೆಲ್ಲ ತಕ್ಷಣವೆ ಹೋಗಿ ಹುಡುಕಿ ॥ ೭ ॥

ಎಲವೊ ಓ ವೀರಕಾ
ಏನು ಕಾಣುತ್ತಿರುವೆ
ಹೇಳು ನಿರ್ಭಯವಾಗಿ
ಸೆರೆಯಿಂದ ಬಿಡುಗಡೆಗೊಳಿಸಿ
ಆ ಗೊಲ್ಲರ ಹುಡುಗನನ್ನು
ಯಾರು ಕದ್ದೊಯ್ದವನು? ॥ ೮ ॥

ಯಾರ ಜಾತಕದಲ್ಲಿ
ಸೂರ್ಯ ಅಷ್ಟಮದಲ್ಲಿ
ಹೇಳು ಕೂತಿದ್ದಾನೆ?
ಅಥವಾ ಚತುರ್ಥದಲಿ
ಚಂದ್ರ ಕೂತಿದ್ದಾನೆ?
ಯಾರ ಷಷ್ಠದಲಿ ಶುಕ್ರ?
ಮತ್ತು ಪಂಚಮದಲ್ಲಿ ಅಂಗಾರಕ? ॥ ೯ ॥

ಹೇಳು ಯಾರವನ ಜನ್ಮದಿಂದ ಷಷ್ಠದಲ್ಲಿ
ಗುರು ಮತ್ತು ನವಮದಲಿ ಶನಿಯು ಸೇರಿದ್ದಾನೆ?
ಚಂದನಕನಿನ್ನೂ ಬದುಕಿರುವ ಹಾಗೆಯೆ
ಯಾರು ಆ ಗೊಲ್ಲರವನನ್ನು ಕದ್ದವನು? ॥ ೧೦ ॥

**ವೀರಕ** . ಭಟ ಚಂದನಕ,
ಯಾರೊ ಲಗುಬಗೆಯಿಂದ
ಅವನ ಕದ್ದೊಯ್ದಿಹರು
ಚಂದನಕ, ಹೇಳುವೆನು
ನಿನ್ನೆದೆಯ ಆಣೆಯಿಟ್ಟು
ಇನ್ನೂ ಮೂಡಂಚಿನಲಿ
ಬಾನು ಮೂಡುವ ಮುನ್ನ
ಆ ಗೊಲ್ಲರ ತುಡುಗ ಕಳ್ಳ
ತಪ್ಪಿಸಿಕೊಂಡನಲ್ಲ! ॥ ೧೧ ॥

**ಚೇಟ** ಹೋಗ್ರೋ ಎತ್ತುಗಳು, ಹೋಗ್ರೋ ಹೈಯ್ಯಾ ಹೈऽऽ

**ಚಂದನಕ** · (ನೋಡಿ) ಅರೆ ಅರೆ, ನೋಡು ನೋಡು
ಮರೆ ಮಾಡಿದ ಗಾಡಿಯೊಂದು
ಸಾಗುತ್ತಿದೆ ಹೆದ್ದಾರಿಯ ನಡುವೆ

ಅದನಷ್ಟು ವಿಚಾರಿಸಿ ನೋಡು
ಯಾರ ಗಾಡಿಯಿದು, ಎತ್ತ ಹೋಗುತಿದೆಯೆಂದು? ॥ ೧೨ ॥

**ವೀರಕ** (ನೋಡಿ) ಏ ಗಾಡಿಯವನ್ನೆ, ನಿಲ್ಲು ಗಾಡಿ ಮುಂದಕ್ಕೆ ಹೊಡೀಬೇಡ ಯಾರ ಗಾಡಿ ಇದು? ಒಳಗೆ ಯಾರಿದ್ದಾರೆ? ಎಲ್ಲಿಗೆ ಹೊರಟದ್ದು?

**ಚೇಟ** ಇದು ಆರ್ಯಚಾರುದತ್ತನ ಗಾಡಿ ಒಳಗೆ ಆರ್ಯವಸಂತಸೇನೆಯಿದ್ದಾಳೆ ಹೊರಟದ್ದು ಹಳೆಯ ಹೂದೋಟ ಪುಷ್ಪಕರಂಡಕದತ್ತ – ಚಾರುದತ್ತನ ವಿಹಾರಕ್ಕಾಗಿ

**ವೀರಕ** (ಚಂದನಕನ ಬಳಿ ಬಂದು) ಈ ಗಾಡಿಯವ ಹೇಳ್ತಾನೆ: ಇದು ಆರ್ಯಚಾರುದತ್ತನ ಗಾಡಿಯಂತೆ ಒಳಗೆ ವಸಂತಸೇನೆಯಿದ್ದಾಳಂತೆ ಹಳೆಯ ಹೂದೋಟ ಪುಷ್ಪಕರಂಡಕಕ್ಕೆ ಹೋಗೋದಂತೆ

**ಚಂದನಕ** ಹಾಗಾದರೆ ಹೋಗಲಿ

**ವೀರಕ** ನೋಡದೆಯೆ?

**ಚಂದನಕ** ಹೌದು

**ವೀರಕ** ಯಾವ ಭರವಸೆಯಿಂದ ಬಿಡೋದು?

**ಚಂದನಕ** ಆರ್ಯಚಾರುದತ್ತನ ಮೇಲಣ ಭರವಸೆಯಿಂದ

**ವೀರಕ** ಯಾರವನು ಆರ್ಯಚಾರುದತ್ತ? ಯಾರವಳು ವಸಂತಸೇನೆ? ನೋಡದ ಬಿಡುವುದೆಂದರೇನು?

**ಚಂದನಕ** ಅರೆ, ಆರ್ಯಚಾರುದತ್ತ ಗೊತ್ತಿಲ್ಲವಾ? ವಸಂತಸೇನೆಯೂ ಗೊತ್ತಿಲ್ಲವಾ? ಆರ್ಯಚಾರುದತ್ತ ಮತ್ತು ವಸಂತಸೇನೆಯರು ನಿನಗ ಗೊತ್ತಿಲ್ಲಾಂದರೆ ಆಕಾಶದಲ್ಲಿ ಬೆಳದಿಂಗಳಿಂದ ಕೂಡಿದ ಚಂದ್ರನೂ ನಿನಗ ಗೊತ್ತಿರಲಿಕ್ಕಿಲ್ಲ

ತಾವರೆಯಂಥ ಚೆಲುಗುಣದವನು
ಚಂದ್ರನಂಥ ಚೆಲುನಡೆಯವನು
ಆತನ ಗುರುತೂ ಇರದವರುಂಟೆ
ಕಷ್ಟಕೀಡಾದವರ ದುಃಖ ಕಳೆವವನು
ನಾಲ್ಕು ಕಡಲುಗಳಲ್ಲು ಸಾಟಿಯಿರದಂಥ
ಬೆಲೆ ಬಾಳುವ ರತ್ನ ಅವನು ॥ ೧೩ ॥

ಊರಿಗೇ ಸಿಂಗಾರವಾದವರು
ಎಲ್ಲರ ಗೌರವಕು ಪಾತ್ರರಾದವರು
ಎಂದರೆ ಈ ಇಬ್ಬರೆ ಸರಿ :
ಆರ್ಯೆಯಾದೀ ವಸಂತಸೇನೆ
ಮತ್ತು ಗರ್ಮನಿಧಿ ಚಾರುದತ್ತ ॥ ೧೪ ॥

**ವೀರಕ** ಅರೆ ಚಂದನಕ,
ಚಾರುದತ್ತನೂ ಗೊತ್ತು ನನಗೆ
ವಸಂತಸೇನೆಯೂ ಚೆನ್ನಾಗಿ ಗೊತ್ತು
ರಾಜಕಾರ್ಯ ಬಂದೊದಗಿದರೆ ಮಾತ್ರ
ನನ್ನ ತಂದೆಯ ಗುರುತು ಕೂಡ ನನಗಿಲ್ಲ ‖ ೧೫ ‖

**ಆರ್ಯಕ** · (ಸ್ವಗತ) ಇವನು ನನ್ನ ಪೂರ್ವಜನ್ಮದ ವೈರಿ ಓ ಇವನೊ ಪೂರ್ವಜನ್ಮದ ಬಂಧು ಏಕೆಂದರೆ–
ಒಂದೆ ಕಾರ್ಯಕ್ಕಾಗಿ ಇಬ್ಬರೂ ಹೊರಟವರು
ಮರ್ಜಿಯೋ ಇಬ್ಬರದು ಎರಡು ತೆರ
ಒಂದು ಮದುವೆಯ ಮನೆಯ ಹೋಮಶಾಲೆಯ ಬೆಂಕಿ
ಇನ್ನೊಂದು ಹೆಣಸುಡುವ ಚಿತೆಯ ಬೆಂಕಿ ‖ ೧೬ ‖

**ಚಂದನಕ** ನೀನು ರಾಜಕಾರಣದಲ್ಲಿ ಮುಖ್ಯಸ್ಥ ಸೇನಾಪತಿ ಮಹಾರಾಜನಿಗೆ ಬೇಕಾದವ ಎತ್ತುಗಳನ್ನು ನಾನು ಹಿಡಿದು ನಿಲ್ಲಿಸ್ತೇನೆ ಹೋಗಿ ನೋಡು

**ವೀರಕ** ನೀನೂ ಕಾವಲುಪಡೆಯ ಮುಖಂಡ ಮಹಾರಾಜನಿಗೆ ಬೇಕಾದವನೆ ಆದ್ದರಿಂದ ನೀನೆ ನೋಡು

**ಚಂದನಕ** ನಾನು ನೋಡಿದರೆ ನೀನು ನೋಡಿದ ಹಾಗಾಯಿತಾ?

**ವೀರಕ** ನೀನು ನೋಡಿಬಿಟ್ಟರೆ ಮಹಾರಾಜಪಾಲಕನೆ ಖುದ್ದಾಗಿ ನೋಡಿದ ಹಾಗೆ

**ಚಂದನಕ** ಏಯ್, ನೊಗವನ್ನು ಮೇಲಕ್ಕೆತ್ತು (ಚೇಟ ಹಾಗೆಯೆ ಮಾಡುತ್ತಾನೆ)

**ಆರ್ಯಕ** (ಸ್ವಗತ) ಕಾವಲುಭಟರು ನನ್ನನ್ನು ನೋಡಿಬಿಟ್ಟರೆ ಏನು ಮಾಡೋಣ? ದುರ್ದೈವಕ್ಕೆ ಕೈಯಲ್ಲಿ ಆಯುಧ ಕೂಡ ಇಲ್ಲ ಅಥವಾ–
ಭೀಮಸೇನನ ಹಾಗೆ ಬೀರ ತೋರುತ್ತೇನೆ
ನನ್ನ ತೋಳೇ ನನಗೆ ಹಿರಿಯಾಯುಧ
ಸೆರೆಯಲ್ಲಿ ಕೊಳೆಬಿದ್ದು ಸಾಯುವುದಕಿಂತಲೂ
ಹೋರಾಟದಲಿ ಪಡೆದ ಸಾವೆ ಮೇಲು ‖ ೧೭ ‖

ಅಥವಾ ಸಾಹಸಕ್ಕೆ ಇದು ತಕ್ಕ ಕಾಲವಲ್ಲ

(ಚಂದನಕನು ನಾಟ್ಯದಿಂದ ಗಾಡಿಯನ್ನೇರಿ ಪರೀಕ್ಷಿಸುತ್ತಾನೆ)

**ಆರ್ಯಕ** ಶರಣಾಗತನಾಗಿದ್ದೇನೆ

**ಚಂದನಕ** ಶರಣು ಬಂದವನಿಗೆ ಅಭಯವಿರಲಿ

**ಆರ್ಯಕ** ತೊರೆಯುವಳು ಜಯಶ್ರೀ
ನೇಹಿಗರು ಬಂಧುಗಳು ದೂರ ಸರಿಯುವರು

ಅಪಹಾಸ ಮಾಡುವರು ಲೋಕದ ಜನ
ಶರಣು ಬಂದವರನ್ನು ಕೈಬಿಟ್ಟರೆ ॥ ೧೮ ॥

**ಚಂದನಕ** ಏನು, ಗೊಲ್ಲರ ಹುಡುಗ ಆರ್ಯಕ! ಗಿಡುಗಕ್ಕೆ ಹೆದರಿದ ಹಕ್ಕಿಮರಿ ಹಕ್ಕಿಹಿಡಿಯೋ ಬೇಡನ ಕೈಗೇ ಬಂದು ಬಿದ್ದಹಾಗಾಯಿತು (ಆಲೋಚಿಸಿ) ಇವನು ನಿರಪರಾಧಿ ಶರಣು ಬೇರೆ ಬಂದಿದ್ದಾನೆ ಆರ್ಯ ಚಾರುದತ್ತನ ಗಾಡಿಯಲ್ಲಿದ್ದಾನೆ ಮಾತ್ರವಲ್ಲ ನನಗೆ ಜೀವದಾನ ಮಾಡಿದ ಆರ್ಯಶರ್ವಿಲಕನ ಗೆಳೆಯ ಕೂಡ ಹೌದು ಆದರೆ ರಾಜಾಜ್ಞೆ ಒಂದೆಡೆ ಈಗ ಏನು ಮಾಡಿದರೆ ಸರಿ? ಅಥವಾ, ಆದದ್ದಾಗಲಿ ನಾನು ಮೊದಲೇ ಅಭಯ ಕೊಟ್ಟಾಗಿದೆ

ಹೆದರಿ ಶರಣಾದವಗೆ
ಅಭಯವನು ನೀಡಿ
ಮಾಡಿದುಪಕಾರಕ್ಕೆ
ಪ್ರತಿಯಾಗಿ ಒಂದೊಮ್ಮೆ
ಸಾವು ಬಂದರು ಸರಿಯೆ
ಅಂಥ ಸಾವೂ ಕೂಡ
ಲೋಕ ಮೆಚ್ಚುವ ಕೆಲಸ ॥ ೧೯ ॥

(ಹೆದರುತ್ತ ಕೆಳಗಿಳಿದು) ಕಂಡೆ ಆರ್ಯ (ಅರ್ಧದಲ್ಲೆ ತಡೆದು) ಅಲ್ಲ, ಆರ್ಯೆ ವಸಂತಸೇನೆಯನ್ನು, ಆಕೆ ಹೇಳುತ್ತಾಳೆ: ನಾನು ಆರ್ಯಚಾರುದತ್ತನ ಜತೆ ವಿಹರಿಸಲು ಹೋಗುತಿದ್ದಾಗ ಹೆದ್ದಾರಿಯಲ್ಲಿ ತಡೆದು ಹೀಗೆ ಅವಮಾನ ಮಾಡೋದು ನ್ಯಾಯವಲ್ಲ, ಸರಿಯಲ್ಲ – ಎಂದು

**ವೀರಕ** : ಚಂದನಕ, ನನಗೆ ಈ ವಿಷಯದಲ್ಲಿ ಸಂಶಯ ಬಂದಿದೆ

**ಚಂದನಕ** . ಏನು ನಿನಗೆ ಸಂಶಯ!

**ವೀರಕ** · ನೀನು ನನ್ನ ಬಳಿ ಮಾತನಾಡುವಾಗ
ನಿನ್ನ ಕೊರಳ ದನಿ ನೋಡುವಾಗ
ಅಳುಕಿನಿಂದ ತಡವರಿಸುತಿತ್ತು
ಮೊದಲು 'ಕಂಡೆ ಆರ್ಯನನು' ಎಂದೆ
ಮತ್ತೆ 'ಆರ್ಯೆವಸಂತಸೇನೆ'ಯನ್ನೆಂದೆ ॥ ೨೦ ॥

ಇಲ್ಲೇ ನನಗೆ ಅವಿಶ್ವಾಸ ಬಂದದ್ದು

**ಚಂದನಕ** · ಅರೆ, ನಿನಗೆ ಅಪನಂಬಿಕೆ ಯಾಕೆ? ನಾವು ದಕ್ಷಿಣ ದೇಶದವರು ಅಸ್ಪಷ್ಟವಾಗಿಯೆ ಮಾತಾಡೋದು ಖಷ, ಖತ್ತಿ, ಕಡ, ಕಡಟ್ಠೋಬಿಲ, ಕರ್ಣಾಟಕ, ಕರ್ಣ, ಪ್ರಾವರಣ, ದ್ರಾವಿಡ, ಚೋಳ, ಚೀನ, ಬರ್ಬರ, ಖೇರ, ಖಾನ, ಮುಖ, ಮಧುಘಾತ ಮುಂತಾದ ಮ್ಲೇಚ್ಛಜಾತಿಯವರ

ಅನೇಕ ದೇಶಭಾಷೆಗಳನ್ನು ಬಲ್ಲ ನಾವು ಬೇಕಾದ ಹಾಗೆ ಮಾತನಾಡಬಲ್ಲೆವು : ಆರ್ಯ ಆದರೆ ಆರ್ಯ ಆರ್ಯೆ ಆದರೆ ಆರ್ಯೆ

**ವೀರಕ** ನಾನೂ ನೋಡಿಬಿಡ್ತೇನೆ ಇದು ರಾಜಾಜ್ಞೆ ನಾನು ರಾಜನಿಗೆ ಬೇಕಾದವ ತಾನೆ

**ಚಂದನಕ** . ಹಾಗಾದರೆ ನಾನು ಬೇಡಾದವ ಎಂದರ್ಥವಾ?

**ವೀರಕ** ಆ ಪ್ರಶ್ನೆಯಲ್ಲ ಇದು ಅರಸನ ಅಪ್ಪಣೆ

**ಚಂದನಕ** (ಸ್ವಗತ) ಗೊಲ್ಲರ ಹುಡುಗ ಆರ್ಯಕ ಆರ್ಯಚಾರುದತ್ತನ ಗಾಡಿಯನ್ನೇರಿ ಹೋಗ್ತಾ ಇದಾನೆ ಎಂದು ಬಹಿರಂಗ ಪಡಿಸಿದರೆ ಆರ್ಯ ಚಾರುದತ್ತ ರಾಜನ ಶಾಸ್ತಿಗೆ ಗುರಿಯಾಗಬೇಕಾಗುತ್ತದೆ ಈಗೇನು ಮಾಡಲಿ? (ಆಲೋಚಿಸಿ) ಕರ್ಣಾಟಕದ ಜಗಳ ತೆಗೀತೇನೆ (ಪ್ರಕಾಶ) ಏಯ್ ವೀರಕ, ನಾನು ಚಂದನಕ ನೋಡಿಯಾದ ಮೇಲೆ ಮತ್ತೆ ನೀನೂ ನೋಡಲಿಕ್ಕೆ ಯಾರಯ್ಯಾ ನೀನು?

**ವೀರಕ** ಅರೆ, ನೀನು ಯಾರಯ್ಯಾ ಕೇಳೋದಕ್ಕೆ?

**ಚಂದನಕ** ಗೌರವ–ಮನ್ನಣೆ ಸಿಗ್ಲಿಕ್ಕೆ ಹೋಗಿ ನಿನಗೆ ನಿನ್ನ ಜಾತಿಯೂ ಮರೆತು ಹೋಯಿತು

**ವೀರಕ** (ಕೋಪದಿಂದ) ಅರೆ, ಯಾವುದು ನನ್ನ ಜಾತಿ?

**ಚಂದನಕ** ಯಾರು ಹೇಳಬೇಕು?

**ವೀರಕ** ಹೇಳು

**ಚಂದನಕ** ಅಥವಾ ನಾನು ಹೇಳೋದಿಲ್ಲ
ಗೊತ್ತಿದ್ದರೂ ನನಗೆ ನಿನ್ನ ಜಾತಿ
ನನ್ನ ಘನತೆಗೆ ಕುಂದು ಅದನು ಹೇಳೋದು
ಇರಲಿ ಅದು ನನ್ನ ಮನಸಿನಲ್ಲೆ
ಏಕೆ ಬೇಲದ ಹಣ್ಣು ಒಡೆಯುವ ಹುಚ್ಚುಕೆಲಸ ॥ ೨೦ ॥

**ವೀರಕ** ಆಗಲಿ, ಹೇಳು ಹೇಳು

(ಚಂದನಕ ಸನ್ನೆ ಮಾಡ್ತಾನೆ )

**ವೀರಕ** : ಏಯ್, ಏನದು?

**ಚಂದನಕ** . ಮುರುಕು ಸಾಣೆಯ ಕಲ್ಲು ಕೈಯಲ್ಲಿ ಹಿಡಿದು
ಗಂಡಸರ ಕುಚ್ಚು ದಾಡಿ ಕತ್ತರಿಸುವವನು
ಕತ್ತರಿಯನಾಡಿಸುವ ಕೈಯ ತಳವಾರನೋ
ಈಗ ನಾಪಿತ ಹೋಗಿ ನೀನು ಸೇನಾಪತಿ ॥ ೨೨ ॥

**ವೀರಕ** ಅರೆ ಚಂದನಕ, ನಿನಗೂ ಸಮ್ಮಾನದ ಹಮ್ಮಿನಲ್ಲಿ ನಿನ್ನ ಜಾತಿ ಮರೆತುಹೋಗಿದೆ

**ಚಂದನಕ** ಅರೆ, ಚಂದ್ರನಂತೆ ಪರಿಶುದ್ಧನಾದ ಈ ಚಂದನಕನ ಜಾತಿ ಯಾವುದಯ್ಯಾ?

**ವೀರಕ** ಯಾರು ಹೇಳಬೇಕು?

**ಚಂದನಕ** ಹೇಳು ಹೇಳು

(ವೀರಕ ನಾಟ್ಯದಿಂದ ಸನ್ನೆ ಮಾಡ್ತಾನೆ)

**ಚಂದನಕ** ಏಯ್, ಏನದು?

**ವೀರಕ** ಅರೆ, ಕೇಳಯ್ಯಾ ಕೇಳು–

ಭಾರಿ ಮಡಿವಂತಿಕೆಯದೋ ನಿನ್ನ ಜಾತಿ
ನಿನ್ನ ತಾಯಿಯು ಭೇರಿ, ತಂದೆ ನಗಾರಿ
ದುರ್ಮುಖನೆ, ನಿನ್ನಣ್ಣ ಗೆರಟೆವಾದ್ಯ
ನೀನಾಗಿ ಬಿಟ್ಟೆಯಲ ಸೇನಾಪತಿ ॥ ೨೩ ॥

**ಚಂದನಕ** (ಸಿಟ್ಟಿನಿಂದ) ಹೌದು, ನಾನು ಚಂದನಕ ಸಮಗಾರ ಹೋಗು, ನೀನೇ ನೋಡು ಗಾಡಿಯನ್ನು

**ವೀರಕ** . ಏಯ್ ಗಾಡಿ ಹೊಡೆಯುವವನೆ, ತಿರುಗಿಸು ಗಾಡಿಯನ್ನು ನಾನೊಮ್ಮೆ ನೋಡ್ತೇನೆ (ಚೇಟ ಹಾಗೆಯೇ ಮಾಡ್ತಾನೆ ವೀರಕ ಗಾಡಿಯನ್ನು ಹತ್ತಲು ಹೋಗುತ್ತಾನೆ ಚಂದನಕ ಕೂಡಲೆ ಅವನನ್ನು ಕೂದಲಲ್ಲಿ ಹಿಡಿದೆಳೆದು ಬೀಳಿಸಿ ಕಾಲಿನಿಂದ ತುಳಿಯುತ್ತಾನೆ)

**ವೀರಕ** (ಸಿಟ್ಟಿನಿಂದ ಎದ್ದುನಿಂತು) ಏಯ್, ನಾನು ನಿನಗೆ ನಂಬಿಕೆಯವನಾಗಿದ್ದೂ ರಾಜಾಜ್ಞೆಯನ್ನು ಪಾಲಿಸುತಿದ್ದಾಗ ಒಮ್ಮೆಲೆ ನನ್ನ ಕೂದಲು ಹಿಡಿದು ಬೀಳಿಸಿ ಕಾಲಿನಿಂದ ತುಳಿದೆ ಅದರಿಂದ ಕೇಳಿಕೋ: ನಾಳೆ ನ್ಯಾಯಾಲಯದಲ್ಲಿ ನಿನಗೆ ನೀರು ಕುಡಿಸದೆ ಇದ್ರೆ ನನ್ನ ಹೆಸರು ವೀರಕ ಅಲ್ಲ

**ಚಂದನಕ** · ಹೋಗಯ್ಯ ಅರಮನೆಗೇ ಹೋಗು ನ್ಯಾಯಾಲಯಕ್ಕೆ ಬೇಕಾದರೂ ಹೋಗು ನಿನ್ನಂಥ ನಾಯಿಗಳನ್ನು ಬೇಕಾದಷ್ಟು ನೋಡಿದ್ದೇನೆ

**ವೀರಕ** ಆಗಲಿ, ನೋಡೇ ಬಿಡ್ತೇನೆ (ಎಂದು ಹೋಗುತ್ತಾನೆ)

**ಚಂದನಕ** (ಸುತ್ತ ನೋಡಿ) ಹೋಗು, ಏಯ್ ಗಾಡಿಯವನೆ ಮುಂದೆ ಹೋಗು ಯಾರಾದರೂ ಕೇಳಿದರೆ– ಈ ಗಾಡಿಯನ್ನು ಚಂದನಕ – ವೀರಕ ಇಬ್ರೂ ನೋಡಿ ಬಿಟ್ಟದ್ದೂಂತ ಹೇಳು ಆರ್ಯೆ ವಸಂತಸೇನೆ, ನನ್ನ ಗುರುತಿಗಾಗಿ ಇದೊಂದು ನಿಮ್ಮ ಬಳಿ ಇರಲಿ (ಎಂದು ಖಡ್ಗವನ್ನು ಕೊಡುತ್ತಾನೆ)

**ಆರ್ಯಕ** (ಖಡ್ಗವನ್ನು ತಗೊಂಡು, ಸಂತಸದಿಂದ, ಸ್ವಗತ)–

ಒಂದು ಆಯುಧ ನನಗೆ ದೊರಕಿದಂತಾಯಿತು
ಬಲದ ತೋಳೂ ಕೂಡ ಅದುರುತ್ತಿದೆ
ಎಲ್ಲವೂ ಅನುಕೂಲ ಒದಗಿಬಂತು
ಓಹ್! ಹಂತ! ನಾನಂತು ಬದುಕಿ ಪಾರಾದೆ ॥ ೨೪ ॥

**ಚಂದನಕ** ಆರ್ಯ, ನನ್ನದೊಂದು ವಿಜ್ಞಪ್ತಿಯುಂಟು :
ಈ ವಿಶ್ವಾಸಕೆ ಪ್ರತಿಯಾಗಿ
ಚಂದನಕನದೂ ನೆನಪಿರಲಿ
ಆಸೆಗೆ ಬಲಿಯಾಗಿ ಹೀಗೆ ಹೇಳುತ್ತಿಲ್ಲ
ಸ್ನೇಹದ ರಸವೆ ಮಾತಾಡಿಸಿದೆ ॥ ೨೫ ॥

**ಆರ್ಯಕ** ಚಂದ್ರನಂಥ ಚೆಲುನಡೆಯ
ಚಂದನಕ ನೀನಲ
ದೈವಯೋಗದಿಂದಲೇನೆ
ನಾವು ಗೆಳೆಯರಾದೆವು
ಸಿದ್ಧ ಹೇಳಿದ ಕಣಿ ನಿಜವಾಯಿತಾದರೆ
ಚಂದನಕನನ್ನಾಗ ನೆನಪಿನಲ್ಲಿಡುವೆ ॥ ೨೬ ॥

**ಚಂದನಕ** · ಶುಂಭ–ನಿಶುಂಭರನು ಕೊಂದ ದುರ್ಗೆಯ ಹಾಗೆ
ಬ್ರಹ್ಮ–ಶಂಕರ–ವಿಷ್ಣು, ಸೂರ್ಯ ಚಂದ್ರರು ಕೂಡ
ನಿನ್ನ ಹಗೆಗಳ ಕೊಂದು ನಿನಗಭಯ ನೀಡಲಿ ॥ ೨೭ ॥

(ಚೇಟ ಗಾಡಿಯೊಡನೆ ಹೋಗುತ್ತಾನೆ )

**ಚಂದನಕ** (ತೆರೆಯತ್ತ ನೋಡಿ) ನಾನು ಇತ್ತ ಬರುತ್ತಿದ್ದ ಹಾಗೆಯೆ, ನನ್ನ ಬೆಂಗಡೆಯೆ ಬರುತ್ತಿದ್ದ ಪ್ರಿಯಮಿತ್ರ ಶರ್ವಿಲಕ ಎಲ್ಲೋ ತಪ್ಪಿಹೋದ ಇರಲಿ ರಾಜನ ವಿಶ್ವಾಸಕ್ಕೆ ಪಾತ್ರನಾದ ಪ್ರಧಾನ ಸೇನಾಪತಿ ವೀರಕನ ಜತೆ ವಿರೋಧ ಬೇರೆ ಕಟ್ಟಿಕೊಂಡಿದ್ದೇನೆ ಅದರಿಂದ ನಾನೂ ಮಕ್ಕಳು – ಸೋದರರೊಂದಿಗೆ ಶರ್ವಿಲಕನನ್ನೆ ಅನುಸರಿಸುತ್ತೇನೆ (ಎಂದು ಹೋಗುತ್ತಾನೆ )

**"ಗಾಡಿ ಅದಲು–ಬದಲು" ಎಂಬ**

**ಆರನೆಯ ಅಂಕ**

**ಮುಗಿಯಿತು**

## ಅಂಕ ಏಳು

# ಆರ್ಯಕನ ಅಪಹಾರ

(ಪ್ರವೇಶ: ಚಾರುದತ್ತ ಮತ್ತು ವಿದೂಷಕ)

**ವಿದೂಷಕ** . ಓಹೋಯ್, ನೋಡು ನೋಡು, ಈ ಹಳೆಯ ಹೂದೋಟ ಪುಷ್ಪಕರಂಡಕದ ಚೆಲುವನ್ನು

**ಚಾರುದತ್ತ** · ಗೆಳೆಯ, ಹೌದು–

ಹೂವುಗಳೆಂಬ ಸರಕನ್ನು ಮಾರಲಿಟ್ಟ
ವ್ಯಾಪಾರಿಗಳಂತೆ ಕಂಗೊಳಿಸುತ್ತಿವೆ ಮರಗಳು
ಸುಂಕ ಕೇಳಲು ಬಂದ ಅಧಿಕಾರಿಗಳಂತೆ
ಜೇನುದುಂಬಿಗಳು ಸುತ್ತುತ್ತಿವೆ ॥ ೧ ॥

**ವಿದೂಷಕ** ಓಹೋಯ್, ಕೆತ್ತಿಲ್ಲ ಕಡೆದಿಲ್ಲ ಆದರೂ ಸಹಜವಾಗಿಯೆ ಎಷ್ಟು ಚೆಲುವಾಗಿದೆ ಈ ಹಾಸುಗಲ್ಲು ಇದರ ಮೇಲೆ ಕೂಡೋಣಾಗಲಿ

**ಚಾರುದತ್ತ** (ಕುಳಿತುಕೊಂಡು) ಗೆಳೆಯ, ವರ್ಧಮಾನಕ ತುಂಬ ತಡಮಾಡುತಿದ್ದಾನೆ

**ವಿದೂಷಕ** ನಾನು ಇಷ್ಟಾಗಿ ವರ್ಧಮಾನಕನಿಗೆ ಹೇಳಿದ್ದು– ವಸಂತಸೇನೆಯನ್ನು ಕರಕೊಂಡು ತಕ್ಷಣ ಬಾ೦ಂತ

**ಚಾರುದತ್ತ** · ಮತ್ತೇಕೆ ತಡಮಾಡುತಿದ್ದಾನೆ?

ಮುಂದುಗಡೆ ಮೆಲ್ಲನೇ ಬರುತಿರುವ
ಯಾವುದಾದರು ಗಾಡಿ ದಾರಿಗಡ್ಡಾಯಿತೆ
ದಾಟಿ ಬರಲೆಂದದನು
ಸಮಯ ಕಾಯುತ್ತಿಹನ?
ಅಥವ ಗಾಲಿಯ ಕೀಲು ಮುರಿಯಿತೇ ಕಡೆಗೆ?
ಅದಕೆಂದು ಬದಲೊಂದು ಜೋಡಿಸುತ್ತಿರುವನೆ?
ಅಥವ ಕಡಿವಾಣವೇ ತುಂಡುಗಿಂಡಾಯಿತೆ?
ಮನೆಗೆಲಸ ಮುಗಿದಾಗ
ದಾರಿಗೆಸೆದಿಹ ಮರದ ತುಂಡು ಅಡ್ಡಾಗಿರಲು
ಬೇರೊಂದು ದಾರಿಯನು ಹಿಡಿದು ಹೊರಟಿರುವನೆ?
ಅಥವ, ಎತ್ತುಗಳನ್ನು ಹಾಯಾಗಿ ನಡೆಸುತ್ತ
ತನ್ನಷ್ಟಕೇ ತಾನು ಮೆಲನೆ ಬರುತಿಹನೆ? ॥ ೨ ॥

**ಚೇಟ** . (ಆರ್ಯಕ ಅಡಗಿ ಕುಳಿತ ಗಾಡಿಯಲ್ಲಿ ಪ್ರವೇಶಿಸಿ) ನಡೀರಿ ಎತ್ತುಗಳೇ ನಡೀರಿ ಹೈ ಹೈऽऽ

**ಆರ್ಯಕ** (ಸ್ವಗತ)

ಅರಸನಧಿಕಾರಿಗಳು ಎಲ್ಲಿ ಕಂಡಾರೆಂದು
ಹೆಜ್ಜೆಹೆಜ್ಜೆಗೆ ಹೆದರಿಕೊಂಡು
ಕಾಲಲ್ಲಿ ಸಂಕಲೆಯ ತುಂಡು ಸಿಕ್ಕಿಸಿಕೊಂಡು
ಕಾಗೆಗಳು ಗೂಡಲ್ಲಿ ಸಾಕಿ ಬೆಳಸಿದ
ಕೋಗಿಲೆಯ ಮರಿಯಂತೆ ಸಾಗುತಿದ್ದೇನೆ
ಬಲುದೂರ ಸಾಗಲೂ ಆರದವನಾಗಿ
ಕಾಣದೊಲು ಈ ಸಜ್ಜನನ ಗಾಡಿಯನ್ನೇರಿ || ೩ ||

ಓಹ್, ಪೇಟೆಯಿಂದ ಬಲುದೂರ ಬಂದದ್ದಾಯಿತು ಹಾಗಾದರೆ, ಈ ಗಾಡಿಯಿಂದಿಳಿದು ಮರಗಳ ತೋಪಿನ ಮರೆಯಲ್ಲಿ ಅಡಗಿಕೊಳ್ಳಲೇನು? ಇಲ್ಲ, ಗಾಡಿಯ ಯಜಮಾನನನ್ನು ಕಾಣಲೆ? ಅಥವಾ ತೋಪಿನ ಮರೆಯಲ್ಲಿ ಅಡಗಿಕೊಳ್ಳೋ ವಿಚಾರ ಬೇಡ ಪೂಜ್ಯನಾದ ಆರ್ಯಚಾರುದತ್ತ ಶರಣು ಬಂದವರಿಗೆ ನೆರಳು ನೀಡುವ ಕರುಣಾಳು ಎಂದು ಕೇಳಿದ್ದೇನೆ ಅದರಿಂದ ಅವನನ್ನು ಕಣ್ಣಲ್ಲಿ ಕಂಡೇ ಹೋಗುತ್ತೇನೆ

ಈ ಬಿಕ್ಕಟ್ಟಿನ ಕಡಲನ್ನು
ದಾಟಿ ಬಂದವನನ್ನು
ಕಂಡು ಆ ಪುಣ್ಯಾತ್ಮ
ಸಂತೋಷಪಟ್ಟಾನು
ಇಂಥ ಪಾಡನು ಪಟ್ಟ
ಈ ಶರೀರವು ಕೂಡ
ಹಿರಿಯ ಚೇತನನಾದ
ಅವನ ಗುಣದಿಂದಲೇ
ಇನ್ನು ಬದುಕುಳಿದಿದೆ || ೪ ||

**ಚೇಟ** ಇದೇ ಆ ಉದ್ಯಾನ ಯಾವುದಕ್ಕೂ ಸಮೀಪಕ್ಕೆ ಹೋಗ್ತೇನೆ (ಸಮೀಪಕ್ಕೆ ಹೋಗಿ) ಆರ್ಯಮೈತ್ರೇಯ–

**ವಿದೂಷಕ** . ಓಹೋಯ್, ನಿನಗೊಂದು ಸಂತಸದ ಸುದ್ದಿ ಹೇಳ್ತೇನೆ ವರ್ಧಮಾನಕನ ದನಿ ಕೇಳಿಸ್ತಾ ಇದೆ ವಸಂತಸೇನೆ ಬಂದಿರಬೇಕು

**ಚಾರುದತ್ತ** ತುಂಬ ಸಂತೋಷ

**ವಿದೂಷಕ** ಸೂಳೆಮಗನೆ, ಯಾಕೆ ತಡಮಾಡಿದೆ?

**ಚೇಟ** ಆರ್ಯಮೈತ್ರೇಯ ಸಿಟ್ಟಾಗಬೇಡ ಹಾಸುಗಂಬಳಿ ಮರೆತು ಹೋಯ್ತೂಂತ ತರೋದಕ್ಕೆ ಹೋಗಿ ಬರುವಾಗ ತಡ ಆಯ್ತು

**ಚಾರುದತ್ತ** ವರ್ಧಮಾನಕ, ಗಾಡಿಯನ್ನು ತಿರುಗಿಸು ಮಿತ್ರ ಮೈತ್ರೇಯ, ವಸಂತಸೇನೆಯನ್ನು ಕೆಳಗಿಳಿಸು

**ವಿದೂಷಕ** ಏನು ಅವಳ ಕಾಲಿಗೆ ಸಂಕಲೆ ಬಿಗಿದಿದ್ದಾರೇನು? ತಾನೇ ಇಳಿದು ಬರೋದಕ್ಕೆ ಆಗೋದಿಲ್ಲವಾ? (ಎದ್ದು ಗಾಡಿಯ ತೆರೆ ಸರಿಸಿ) ಓಹೋಯ್, ವಸಂತಸೇನೆ ಅಲ್ಲ; ಇದು ವಸಂತಸೇನ

**ಚಾರುದತ್ತ** ಗೆಳೆಯ, ಪರಿಹಾಸ ಸಾಕು ಸ್ನೇಹ ವಿಲಂಬವನ್ನು ಬಯಸೋದಿಲ್ಲ ಅಥವಾ ನಾನೇ ಹೋಗಿ ಇಳಿಸ್ತೇನೆ (ಎಂದು ಏಳುತ್ತಾನೆ)

**ಆರ್ಯಕ** (ನೋಡಿ) ಓಹ್, ಇವನೆ ಗಾಡಿಯ ಒಡೆಯ ಮಾತಷ್ಟೇ ಇಂಪಲ್ಲ; ಕಾಣುವುದಕ್ಕೂ ಚೆಲುವ ಅಂತು ಪಾರಾದೆ

**ಚಾರುದತ್ತ** (ಗಾಡಿಯ ಮೇಲೇರಿ, ಕಂಡು) ಅರೆ! ಯಾರೀತ?

ಆನೆಯ ಸೊಂಡಿಲಿನಂತೆ ನೀಳಾದ ತೋಳು
ಸಿಂಹದೊಲು ಎತ್ತರದ ತುಂಬು ಹೆಗಲು
ಹರವಾದ ಎದೆ,
ನಸೆಗೆಂಪಾದ ಚುರುಕು ಅರಳುಗಣ್ಣು!
ಇಂಥವನಿಗೇಕೆ ಬಂತು
ಬರಬಾರದ ಈ ಪಾಡು?
ಈ ಮಹಾತ್ಮನ ಕಾಲಿನಲಿ ಮತ್ತೆ
ಸಂಕಲೆಯ ತುಂಡೊಂದು ಸಿಲುಕಿರುವುದೇಕೆ? ॥ ೫ ॥

ಹಾಗಾದರೆ, ಯಾರಪ್ಪ ನೀನು?

**ಆರ್ಯಕ** ಶರಣು ಬಂದಿದ್ದೇನೆ ನಾನು ಗೊಲ್ಲರವ ಆರ್ಯಕ ಎಂದು ನನ್ನ ಹೆಸರು

**ಚಾರುದತ್ತ** ಮಹಾರಾಜ ಪಾಲಕ ಗೊಲ್ಲರ ಕೇರಿಯಿಂದ ಕರೆತಂದು ಸೆರೆಯಲ್ಲಿಟ್ಟವನೇನು?

**ಆರ್ಯಕ** ಹೌದು

**ಚಾರುದತ್ತ** ದೈವವೇ ನಿನ್ನನ್ನು ಇತ್ತ ಕರೆತಂದಿತು

ನಿನ್ನನ್ನು ಕಂಡದ್ದು ತುಂಬ ಸಂತೋಷ
ಹರಣವನ್ನಾದರೂ ನಾನು ತೊರೆದೇನು
ಶರಣಾದ ನಿನ್ನನ್ನು ನಡುವೆ ಕೈಬಿಡಲಾರೆ ॥ ೬ ॥

(ಆರ್ಯಕ ಸಂತಸವನ್ನು ನಟಿಸುತ್ತಾನೆ)

**ಚಾರುದತ್ತ** ವರ್ಧಮಾನಕ, ಆತನ ಕಾಲಿನಿಂದ ಸಂಕಲೆಯನ್ನು ಬಿಡಿಸಿ ತೆಗೆ

**ಚೇಟ** ಆರ್ಯನ ಅಪ್ಪಣೆ (ಹಾಗೆಯೆ ಮಾಡಿ) ಆರ್ಯ, ಸಂಕಲೆ ಕಳಚಿ ಆಯಿತು

**ಆರ್ಯಕ** ಅದಕ್ಕಿಂತ ಬಿಗಿಯಾದ ಸ್ನೇಹದ ಸಂಕಲೆಯಿಂದ ಮತ್ತೆ ಬಿಗಿದಂತಾಯಿತು

**ವಿದೂಷಕ** . ತಗೋ ಈ ಸಂಕಲೆಯನ್ನು ಈತನನ್ನು ಬಿಡಿಸಿದ್ದಾಯಿತಲ್ಲ ಇನ್ನು ನಾವು ಹೋಗೋಣ

**ಚಾರುದತ್ತ** ಶಾಂತಂ ಪಾಪಂ! ಎಂಥ ಮಾತು!

**ಆರ್ಯಕ** ಗೆಳೆಯ ಚಾರುದತ್ತ, ನಾನೂ ವಿಶ್ವಾಸದಿಂದ ಈ ಗಾಡಿಯನ್ನು ಹತ್ತಿದೆ ನನ್ನ ಈ ತಪ್ಪನ್ನು ಮನ್ನಿಸಬೇಕು

**ಚಾರುದತ್ತ** : ನೀನಾಗಿ ತೋರಿಸಿದ ಈ ವಿಶ್ವಾಸ ನನಗೊಂದು ಭೂಷಣವಲ್ಲವೆ?

**ಆರ್ಯಕ** ಅನುಮತಿ ಕೊಟ್ಟರೆ ನಾನು ಹೊರಡಬಯಸುತ್ತೇನೆ

**ಚಾರುದತ್ತ** ಹೋಗಿ ಬಾ

**ಆರ್ಯಕ** ಆಯಿತು ಇಳಿಯುತ್ತೇನೆ

**ಚಾರುದತ್ತ** ಗೆಳೆಯ, ಇಳಿಯೋದು ಬೇಡ ಈಗ ತಾನೆ ಸಂಕಲೆ ಕಳಚಿದ್ದಷ್ಟೆ ದಾರಿಯಲ್ಲಿ ನಡೆದು ಹೋಗೋದು ತುಂಬ ಅಪಾಯ ಸಾಕಷ್ಟು ಜನ ಓಡಾಡುವ ಈ ಪ್ರದೇಶದಲ್ಲಿ ಗಾಡಿಯಾದರೆ ಭರವಸೆ ಹುಟ್ಟಿಸುತ್ತದೆ ಅದರಿಂದ ಗಾಡಿಯಲ್ಲೆ ಹೋಗೋಣಾಗಲಿ

**ಆರ್ಯಕ** ಹಾಗೆಯೆ ಆಗಲಿ ಹಾಗಾದರೆ

**ಚಾರುದತ್ತ** · ಸುಖವಾಗಿ ಬಾಂಧವರ ಬಳಿ ಹೋಗಿ ಸೇರು

**ಆರ್ಯಕ** ನೀನೆ ದೊರಕಿದೆಯಲ್ಲ ನಿಜವಾದ ಬಂಧು

**ಚಾರುದತ್ತ** ಮಾತುಕತೆಗಳ ನಡುವೆ ನನ್ನದೂ ನೆನಪಿರಲಿ

**ಆರ್ಯಕ** ಏನು ನನ್ನನೆ ನಾನು ಮರೆವುದುಂಟೆ?

**ಚಾರುದತ್ತ** ದಾರಿಯಲಿ ನಡೆವಾಗ ದೇವತೆಗಳೆಲ್ಲರೂ
ಕಾಪಿಡಲಿ ನಿನ್ನನ್ನು

**ಆರ್ಯಕ** ನೀನಲ್ಲವೇ ನನ್ನ
ರಕ್ಷಿಸಿದ ದೇವರು,

**ಚಾರುದತ್ತ** ನಿನ್ನ ಸೌಭಾಗ್ಯವೇ
ನಿನ್ನನ್ನು ರಕ್ಷಿಸಿತು,

**ಚಾರುದತ್ತ** ನೀನಲ್ಲವೇನಯ್ಯ
ನನ್ನ ಸೌಭಾಗ್ಯಕೂ ಪೂರ್ತಿ ಹೊಣೆಗಾರ ॥ ೭ ॥

**ಚಾರುದತ್ತ** . ಮಹಾರಾಜ ಪಾಲಕ ಜಾಗೃತನಾದನೆಂದರೆ ಕಣ್ಣು ತಪ್ಪಿಸಿಕೊಂಡು ಹೋಗೊದು ತುಂಬ ಕಷ್ಟ ಅದರಿಂದ ಆದಷ್ಟು ಬೇಗ ಇಲ್ಲಿಂದ ಹೊರಡೋದು ಕ್ಷೇಮ

**ಆರ್ಯಕ** ಆಗಲಿ, ಇನ್ನೊಮ್ಮೆ ಕಾಣುವುದಕ್ಕಾಗಿ ನಾವು ಬೀಳ್ಕೊಳ್ಳೋಣ (ಎಂದು ಹೋಗುತ್ತಾನೆ )

**ಚಾರುದತ್ತ** . ಅರಸನಿಗೆ ಇಷ್ಟೊಂದು ಅಪಚಾರ ಮಾಡಿ
ಒಂದು ಚಣವೂ ಇಲ್ಲಿ ನಿಲ್ಲುವುದು ತರವಲ್ಲ
ಮೈತ್ರೇಯ, ಸಂಕಲೆಯನೆಸೆ ಹಾಳುಬಾವಿಗೆ
ಅರಸರಿಗೆ ಕಂಡೀತು ಚಾರಕರ ಕಣ್ಣಿಂದ || ೮ ||

(ಎಡಗಣ್ಣು ಅದುರುವುದನ್ನು ಸೂಚಿಸಿ) ಗೆಳೆಯ ಮೈತ್ರೇಯ, ವಸಂತಸೇನೆಯನ್ನು ಕಾಣಲು ಬಗೆ ಕಾತರಿಸುತ್ತಿದೆ ನೋಡು–

ಎಡಗಣ್ಣು ಅದುರುತಿದೆ
ಆಕೆ ಕಾಣಿಸುತಿಲ್ಲ
ಸುಮ್ಮಸುಮ್ಮನೆ ಹೆದರಿ
ಕೊಂಡ ಈ ಬಗೆಯಂತು
ದುಗುಡಕೊಳಗಾಗಿದೆ || ೯ ||

ಅದರಿಂದ ಬಾ, ಹೋಗೋಣ (ನಡೆದಾಡಿ) ಏನಿದು ಅಪಶಕುನ! ಹೊರಡುವಾಗಲೇ ಬುದ್ಧಬೈರಾಗಿ ಎದುರಾದನಲ್ಲ? (ವಿಚಾರ ಮಾಡಿ) ಅವನು ಈ ದಾರಿಯಲ್ಲಿಬಹೋಗಲಿ ನಾವು ಈಚೆಯ ದಾರಿಯಲ್ಲಿ ಹೋಗೋಣ (ಹೋಗುತ್ತಾನೆ )

“ಆರ್ಯಕನ ಅಪಹಾರ” ಎಂಬ

ಏಳನೆಯ ಅಂಕ

ಮುಗಿಯಿತು

## ಅಂಕ · ಎಂಟು

# ದಾಳಿಗೆ ತುತ್ತಾದ ವಸಂತಸೇನೆ

(ಪ್ರವೇಶ: ಒದ್ದೆ ಶಾಟಿಯ ಕಂತೆ ಹಿಡಿದುಕೊಂಡ ಬುದ್ಧಭಿಕ್ಷು)

ಭಿಕ್ಷು . ಅಜ್ಞಜನರೆ, ಧರ್ಮಸಂಗ್ರಹ ಮಾಡಿರಿ–

ಹಿಡಿತ ಚೆನ್ನಾಗಿರಲಿ ನಿಮ್ಮ ಹೊಟ್ಟೆಯ ಮೇಲೆ
ಧ್ಯಾನದ ಗಂಟೆಗೆ ಸದಾ ಎಚ್ಚರಿರಲಿ
ಬಹು ಕಾಲದಿಂದಲೂ ಜೋಪಾನ ಮಾಡಿಟ್ಟ
ಪುಣ್ಯಗಳ ಗಂಟನ್ನು ಕಸಿದುಕೊಳ್ಳುವರಯ್ಯ
ಕೆಟ್ಟ ಇಂದ್ರಿಯಗಳೆಂಬ ಕಳ್ಳರಿವರು || ೧ ||

ಅಲ್ಲದೆ–

ಈ ಜಗತ್ತು ನಶ್ವರ ಎಂದು ಮನಗಂಡು ನಾನು ಧರ್ಮಗಳಿಗೇ ಶರಣು ಬಂದಿದ್ದೇನೆ

ಐದು ಜನ ಕಳ್ಳರನು ಕೊಂದವನು
ಹೆಣ್ಣನ್ನು ಕೊಂದು ಮನೆಯುಳಿಸಿದವನು
ಮತ್ತೆ ಬೆಂಬಲವಿರದ ಮಾದಿಗನ ಕೊಂದವನು
ಖಂಡಿತಕು ಅಂಥವನು ಸ್ವರ್ಗ ಪಡೆಯುವನು || ೨ ||

ಮಂಡೆ ಬೋಳಿಸಿಕೊಂಡರೂ
ಮೋರೆ ಬೋಳಿಸಿಕೊಂಡರೂ
ಒಳಬಗೆಯು ಬೋಳಾಗದಿದ್ದರೆ
ಏನು ಬೋಳಿಸಿಕೊಂಡು ಏನು ಉಪಯೋಗ?
ಯಾರು ಒಳಬಗೆಯನ್ನು ಮೊದಲು ಬೋಳಿಸಿದನೋ
ಅವನೆ ನಿಜಸನ್ಯಾಸಿ
ಮಂಡೆ ಬೋಳಾದದ್ದು ಆಗ ಸಫಲ || ೩ ||

ಈ ಬಟ್ಟೆಗೆ ಕಾವಿ ಮುಳುಗಿಸಿದ್ದಾಯಿತು ಮಹಾರಾಜನ ಭಾವಮೈದನ ಹೂದೋಟಕ್ಕೆ ಹೋಗಿ, ಇದನ್ನು ಅಲ್ಲಿ ಕೆರೆಯಲ್ಲಿ ಅದ್ದಿ, ಬೇಗಬೇಗ ಇಲ್ಲಿಂದ ಹೊರಟು ಹೋಗುತ್ತೇನೆ (ನಡೆದಾಡಿ ಹಾಗೆಯೆ ಮಾಡುತ್ತಾನೆ)

(ತೆರೆಯ ಮರೆಯಲ್ಲಿ)

ನಿಲ್ಲು ಏಯ್, ಕೆಟ್ಟ ಬೈರಾಗಿ, ನಿಲ್ಲು

**ಭಿಕ್ಷು** (ಕಂಡು, ಹೆದರಿಕೊಂಡು) ಹಾಯ್ ಕಷ್ಟವೆ ರಾಜನ ಭಾವಮೈದ ಸಂಸ್ಥಾನಕ ಬಂದೇ ಬಿಟ್ಟ ಯಾವನೋ ಒಬ್ಬ ಬೈರಾಗಿ ತಪ್ಪು ಮಾಡಿದ್ದಕ್ಕೆ ಕಂಡ ಸನ್ಯಾಸಿಯನ್ನೆಲ್ಲ ಎತ್ತಿನ ಹಾಗೆ ಮೂಗುದಾರ ಹಾಕಿ ಎಳಕೊಂಡು ಹೋಗ್ತಾನೆ ಈಗ ಈ ಅಸಹಾಯಸ್ಥಿತಿಯಲ್ಲಿ ಯಾರಿಗೆ ಮೊರೆ ಹೋಗಲಿ? ಅಥವಾ, ಭಗವಾನ್ ಬುದ್ಧನೇ ನನಗೆ ಶರಣು

(ಪ್ರವೇಶ: ಖಡ್ಗಧಾರಿಯಾದ ವಿಟನೊಡನೆ ಶಕಾರ )

**ಶಕಾರ** ನಿಲ್ಲು ಏಯ್, ಕೆಟ್ಟ ಬೈರಾಗಿ, ನಿಲ್ಲು ಕಳ್ಳಿನಂಗಡಿಯಲ್ಲಿಟ್ಟಿರುವ ಕೆಂಪು ಮುಲ್ಲಂಗಿಯಂತೆ ನಿನ್ನ ತಲೆಯನ್ನು ಮುರಿದು ಬಿಡ್ತೇನೆ (ಎಂದು ಹೊಡೆಯುತ್ತಾನೆ )

**ವಿಟ** ಕಾಣೇಲಿಯ ಮಗನೆ, ವೈರಾಗ್ಯದಿಂದ ಕಾವಿ ತೊಟ್ಟ ಬೈರಾಗಿಯನ್ನು ಹೊಡೆಯೋದು ತರವಲ್ಲ ಇವನ ಗೋಜೇಕೆ? ಇಲ್ಲಿ ಸುಖವಾಗಿ ವಿಹರಿಸಬಹುದಾದ ಹೂದೋಟ ಇದೆ ನೋಡು

ಈ ತೋಟ ತನ್ನ ಗಿಡಮರಗಳಿಂದ
ನೆಲೆಯಿಲ್ಲದವರೊಂದು ನೆಲೆಯಾಗಿ
ಸಂತಸದ ಸೆಲೆಯಾಗಿ
ಮಾಡುತಿದೆ ನೋಡು ಚೆಂದುಳ್ಳ ಕೆಲಸ
ದುರ್ಜನರ ಹೃದಯದಂತೆ
ಯಾವುದಕ್ಕೂ ಇಲ್ಲಿ
ಮುಚ್ಚುಮರೆಯಿಲ್ಲ
ಹೊಸತಾಗಿ ಗೆದ್ದೊಂದು ರಾಜ್ಯದಂತೆ
ಸ್ವಚ್ಛಂದ ಭೋಗಕ್ಕೆ ಇದು ತೆರೆದ ಬಾಗಿಲು ॥ ೪ ॥

**ಭಿಕ್ಷು** ಸ್ವಾಗತ ಉಪಾಸಕ ಪ್ರಸನ್ನನಾಗಬೇಕು

**ಶಕಾರ** ಭಾವ, ನೋಡುನೋಡು ನನ್ನನ್ನು ಬೈತಿದ್ದಾನೆ

**ವಿಟ** ಏನು ಹೇಳಿದ?

**ಶಕಾರ** ನನ್ನನ್ನು ಉಪಾಸಕ ಅಂತಿದಾನೆ ಉಪಾಸನೆ ಮಾಡ್ಲಿಕ್ಕೆ ನಾನೇನು ಚವರದವನೆ?

**ವಿಟ** · ಬುದ್ಧನ ಉಪಾಸಕಾಂತ ನಿನ್ನನ್ನು ಹೊಗಳ್ತಿದಾನೆ

**ಶಕಾರ** ಹೊಗಳು ಬೈರಾಗಿ, ಹೊಗಳು

**ಭಿಕ್ಷುಹ** ಧನ್ಯ ನೀನು ಪುಣ್ಯಾತ್ಮ ನೀನು

**ಶಕಾರ** ಭಾವ, ನನ್ನನ್ನು ಧಣ್ಣ ಪುಣ್ಣ ಎಂದೇನೋ ಹೇಳ್ತಿದಾನೆ ಹಾಗನ್ನಲಿಕ್ಕೆ ನಾನೇನು ಚಾರ್ವಾಕನೆ? ಇಲ್ಲ ಕೆರೆಯೆ? ಅಥವ ಕುಂಬಾರನೆ?

ವಿಟ ಕಾಣೇಲಿಯ ಮಗನೆ, ನೀನು ಧನ್ಯ ನೀನು ಪುಣ್ಯಾತ್ಮ ಅಂತ ನಿನ್ನನ್ನು ಹೊಗಳ್ತಿದಾನೆ

ಶಕಾರ ಭಾವ, ಇವನು ಇಲ್ಲಿಗೇಕೆ ಬಂದದ್ದಂತೆ?

ಭಿಕ್ಷು ಈ ಶಾಟಿ ತೊಳೆಯೋದಕ್ಕೆ

ಶಕಾರ ಏ ಕೆಟ್ಟ ಬೈರಾಗಿ, ಇದು ಜಗತ್ತಿನ ಉದ್ಯಾನಗಳಲ್ಲೆಲ್ಲ ಶ್ರೇಷ್ಠವಾದ ಪುಷ್ಪಕರಂಡಕೋದ್ಯಾನ ನನ್ನ ಅಕ್ಕನ ಗಂಡ ಮಹಾರಾಜ ನನಗೆ ಕೊಟ್ಟದ್ದು ಇಲ್ಲಿ ನಾಯಿಗಳು, ನರಿಗಳು ಮಾತ್ರ ನೀರು ಕುಡೀತಾವೆ ನನ್ನಂಥ ದೊಡ್ಮನುಷ್ಯ ಕೂಡ ಇಲ್ಲಿ ಶ್ನಾನ ಮಾಡೋದಿಲ್ಲ ಅಂಥ ಪುಷ್ಕರಿಣಿಯಲ್ಲಿ ನೀನು, ಆ ಹಳೇ ಹುರುಳೀ ಹೊಟ್ಟಿನಂಥ ಹೊಲಶುಬಣ್ಣದ, ಗಮಟು ನಾತದ ಶಾಟಿ ಒಗೀತೀಯಾ? ಒಂದೇ ಪೆಟ್ಟಿಗೆ ನಿನ್ನ ಕತೆ ಮುಗಿಶಿಬಿಟ್ಟೇನು–ಗೊತ್ತಾ?

ವಿಟ ಕಾಣೇಲಿಯ ಮಗನೆ, ಇವನನ್ನು ನೋಡಿದರೆ, ಇವ ಇತ್ತೀಚೆಗೆ ಸನ್ಯಾಸ ತಗೊಂಡವಾಂತ ಕಾಣುತ್ತೆ

ಶಕಾರ ಹೇಗೆ ಗೊತ್ತು ಭಾವನಿಗೆ?

ವಿಟ ಗೊತ್ತಾಗೋದೇನು? ನೋಡು–

ತಲೆ ಬೋಳಿಸಿದರೇನಂತೆ ಹಣೆಯ ಮೇಲಿನ್ನೂ
ಬಿಸಿಲು ಹೊಡೆದು ಅದರ ಬಣ್ಣ ಮಾಸಿಲ್ಲ
ಹೊಸತಾದ್ದರಿಂದಲೇ ಹೆಗಲಲ್ಲಿ ಇನ್ನೂ
ಜೋಳಿಗೆಯ ಜೋಲಿಕೆಗೆ ಗುರುತು ಬಿದ್ದಿಲ್ಲ
ಇನ್ನೂ ಶಾಟಿಯನ್ನುಟ್ಟು ಅಭ್ಯಾಸವಾಗಿಲ್ಲ
ಗೋಜುಲುಗೋಜಲಾಗಿ ತೊಟ್ಟ ಬಟ್ಟೆಯ ತುದಿ
ಹೆಗಲಲ್ಲಿ ನಿಲ್ಲಲೊಪ್ಪದೆ ಜಾರುತಿದೆ ಕೆಳಗೆ ॥ ೫ ॥

ಭಿಕ್ಷು ಉಪಾಸಕ, ಹೌದು ನಾನು ಮೊನ್ನೆಮೊನ್ನೆ ಸನ್ಯಾಸದೀಕ್ಷೆ ಪಡೆದವ

ಶಕಾರ ಹಾಗಾದರೆ, ನೀನೇಕೆ ಹುಟ್ಟಿದ ಕೂಡಲೆ ಶನ್ಯಾಶಿಯಾಗಲಿಲ್ಲ? (ಎಂದು ಹೊಡೆಯುತ್ತಾನೆ )

ಭಿಕ್ಷು ಬುದ್ಧಂ ಸರಣಂ ಗಚ್ಛಾಮಿ

ವಿಟ : ಪಾಪ, ಇವನಿಗೇಕೆ ಹೊಡೀತೀಯಾ ಬಿಟ್ಟುಬಿಡು ಹೋಗಲಿ

ಶಕಾರ ಏಯ್, ಕೊಂಚ ನಿಲ್ಲು ಯಾವುದಕ್ಕು ವಿಚಾರ ಮಾಡಬೇಕಾಗಿದೆ

ವಿಟ ಯಾರ ಹತ್ತಿರ?

ಶಕಾರ ನನ್ನ ಹೃದಯದ ಹತ್ತಿರ

ವಿಟ . ಓಹ್, ಇವನೂ ಹೋಗಲಿಲ್ಲ

**ಶಕಾರ** ಮಗೂ, ನನ್ನ ಹೃದಯುವೆ, ಮಹಾನುಭಾವ, ಮಗೂ, ಈ ಬೈರಾಗಿ ಹೋಗಲಿಯಾ, ಇರಲಿಯಾ? (ಸ್ವಗತ) ಹೋಗೋದೂ ಬೇಡ ಇರೋದೂ ಬೇಡ (ಪ್ರಕಾಶ) ಭಾವ, ನಾನು ನನ್ನ ಹೃದಯದ ಜತೆ ವಿಚಾರ ಮಾಡಿದೆ ನನ್ನ ಹೃದಯ ಹೀಗೆ ಹೇಳುತ್ತೆ:

**ವಿಟ** . ಹೇಗೆ ಹೇಳುತ್ತೆ?

**ಶಕಾರ** ಹೋಗೋದೂ ಬೇಡ ಇರೋದೂ ಬೇಡ ಶ್ವಾಶ ಒಳಕ್ಕೆ ಎಳ ಕೊಳ್ಳೋದೂ ಬೇಡ ಹೊರಕ್ಕೆ ಬಿಡೋದೂ ಬೇಡ ಇಲ್ಲೆ ಚಟ್ಟನೆ ಬಿದ್ದು ಶಾಯಲಿ

**ಭಿಕ್ಷು** ಬುದ್ಧಂ ಸರಣಂ ಗಚ್ಛಾಮಿ ಶರಣು ಬಂದಿದ್ದೇನೆ ಕಾಪಾಡಬೇಕು

**ವಿಟ** ಹೋಗಲಿ ಬಿಡು

**ಶಕಾರ** ಒಂದು ಶರತ್ತಿನ ಮೇಲೆ

**ವಿಟ** . ಏನು ಶರತ್ತು

**ಶಕಾರ** ನೀರಿನ ಮೇಲೆ ಕೆಶರು ಎರಚಬೇಕು; ಆದರೆ ನೀರು ಕದಡಬಾರದು ಅಥವಾ ನೀರನ್ನು ಮುದ್ದೆ ಮಾಡಿ ತೆಗೆದು ಕೆಶರಿನ ಮೇಲೆ ಹಾಕಬೇಕು

**ವಿಟ** ಆಹಾ! ಮೂರ್ಖತನವೆ!

ಕೊಂಕು ಬುದ್ಧಿಯ ಡೊಂಕು ನಡತೆಯ
ಮೂರ್ಖರೆಂದರೆ
ಕಲ್ಲು ಹುಲ್ಲನೆ ಜಡಿದು ಮಾಡಿದ ಮೈ
ಮಾಂಸದ ಮುದ್ದೆಯನೆ ಮೆದ್ದು ಮಾಡಿದ ಮರ
ಇವರ ಭಾರಕ್ಕೆ ಭೂಮಿ ತತ್ತರಿಸಿದೆ || ೬ ||

(ಭಿಕ್ಷು ನಾಟ್ಯದಿಂದ ಕೂಗುತ್ತಾನೆ )

**ಶಕಾರ** ಏನು ಹೇಳ್ತಾ ಇದ್ದಾನೆ?

**ವಿಟ** : ನಿನ್ನನ್ನು ಹೊಗಳ್ತಾ ಇದ್ದಾನೆ

**ಶಕಾರ** . ಹೊಗಳು ಹೊಗಳು ಇನ್ನಷ್ಟು ಹೊಗಳು

(ಹಾಗೆಯೆ ಮಾಡುತ್ತ ಭಿಕ್ಷು ಹೋಗುತ್ತಾನೆ )

**ವಿಟ** · ಕಾಣೇಲಿಯ ಮಗನೆ, ಹೂದೋಟದ ಚೆಲುವನ್ನಿಷ್ಟು ನೋಡು–

ಹೂವು ಹಣ್ಣುಗಳಿಂದ ಸೊಗಯಿಸುವ ಮರಗಳು
ಮರಗಳನ್ನಪ್ಪಿ ಮರವಟ್ಟು ನಿಂತಿರುವ
ಬೆಳೆದ ಚೆಲುಬಳ್ಳಿಗಳು
ಅರಸನಪ್ಪಣೆ ಪಡೆದ ಭಟರ ಕಾವಲಿನೊಳಗೆ
ಹಾಯಾಗಿ ಸುಖಪಡುವ ದಂಪತಿಗಳಂತೆ || ೭ ||

**ಶಕಾರ** ಭಾವ, ಚೆನ್ನಾಗಿ ಹೇಳಿದೆ

ಬಣ್ಣ ಬಣ್ಣದ ಹೂಗಳು ಚೆಲ್ಲಿ
ಬಿಡಿಶಿವೆ ನೆಲದಲಿ ರಂಗೋಲಿ
ಹೂವಿನ ಭಾರಕೆ ಬಾಗಿವೆ ಗಿಡಬಳ್ಳಿ
ಮರಗಳ ತುದಿಯಲಿ ಬಳ್ಳಿಗೆ ಜೋತು
ಮಂಗಗಳೋಲಾಡುತ್ತಿವೆ ಶುತ್ತಲು
ಹಲಶಿನ ಹಣ್ಣುಗಳಂತೆ ॥ ೮ ॥

**ವಿಟ** ಕಾಣೇಲಿಯ ಮಗನೆ, ಇದೋ ಈ ಹಾಸುಗಲ್ಲಿನಲ್ಲಿ ಕೂಡೋಣಾಗಲಿ

**ಶಕಾರ** ಇದೋ ಕೂತೆ (ಎಂದು ವಿಟನ ಜತೆಗೆ ಕೂಡುತ್ತಾನೆ) ಭಾವ, ಈಗಲೂ ಆ ವಶಂತಶೇನೆಯದೇ ನೆನಪಾಗ್ತಾ ಇದೆ ದುರ್ಜನರ ಮಾತಿನಂತೆ ಅವಳ ನೆನಪು ಮನಶ್ಶಿನಿಂದ ಮರೆಯಾಗಲು ಕೇಳೋದೇ ಇಲ್ಲ

**ವಿಟ** (ಸ್ವಗತ) ಹಾಗೆ ನಿರಾಕೃತನಾದರೂ ಅವಳನ್ನೆ ನೆನಸುತಿದ್ದಾನೆ ಅಥವಾ–

ಹೆಂಗಸರ ಕೈಯಿಂದ ಮಾನ ಕಳಕೊಂಡಾಗ
ಮೂರ್ಖರಿಗೆ ಕಾಮದ ಕಾವು ಇನ್ನಷ್ಟು ಹೆಚ್ಚು
ಸಜ್ಜನರಾದರೆ ಅಲ್ಲಿಗೆ ಮೆತ್ತಗಾಗುತ್ತಾರೆ,
ಮರೆತೇ ಬಿಡುತ್ತಾರೆ ಅಥವ ॥ ೯ ॥

**ಶಕಾರ** ಭಾವ, ನಮ್ಮ ಚೇಟ ಷ್ಥಾವರಕನ ಬಳಿ ಗಾಡಿ ಹಿಡಕೊಂಡು ಕೂಡಲೇ ಬಾಂತ ಹೇಳಿ ಎಷ್ಟು ಹೊತ್ತಾಯಿತು? ಇನ್ನೂ ಬರಲಿಲ್ಲಾಂತ ನನ್ನ ಹಶಿವು ಜೋರಾಗ್ತಾ ಇದೆ. ಮಧ್ಯಾಹ್ನದ ಹೊತ್ತು ನಡಕೊಂಡು ಹೋಶೋದಕ್ಕೂ ಆಗೋದಿಲ್ಲ ನೋಡು ನೋಡು–

ನಡುನೆತ್ತಿಯ, ಕಣ್ಕುಕ್ಕುವ ಈ ಶೂರ್ಯನೆಂದರೆ
ಶಿಟ್ಟಾದ ಮಂಗನ ಥೇಟ ಕೆಂಪು ಮೂತಿ
ಬಿಶಿಲಿಗೆ ಬೆಂದ ಈ ನೆಲದ ದಾರಿ
ನೂರು ಮಕ್ಕಳನು ಕಳಕೊಂಡ ನಾರಿ ಗಾಂಧಾರಿ ॥ ೧೦ ॥

**ವಿಟ** ಹೌದು–

ಅರೆಜಗಿದ ಹುಲ್ಲುಗರಿಗಳನು ಹಾಗೆಯೆ ಬಿಟ್ಟು
ಬಾಯಾಡಿಸುವುದನ್ನು ಕೂಡ ಮರೆತು
ನೆರಳಲ್ಲಿ ಹಾಯಾಗಿ ಗೋವುಗಳು ಮಲಗಿವೆ
ಬಾಯೊಣಗಿ ಬೆಂಡಾದ ಕಾಡುಜಿಂಕೆಗಳು
ಕೊಳದ ಬಿಸಿನೀರನ್ನೆ ಕುಡಿಯುತಿವೆ
ಬಿಸಿಲಿನ ಬೇಗೆಗೆ ಕಂಗೆಟ್ಟಿಹ ಜನ
ಪೇಟೆ ದಾರಿಯಲಿ ಸುಳಿಯುತ್ತಿಲ್ಲ

ಪ್ರಾಯಃ ನಮ್ಮಯ ಗಾಡಿಯು ಕೂಡ
ನೆಲದೀ ಕಾವನು ತಪ್ಪಿಸಲೆಂದು
ಎಲ್ಲೋ ನೆರಳಲಿ ನಿಂದಿರಬೇಕು ॥ ೧೧ ॥

**ಶಕಾರ** ಭಾವಯ್ಯ,
ಶೂರ್ಯನ ಕಿರಣಗಳಡಗಿವೆ
ಭಾವಯ್ಯ, ನನ್ನ ತಲೆಯಲ್ಲಿ
ಹಕ್ಕಿ ಪಕ್ಕಿಗಳು ಮತ್ತೆ ಬಾನಾಡಿಗಳು
ಅಡಗಿವೆ ಮರದ ಟೊಂಗೆಗಳಲ್ಲಿ
ಮನುಷ್ಯಮಾನವರು ಮತ್ತೆ ಈ ಜನರು
ಗೃಹದೊಳಗೆ ಮನೆಯೊಳಗೆ ಅಡಗಿಕೊಂಡು
ಬಿಶಿಯಾದ ನಿಟ್ಟುಶಿರನೆಳೆಯುತ್ತ
ತಪ್ಪಿಶುತ್ತಿದ್ದಾರೆ ಬಿಶಿಲ ಬೇಗೆಯನ್ನು ॥ ೧೨ ॥

ಭಾವಯ್ಯ, ಇನ್ನೂ ಆ ಚೇಟ ಬರ್ತಾನೇ ಇಲ್ಲ ಮನಶ್ಶನ್ನು ಹಗುರಾಗಿಶಲು ಶ್ವಲ್ಪ ಹಾಡ್ತೇನೆ (ಎಂದು ಹಾಡುತ್ತಾನೆ) ಭಾವಯ್ಯ ಭಾವಯ್ಯ, ನೀನು ಕೇಳಿದೆಯಾ ನಾನು ಹಾಡಿದ್ದನ್ನು?

**ವಿಟ** ಏನು ಹೇಳೋದು ನೀನೆಂದರೆ ಸಾಕ್ಷಾತ್ ಗಂಧರ್ವ

**ಶಕಾರ** · ಗಂಧರ್ವ ಆಗದೆ ಮತ್ತೆ?
ಜೀರಿಗೆ ಭದ್ರಮುಷ್ಟಿಗಳನರೆದು
ಹಿಂಗು ಹಾಕಿ ಕುಡಿದಿದ್ದೇನೆ
ಬೆಲ್ಲ ಶುಂಠಿಯ ಜತೆಗೆ ಬಜೆಯ ನೆಕ್ಕಿದ್ದೇನೆ
ಇಷ್ಟು ಗಂಧದ್ರವ್ಯ ಶೇವಿಶಿದ ಮೇಲೂ
ಗಂಧರ್ವನಾಗದಿರುವುದು ಹೇಗೆ ನಾನು ॥ ೧೩ ॥

ಭಾವಯ್ಯ, ಮತ್ತೊಮ್ಮೆ ಹಾಡ್ತೇನೆ (ಹಾಗೆಯೆ ಮಾಡುತ್ತಾನೆ) ಭಾವಯ್ಯ ಭಾವಯ್ಯ, ನಾನು ಹಾಡಿದ್ದು ಕೇಳಿತೇನು?

**ವಿಟ** ಏನು ಹೇಳೋದು ನೀನೆಂದರೆ ಧೇಟ ಗಂಧರ್ವ

**ಶಕಾರ** ಮತ್ತೆ ಗಂಧರ್ವ ಆಗದೆ?
ಎಣ್ಣೆಯ ತುಪ್ಪದಲ್ಲಿ ಹುರಿಶಿ
ಮೆಣಶಿನ ಪುಡಿ ಮೇಲೆ ಚಿಮುಕಿಶಿ
ಹಿಂಗಿನ ಒಗ್ಗರಣೆ ಹಾಕಿಶಿ
ಕೋಗಿಲೆಯ ಮಾಂಶ ಮೆದ್ದಿದ್ದೇನೆ ಬಾಯಿ ಚಪ್ಪರಿಶಿ
ಮತ್ತೆ ಗಂಧರ್ವನಾಗದಿರುವುದು ಹೇಗೆ ನಾನು ॥ ೧೪ ॥

ಭಾವಯ್ಯ, ಇನ್ನೂ ಚೇಟ ಬರಲೇ ಇಲ್ವಲ್ಲ?

**ವಿಟ** ಸುಮ್ಮನೆ ಇರಯ್ಯ ಈಗ ಬರ್‍ತಾನೆ

(ಪ್ರವೇಶ: ಗಾಡಿಯೊಳಗೆ ಕುಳಿತ ವಸಂತಸೇನೆ ಮತ್ತ ಚೇಟ )

**ಚೇಟ** ನಾನು ಹೆದರಿಹೋಗಿದ್ದೇನೆ ನಡುನೆತ್ತಿಯ ಸೂರ್ಯ ಬೇರೆ ರಾಜನ ಭಾವಮೈದ ಈ ಸಂಸ್ಥಾನಕ ನನ್ನ ಮೇಲೆ ಸಿಟ್ಟಾಗದಿದ್ದರೆ ಸಾಕು ಆದ್ದರಿಂದ ಬೇಗ ಗಾಡಿ ಹೊಡೀತೇನೆ ಹೋಗ್ರೋ ಎತ್ತುಗಳು ಹೋಗ್ರೋ ಹೈಯ್ಯಾ ಹೈಽಽ

**ವಸಂತಸೇನೆ** ಅಯ್ಯಯ್ಯೋ! ಇದು ವರ್ಧಮಾನಕನ ಸ್ವರ ಅಲ್ಲ ಏನಿದು? ಏನು, ಆರ್ಯಚಾರುದತ್ತ ಗಾಡಿಯ ಯಾತಾಯಾತ ತಪ್ಪಿಸೋದಕ್ಕಾಗಿ ಬೇರೆ ಜನ ಕೊಟ್ಟು ಬೇರೆಯೆ ಗಾಡಿಯನ್ನು ಕಳಿಸಿರಬಹುದೆ? ಬಲಗಣ್ಣು ಬೇರೆ ಅದುರ್‍ತಾ ಇದೆ ನನ್ನ ಹೃದಯ ಕಂಪಿಸ್ತಾ ಇದೆ ದಿಕ್ಕುಗಳೆಲ್ಲ ಬರಿದಾಗಿವೆ ಎಲ್ಲವೂ ವಿಪರೀತವಾಗಿ ಕಾಣಿಸ್ತಿದೆ

**ಶಕಾರ** (ಗಾಲಿಯ ಸದ್ದನ್ನಾಲಿಸಿ) ಭಾವಯ್ಯ, ಭಾವಯ್ಯ, ಗಾಡಿ ಬಂತು

**ವಿಟ** ಹೇಗೆ ಗೊತ್ತು?

**ಶಕಾರ** ಭಾವಯ್ಯನಿಗೆ ಕಾಣಿಶೋದಿಲ್ಲೇನು? ಮುದಿಹಂದಿಯ ಧರ ಘುರು ಘುರು ಶದ್ದು ಬರ್‍ತಾ ಇದೆ

**ವಿಟ** (ನೋಡಿ) ಸರಿಯಾಗಿ ಹೇಳಿದೆ ಹೌದು ಗಾಡಿ ಬಂತು

**ಶಕಾರ** ಮಗೂ, ಷ್ಥಾವರಕ, ಚೇಟ, ಬಂದಿಯಾಽಪ್ಪ?

**ಚೇಟ** ಹೌದು ಬಂದೆ

**ಶಕಾರ** ಗಾಡಿಯೂ ಬಂತಾ?

**ಚೇಟ** ಹೌದು, ಬಂತು

**ಶಕಾರ** ಎತ್ತುಗಳೂ ಬಂದವಾ?

**ಚೇಟ** ಹೌದು, ಬಂದವು

**ಶಕಾರ** ನೀನೂ ಬಂದೆಯಾ?

**ಚೇಟ** (ನಗುತ್ತ) ಅಯ್ಯಾ ಹೌದು, ನಾನೂ ಬಂದೆ

**ಶಕಾರ** ಹಾಗಾದರೆ ಗಾಡಿಯನ್ನು ಒಳಗೆ ಹೊಡಿ

**ಚೇಟ** ಯಾವ ದಾರಿಯಿಂದ?

**ಶಕಾರ** ಇದೇ ಈ ತುಂಡುಪಾಗಾರದ ಮೇಲಿನಿಂದ

**ಚೇಟ** : ಅಯ್ಯ, ಹಾಗೆ ಹೊಡೆದರೆ ಎತ್ತುಗಳು ಸಾಯ್ತಾವೆ ಗಾಡಿಯೂ ಮುರಿಯುತ್ತೆ ನಾನೂ ಸಾಯಬೇಕಾಗುತ್ತೆ

**ಶಕಾರ** ಏಯ್, ನಾನು ಮಹಾರಾಜನ ಭಾವಮೈದ ಅನ್ನೋದು ಗೊತ್ತುಂಟಲ್ಲ? ಎತ್ತುಗಳು ಶತ್ತರೆ ಬೇರೆ ತಗೊಳ್ತೇನೆ ಗಾಡಿ ಮುರಿದರೆ ಬೇರೆ ಗಾಡಿ ಮಾಡಿಶ್ತೇನೆ ನೀನು ಶತ್ತಿ, ಇನ್ನೊಬ್ಬ ಗಾಡಿಯವ ಬರ್ತಾನೆ

**ಚೇಟ** ಎಲ್ಲ ಸರಿಯಾಯಿತು ಆದರೆ ನನಗೆ ನಾನು ಇಲ್ಲವಾಗುತ್ತೇನಲ್ಲ?

**ಶಕಾರ** . ಏಯ್, ಎಲ್ಲ ಹಾಳಾಗಿ ಹೋಗಲಿ ನೀನು ಮೊದಲು ತುಂಡು ಪಾಗಾರದಿಂದ ಗಾಡಿ ಒಳಕ್ಕೆ ಹೊಡಿ

**ಚೇಟ** ಓ ಗಾಡಿಯೆ, ಮುರಿದು ಬೀಳು ನಿನ್ನ ಯಜಮಾನನ ಜತೆ ಮುರಿದು ಹಾಳಾಗಿ ಹೋಗು ಬೇರೆ ಗಾಡಿ ಬರಲಿ ನಾನು ಯಜಮಾನನ ಹತ್ರ ಕೇಳಿಕೊಳ್ತೇನೆ

(ಪ್ರವೇಶಿಸಿ) ಅರೆ, ಗಾಡಿ ಮುರಿಯಲಿಲ್ಲ ಅಯ್ಯಾ, ಇದೋ ಗಾಡಿಯನ್ನು ಒಳಗೆ ತಂದೆ

**ಶಕಾರ** ಎತ್ತುಗಳು ತುಂಡಾಗಲಿಲ್ಲ ಹಗ್ಗಗಳು ಶಾಯಲಿಲ್ಲ ನೀನೂ ಶಾಯಲಿಲ್ಲ

**ಚೇಟ** ಇಲ್ಲ ಸ್ವಾಮಿ

**ಶಕಾರ** ಭಾವಯ್ಯ, ಬಾ, ಗಾಡಿಯನ್ನು ನೋಡೋಣ ಭಾವಯ್ಯ, ನೀನೋ ನನಗೆ ಗುರು, ಪರಮಗುರು ನನ್ನ ಹತ್ತಿರದ ಬಂಧು, ಗೌರವಕ್ಕೆ ಯೋಗ್ಯಾಂತ ನಿನ್ನನ್ನು ಬಹಾಳ ಆದರದಿಂದ ನೋಡ್ಕೊಂಡು ಬಂದಿದ್ದೇನೆ ಆದರಿಂದ ನೀನೇ ಮೊದಲು ಗಾಡಿ ಹತ್ತು

**ವಿಟ** ಹಾಗೆಯೆ ಆಗಲಿ (ಎಂದು ಹತ್ತುತ್ತಾನೆ )

**ಶಕಾರ** ಅಥವಾ ನೀನು ನಿಲ್ಲು ಇದೇನು ನಿನ್ನಪ್ಪನ ಗಾಡಿಯಾ ನೀನು ಮೊದಲು ಹತ್ತೋದಕ್ಕೆ? ನಾನು ಗಾಡಿಯ ಯಜಮಾನ ನಾನೇ ಮೊದಲು ಗಾಡಿ ಹತ್ತೇನೆ

**ವಿಟ** ನೀನೇ ಹಾಗೆ ಹೇಳಿದ್ದು ಎಲ್ಲ ನಿನ್ನೊಳಗೆ ಆಯಿತು

**ಶಕಾರ** · ಹೌದು, ನಾನು ಹಾಗೆ ಹೇಳಿದ್ದು ಹೌದು ಆದರೆ ನೀನು "ಯಜಮಾನ ಮೊದಲು ಗಾಡಿ ಹತ್ತು" ಅಂತ ಹೇಳೋದು ಮರ್ಯಾದೆ ಅಲ್ಲವಾ?

**ವಿಟ** ನೀನೇ ಮೊದಲು ಹತ್ತು ಮಹಾರಾಯ

**ಶಕಾರ** ಈಗ ಹತ್ತೇನೆ ನೋಡು ಮಗೂ ಷ್ಥಾವರಕ, ಚೇಟ, ಗಾಡಿ ತಿರುಗಿಶು

**ಚೇಟ** · (ತಿರುಗಿಸಿ) ಹತ್ತು ಅಯ್ಯ

**ಶಕಾರ** (ಹತ್ತಿ, ದಿಟ್ಟಿಸಿ ನೋಡಿ, ದಿಗಿಲುಗೊಂಡವರಂತೆ ಒಮ್ಮೆಲೆ ಕೆಳಗಿಳಿದು ವಿಟನನ್ನು ಕೊರಳಲ್ಲಿ ಅಪ್ಪಿಹಿಡಿದು) ಭಾವಯ್ಯ ಭಾವಯ್ಯ, ನೀನು ಶತ್ತೇ ನೀನು ಶತ್ತೆ ಗಾಡಿಯೊಳಗೆ ರಕ್ಕಶಿಯೋ ಕಳ್ಳನೋ ಯಾರೋ ಇದ್ದಾರೆ

ರಕ್ಕಶಿಯಾದರೆ ನಾವಿಬ್ಬರೂ ಕದಿಯಲ್ಪಟ್ಟೆವು, ಕಳ್ಳನಾದರೆ ನಾವಿಬ್ಬರೂ ತಿನ್ನಲ್ಪಟ್ಟೆವು ಎಂದೇ ಅರ್ಥ

**ವಿಟ** ಹೆದರಬೇಡ ಈ ಎತ್ತಿನ ಗಾಡಿಯಲ್ಲಿ ರಕ್ಕಸಿ ಎಲ್ಲಿಂದ ಬರಬೇಕು? ಮಧ್ಯಾಹ್ನದ ಬಿಸಿಲಿನ ಜಳಕ್ಕೆ ನಿನ್ನ ಕಣ್ಣು ಮಂಜಾಗಿ, ಮುಂಡಾಸು ಬಿಗಿದ ಸ್ಥಾವರಕನ ನೆರಳನ್ನೆ ನೀನು ರಕ್ಕಸಿಯೆಂದು ಭ್ರಮಿಸಿಕೊಂಡಿರಬೇಕು

**ಶಕಾರ** . ಮಗೂ, ಸ್ಥಾವರಕ, ಚೇಟ, ಬದುಕಿದ್ದೀಯಾ?

**ಚೇಟ** ಹೌದು

**ಶಕಾರ** ಭಾವಯ್ಯ, ಗಾಡಿಯಲ್ಲಿ ಒಬ್ಬ ಹೆಂಗಸು ಕೂತಿದ್ದಾಳೆ ಬೇಕಿದ್ದರೆ ನೀನೇ ನೋಡು

**ವಿಟ** ಏನು, ಹೆಂಗಸು!

ಮೋರೆಗೆ ಮಳೆನೀರು ಹೊಡೆಯುತಿರಲು
ಬಗ್ಗಿ ನಡೆಯುವ ಎತ್ತುಗಳಂತೆ
ತಲೆಯನು ಬಗ್ಗಿಸಿ ಬೇಗನೆ
ನಡೆದೇ ಹೋಗುವ ನಾವು
ನಾನಂತು ನಾಕುಜನ ಕಲೆತಲ್ಲಿ
ಮರ್ಯಾದೆ ಬೇಕೆಂದು ಬಯಸುವವನು
ಕುಲವತಿಯರ ಕಾಣುವುದೆಂದರೆ
ಕಾತರಗೊಳುವುದು ನನ್ನೀ ಕಣ್ಣು ॥ ೧೫ ॥

**ವಸಂತಸೇನೆ** . (ಅಚ್ಚರಿಯಿಂದ ಸ್ವಗತ) ಓಹ್, ನನ್ನ ಕಣ್ಣಿಗೆ ಕಂಟಕನಾದ ಈ ರಾಜನ ಭಾವಮೈದನೆ ಮತ್ತೆ ಎದುರಾದನಲ್ಲ! ಅದೃಷ್ಟ ಕೈಕೊಟ್ಟಿತು ಮತ್ತೆ ನಾನು ಅಪಾಯದಲ್ಲಿ ಸಿಕ್ಕಿಬಿದ್ದೆ ಮರುಭೂಮಿಯಲ್ಲಿ ಬಿತ್ತ ಬೀಜದಂತೆ ನನ್ನಂಥ ನತದೃಷ್ಟಳು ಇಲ್ಲಿಗೆ ಬಂದದ್ದೂ ದಂಡವಾಯಿತು ಈಗೇನು ಮಾಡಲಿ?

**ಶಕಾರ** . ಈ ಮುದಿ ಚೇಟ ಹೆದರ್ಕೊಂಡು ಗಾಡಿಯೊಳಗೆ ನೋಡ್ತಾನೇ ಇಲ್ಲ ಭಾವಯ್ಯ, ನೀನಾದರೂ ನೋಡಯ್ಯ ಗಾಡಿಯನ್ನು

**ವಿಟ** ತಪ್ಪೇನು? ಆಗಲಿ ನೋಡ್ತೇನೆ

**ಶಕಾರ** . ಏನು? ನರಿಗಳು ಹಾರ್ತಾ ಇದ್ದಾವೆ ಕಾಗೆಗಳು ಓಡ್ತಾ ಇದ್ದಾವೆ ಆ ರಕ್ಕಶಿ ಭಾವಯ್ಯನನ್ನು ಕಣ್ಣುಗಳಿಂದ ಕುಕ್ಕಿತಿಂದು ಹಲ್ಲುಗಳಿಂದ ಕೆಕ್ಕರಿಸಿ ನೋಡುವ ಮೊದಲೆ ನಾನು ಓಡಿಹೋಗೋದು ಮೇಲು

**ವಿಟ** (ವಸಂತಸೇನೆಯನ್ನು ಕಂಡು ವಿಷಾದದಿಂದ, ಸ್ವಗತ) ಅರೆ, ಏನಿದು? ಜಿಂಕೆ ಹುಲಿಯನ್ನು ಹುಡುಕಿಕೊಂಡು ಬಂದಿದೆ ಹಾಯ್ ಕಷ್ಟ!

ಶರದೃತುವಿನ ಚಂದ್ರನೊಲಿರುವ,
ಮರಳ ಹಾಸೆಯಲಿ ಮಲಗಿರುವ
ಅರಸಂಚೆಯ ತೊರೆದೀ ಹಂಸಿ
ಕಾಗೆಯನರಸುತ ಬಂತೆ! ॥ ೧೬ ॥

(ಜನಾಂತಿಕ) ವಸಂತಸೇನೆ, ಇದು ತರವಲ್ಲ ನೀನು ಮಾಡಿದ್ದು ಸರಿಯಲ್ಲ

ಮೊದಲು ಅಭಿಮಾನದಿಂದವನ ಧಿಕ್ಕರಿಸಿ
ಹಣದ ಆಸೆಗೆ ಮತ್ತೆ ತಾಯ ಒತ್ತಾಸೆಗೆ

**ವಸಂತಸೇನೆ** ಇಲ್ಲ ಇಲ್ಲ (ಎಂದು ತಲೆಯಾಡಿಸುತ್ತಾಳೆ)

**ವಿಟ** ಆ ಹಮ್ಮು ಅಭಿಮಾನ ಎಲ್ಲವನು ಮರೆತು
ಸೂಳೆಯರ ನಿಜಬಣ್ಣ ತೊಟ್ಟಿರುವೆಯಾಗ ॥ ೧೭ ॥

ನಾನು ಮೊದಲೇ ಹೇಳಿದ್ದೆನಲ್ಲ ನಿನ್ನ ಬಳಿ: ಬೇಕಾಗಿರಲಿ, ಬೇಡಾಗಿರಲಿ; ದುಡ್ಡು ತೆತ್ತವರನ್ನು ತಣಿಸಬೇಕು

ವಸಂತಸೇನೆ ಗಾಡಿ ಅದಲುಬದಲಾಗಿ ಇತ್ತ ಬಂದೆ ನಿಮ್ಮ ದಮ್ಮಯ್ಯ ನನ್ನನ್ನು ಪಾರುಮಾಡು

**ವಿಟ** ಹೆದರಬೇಡ ಹೆದರಬೇಡ ಇರಲಿ ಇವನಿಗೆ ಬೇಸ್ತು ಹಾಕೋಣ (ಶಕಾರನ ಬಳಿ ಬಂದು) ಕಾಣೇಲಿಯ ಮಗನೆ, ಹೌದು ಮಾರಾಯ, ಗಾಡಿಯಲ್ಲಿ ಒಬ್ಬ ರಕ್ಕಸಿ ಸೇರಿಕೊಂಡಿದ್ದಾಳೆ

**ಶಕಾರ** ಭಾವಯ್ಯ, ಭಾವಯ್ಯ, ರಕ್ಕಶಿ ಇರೋದು ನಿಜವಾದರೆ ನಿನ್ನನ್ನೇಕೆ ಅವಳು ಕದಿಯಲಿಲ್ಲ? ಅಲ್ಲ, ಕಳ್ಳನೆ ಆಗಿದ್ದರೆ ನಿನ್ನನ್ನೇಕೆ ಅವ ತಿನ್ನಲಿಲ್ಲ?

**ವಿಟ** ಅದರ ಬಗ್ಗೆ ವಿಚಾರ ಮಾಡಿ ಏನು ಉಪಯೋಗ? ನಾವು ಹೂದೋಟದ ದಾರಿಗುಂಟ ನಡೆದುಕೊಂಡೇ ಉಜ್ಜಯಿನಿ ಕಡೆ ಹೋದರೆ ಏನು ತಪ್ಪು?

**ಶಕಾರ** ಹಾಗೆ ಮಾಡಿದರೆ ಏನಾಗುತ್ತೆ?

**ವಿಟ** ಹಾಗೆ ಮಾಡಿದರೆ ನಮಗೂ ಒಂದಿಷ್ಟು ವ್ಯಾಯಾಮ ಆಯಿತು ಗಾಡಿಯೆತ್ತುಗಳಿಗೂ ವಿಶ್ರಾಂತಿ ಸಿಕ್ಕಹಾಗಾಯಿತು

**ಶಕಾರ** ಹಾಗೆಯೆ ಆಗಲಿ ಷ್ಥಾವರಕ ಚೇಟ, ಕೊಂಡು ಹೋಗು ಗಾಡಿಯನ್ನು ಅಥವ ನಿಲ್ಲುನಿಲ್ಲು ದೇವತೆಗಳು ಮತ್ತು ಬ್ರಾಹ್ಮಣರ ಎದುರು ಮಾತ್ರ ನಾನು ನಡ್ಕೊಂಡು ಹೋಗೋದು ಇಲ್ಲ ಇಲ್ಲ ಗಾಡಿ ಹತ್ತಿಯೇ ಹೋಗ್ತೇನೆ ಆಗ ದೂರದಲ್ಲೆ ಜನ ನನ್ನನ್ನು ಕಂಡು ಹೇಳ್ತಾರೆ: ಮಹಾರಾಜನ ಭಾವಮೈದ ಶಂಷ್ಥಾನಕ ಹೋಗ್ತಾ ಇದ್ದಾನೆ– ಹಾಗೇಂತ

**ವಿಟ** (ಸ್ವಗತ) ವಿಷವನ್ನು ಔಷಧ ಮಾಡೋದು ಅಸಾಧ್ಯ ಆಗಲಿ ಹೀಗೆ ಹೇಳ್ತೇನೆ: (ಪ್ರಕಾಶ) ಕಾಣೇಲಿಯ ಮಗನೆ, ಇವಳು ವಸಂತಸೇನೆ ನಿನ್ನೊಡನೆ ಮಲಕ್ಕೊಳ್ಳಲು ಬಂದಿದ್ದಾಳೆ

**ವಸಂತಸೇನೆ** ಶಾಂತಂ ಪಾಪಮ್ ಶಾಂತಂ ಪಾಪಮ್

**ಶಕಾರ** (ಸಂತೋಷದಿಂದ) ಭಾವಯ್ಯ ಭಾವಯ್ಯ, ನನ್ನೊಡನೆ? ಶ್ರೇಷ್ಠಪುರುಷ ನಾದ ಮನುಷ್ಯರೂಪೀ ವಾಶುದೇವನೊಡನೆ?

**ವಿಟ** ಹೌದು ಹೌದು

**ಶಕಾರ** ಅಪೂರ್ವವಾದ ಕೊಪ್ಪರಿಗೆ ಶಿಕ್ಕಂತಾಯಿತು ಹಾಗಾದರೆ ಆ ಬಾರಿ ನಾನು ಅವಳನ್ನು ಶಿಟ್ಟಾಗಿಶಿದೆ ಈ ಬಾರಿ ಕಾಲಿಗೆ ಅಡ್ಡಬಿದ್ದು ಶಂತೈಶುತ್ತೇನೆ

**ವಿಟ** ಸರಿಯಾದ ಮಾತು

**ಶಕಾರ** ಇದೋ ಕಾಲಿಗೆ ಬಿದ್ದೆ (ಎಂದು ವಸಂತಸೇನೆಯ ಬಳಿ ಬಂದು) ಅವ್ವಾ, ತಾಯಿ, ನನ್ನ ವಿನಂತಿಯನ್ನು ಆಲಿಶುವಂಥವಳಾಗು:

ಓ ಉದ್ದ ಕಣ್ಣಿನವಳೆ,
ನಾನು ನಿನ್ನ ಕಾಲಿಗೆ ಬೀಳುತ್ತೇನೆ
ಓ ಬಿಳಿಯ ಹಲ್ಲಿನವಳೆ,
ನಿನ್ನ ಹತ್ತುಗುರುಗಳಲ್ಲಿ ನನ್ನ ಕೈ ಜೋಡಿಶುತ್ತೇನೆ
ಓ ಚಂದದ ಮೈಯವಳೆ,
ಕಾಮಪೀಡಿತನಾಗಿ ನಾನು ಮಾಡಿದ್ದ ಆ
ತಪ್ಪುಗಳನೆಲ್ಲ ಉಡಿಯಲ್ಲಿ ಹಾಕಿಕೋ
ನಾನೀಗ ನಿನ್ನ ಚರಣದಾಶ ॥ ೧೮ ॥

**ವಸಂತಸೇನೆ** (ಸಿಟ್ಟಿನಿಂದ) ತೊಲಗಾಚೆ ಅಸಭ್ಯವಾಗಿ ಮಾತನಾಡಬೇಡ (ಎಂದು ಕಾಲಿನಿಂದ ಸರಿಸುತ್ತಾಳೆ )

**ಶಕಾರ** (ಸಿಟ್ಟಿನಿಂದ)

ಅವ್ವಂದಿರು, ತಾಯಂದಿರು ಮುದ್ದಿಶಿದ ತಲೆ
ದೇವದೇವತೆಗಳಿಗು ಬಗ್ಗಿಶದ ತಲೆ
ಅಂಥ ತಲೆಯನ್ನು ನೀನು ಕಾಲಿಂದ ತುಳಿದೆ
ಕಾಡಿನಲಿ ನರಿ ಹೆಣದ ಮೈಯ ತುಳಿವಂತೆ ॥ ೧೯ ॥

ಏಯ್ ಷ್ಥಾವರಕ ಚೇಟ, ಇವಳು ನಿನಗೆ ಎಲ್ಲಿ ಶಿಕ್ಕಿದಳು?

**ಚೇಟ** ಅಯ್ಯ, ಹೆದ್ದಾರಿತುಂಬ ಹಳ್ಳಿಯ ಗಾಡಿಗಳು ಅಡ್ಡ ನಿಂತಿದ್ದವು ಆಗ ಚಾರುದತ್ತನ ತೋಟದ ಪಕ್ಕದಲ್ಲಿ ಗಾಡಿನಿಲ್ಲಿಸಿ, ಅಲ್ಲೆ ಇಳಿದು, ಹೂತು

ಹೋದ ಗಾಡಿಯೊಂದರ ಗಾಲಿಯನ್ನು ಎತ್ತಿಡುವುದರಲ್ಲಿದ್ದೆ ಅಷ್ಟರಲ್ಲಿ ಇವಳು ಪ್ರಾಯಃ ಅದಲು ಬದಲಾಗಿ ಈ ಗಾಡಿ ಹತ್ತಿರಬೇಕು

**ಶಕಾರ** ಓಹೋ, ಗಾಡಿ ಅದಲುಬದಲಾಗಿ ಬಂದವಳು ನನ್ನನ್ನು ಬಯಶಿ ಬಂದವಳಲ್ಲ ಹಾಗಾದರೆ ಇಳಿ ಇಳಿ ನನ್ನ ಗಾಡಿಯಿಂದ ನೀನು ಆ ದಟ್ಟದರಿದ್ರ ವ್ಯಾಪಾರಿಯ ಮಗನನ್ನೆ ಬಯಶಿ ಹೋಗುವವಳು ನಿನ್ನನ್ನು ಹೊತ್ತುಕೊಂಡು ಹೋಗಲಿಕ್ಕೆ ನನ್ನ ಎತ್ತುಗಳಾಗಬೇಕಾ? ಇಳಿ ಇಳಿ, ಹುಟ್ಟು ತೊತ್ತಿನವಳೆ, ಇಳಿ ಬೇಗ

**ವಸಂತಸೇನೆ** 'ಆರ್ಯಚಾರುದತ್ತನನ್ನೆ ಬಯಸಿ ಹೋಗುವವಳು' ಎನ್ನುವ ಮಾತಿನಿಂದ ನಿಜಕ್ಕು ನನ್ನನ್ನು ಗೌರವಿಸಿದಂತಾಯಿತು ಇನ್ನು ಏನುಬೇಕಾದ ರಾಗಲಿ

**ಶಕಾರ** . ತಾವರೆಗಳಂತೆ ಮುದ್ದಾಗಿ ಬೆಳೆದಿರುವ
ಹತ್ತುಗುರುಗಳ ಹೊತ್ತ ಈ ಕೈಗಳಿಂದ
ಮೋಜಿಗಾಗಿ ನೂರು ಬಾರಿ
ನಿನ್ನ ಬೆನ್ನು ತಟ್ಟಬೇಕು
ಎಂದು ಬಯಶುತಿದ್ದೆ
ಈಗ ಅವೇ ಕೈಗಳಿಂದ ಜಗ್ಗಿ ಕೂದಲು ಹಿಡಿದು
ವಾಲಿಯ ಹೆಂಡತಿಯನ್ನು
ಜಟಾಯು ಎಳೆದಂತೆ
ನಿನ್ನ ಚೆಲುಮೈಯನ್ನು
ಎಳೆದು ಹಾಕುವೆನು ನನ್ನ ಗಾಡಿಯಿಂದ ॥ ೨೦ ॥

**ವಿಟ** ಗುಣವತಿಯರಾಗಿರುವ ಹೆಣ್ಮಕ್ಕಳ
ಕೂದಲಿಗೆ ಕೈಯಿಕ್ಕಬಾರದು
ಉದ್ಯಾನದಲಿ ಬೆಳೆದ ಹೂಬಳ್ಳಿಯ
ಚಿಗುರನ್ನು ಚಿವುಟಬಾರದು ॥ ೨೦ ॥

ಅದರಿಂದ ನೀನು ಏಳು ನಾನು ಈಕೆಯನ್ನಿಳಿಸುತ್ತೇನೆ ವಸಂತಸೇನೆ, ಕೆಳಗಿಳಿಯಪ್ಪಾ (ವಸಂತಸೇನೆ ಇಳಿದು ಮೂಲೆಯಲ್ಲಿ ನಿಲ್ಲುತ್ತಾಳೆ)

**ಶಕಾರ** (ಸ್ವಗತ) ನನ್ನ ಮಾತಿಗೆ ಬೆಲೆ ಕೊಡದೆ ತಿರಸ್ಕರಿಶಿದ್ದರಿಂದ ನನ್ನ ಕೋಪದ ಬೆಂಕಿ ಕಿಡಿಕಾರಿತ್ತು ಈಗ ಕಾಲಲ್ಲಿ ತುಳಿದದ್ದರಿಂದ ಧಗಧಗನೆ ಉರಿಯತೊಡಗಿದೆ ಅದರಿಂದ ಇವಳನ್ನೀಗ ಕೊಂದೇ ಬಿಡ್ತೇನೆ ಇರಲಿ ಹೀಗೆ ಮಾಡೋಣಃ (ಪ್ರಕಾಶ) ಭಾವಯ್ಯ, ಭಾವಯ್ಯ,–
ನೂರು ಬಗೆಯ ಎಳೆಗಳಿಂದ
ಹೆಣೆದು ತುಂಬ ಬೆಲೆ ಬಾಳುವ

ದೊಡ್ಡ ಶಾಲೊಂದನ್ನು ಹೊದೆಯಬೇಕೆ?
ಬೆಂದ ಮಾಂಶವನ್ನು ತಿಂದು
ಚುಕ್ಕುಚುಕ್ಕು ಚುಹೂ ಎಂದು
ಚೀಪಿ ಶವಿಯಬೇಕೆಂದು ಉಂಟೆ ಬಯಕೆ? ॥ ೨೨ ॥

**ವಿಟ** ಇದ್ದರೆ ಏನು?

**ಶಕಾರ** ನನಗೆ ಪ್ರಿಯವಾದ್ದನ್ನು ಮಾಡು

**ವಿಟ** ಖಂಡಿತ ಮಾಡ್ತೇನೆ– ಮಾಡಬಾರದ್ದು ಅಲ್ಲದಿದ್ದರೆ

**ಶಕಾರ** ಭಾವಯ್ಯ, ಮಾಡಬಾರದ್ದರ ಗಂಧ ಕೂಡ ಇಲ್ಲ ಇಲ್ಲಿ ಯಾರೂ ರಕ್ಕಶಿ ಇಲ್ಲ

**ವಿಟ** ಹೇಳು ಹಾಗಾದರೆ

**ಶಕಾರ** ವಸಂತಸೇನೆಯನ್ನು ಕೊಂದುಬಿಡು

**ವಿಟ** (ಕಿವಿಗಳನ್ನು ಮುಚ್ಚಿಕೊಂಡು)–

ಎಳೆವರೆಯದ ಹೆಣ್ಮಗಳನ್ನು
ಊರಿಗೆ ಭೂಷಣವಾದವಳನ್ನು
ಸೂಳೆಯಾದರೂ ಸೂಳೆಗೆ ಸಲ್ಲದ
ಪ್ರೀತಿಯ ನಂಟಿಗೆ ಸೋತವಳನ್ನು
ನಿರಪರಾಧಿಯಾದೀ ಇವಳನ್ನು
ಕೊಂದೆನಾದರೆ ನಾನು
ಯಾವ ದೋಣಿಯನು ಮತ್ತೆ ಹತ್ತಿ
ದಾಟಲಿ ಪರಲೋಕದ ನದಿಯನ್ನು ॥ ೨೩ ॥

**ಶಕಾರ** ನಾನು ನಿನಗೆ ದೋಣಿ ಕಳಿಶ್ತೇನೆ ಅಷ್ಟೆ ಅಲ್ಲ; ಇಲ್ಲಿ ನಿರ್ಜನವಾದ ಈ ಹೂದೋಟದ ತೋಪಿನಲ್ಲಿ ಕೊಂದರೆ ನಿನ್ನನ್ನು ಯಾರು ನೋಡ್ತಾರೆ?

**ವಿಟ** ನನ್ನನ್ನು ನೋಡುತಿವೆ ಹತ್ತು ದಿಕ್ಕುಗಳು
ನೋಡುತಿರುವರು ಬನದ ದೇವತೆಗಳು
ಚಂದ್ರ ನೋಡುವನು, ಉರಿವ ಕಿರಣಗಳ ಸೂರ್ಯ,
ಧವಷಾದೇವತೆ ಮತ್ತು ವಾಯುದೇವ,
ಈ ಭೂಮಿ, ಈ ಬಾನು, ಒಳಗಿರುವ ನನ್ನಂತರಾತ್ಮ
ಪಾಪ ಪುಣ್ಯಗಳಿಗಿವರು ಸಾಕ್ಷಿಯಾಗಿಹರು ॥ ೨೪ ॥

**ಶಕಾರ** ಅದಕ್ಕೆ ಯಾರಿಗೂ ಕಾಣದ ಹಾಗೆ ಬಟ್ಟೆ ಮುಚ್ಚಿಕೊಂಡರೆ ಶರಿ

**ವಿಟ** · ಮೂರ್ಖ, ಹಾಳಾಗಿ ಹೋಗು

**ಶಕಾರ** ಈ ಮುದಿಹಂದಿಗೆ ಪಾಪದ್ದೆ ಹೆದರಿಕೆ ಸ್ಥಾವರಕ ಚೇಟನನ್ನು ಮನವೊಲಿಸುತ್ತೇನೆ ಮಗೂ, ಸ್ಥಾವರಕ, ಚೇಟ, ನಿನಗೆ ಚಿನ್ನದ ಕಡಗ ಕೊಡ್ತೇನೆ

**ಚೇಟ** ನಾನೂ ತೊಟ್ಟುಕೊಳ್ತೇನೆ

**ಶಕಾರ** ನಿನಗೆ ಚಿನ್ನದ ಮಣೆ ಮಾಡಿಕೊಡ್ತೇನೆ

**ಚೇಟ** ನಾನೂ ಕೂತುಕೊಳ್ತೇನೆ

**ಶಕಾರ** ನಾನು ತಿಂದು ಉಳಿದ ಎಂಜಲೆಲ್ಲ ನಿನಗೆ ಕೊಡ್ತೇನೆ

**ಚೇಟ** ನಾನು ತಿಂದೇಬಿಡ್ತೇನೆ

**ಶಕಾರ** ಎಲ್ಲ ಚೇಟರಲ್ಲಿ ನಿನ್ನನ್ನು ಮೊದಲಿಗನನ್ನಾಗಿ ಮಾಡ್ತೇನೆ

**ಚೇಟ** ಅಯ್ಯಾ, ನಾನು ಹಾಗೇ ಆಗ್ತೇನೆ

**ಶಕಾರ** ಹಾಗಾದರೆ ನನ್ನ ಮಾತು ಕೇಳು

**ಚೇಟ** ಅಯ್ಯ, ಎಲ್ಲ ಮಾಡ್ತೇನೆ ಮಾಡಬಾರದ್ದು ಒಂದು ಬಿಟ್ಟು

**ಶಕಾರ** ಮಾಡಬಾರದ್ದರ ಗಂಧವೂ ಇಲ್ಲ

**ಚೇಟ** ಅಯ್ಯಾ, ಏನು ಹೇಳು

**ಶಕಾರ** ಈ ವಸಂತಸೇನೆಯನ್ನು ಕೊಲ್ಲು

**ಚೇಟ** ಅಯ್ಯ, ದಯಮಾಡಬೇಕು ನಾನು ಅಯೋಗ್ಯ ಪುಣ್ಯಾತ್ಮಳಾದ ಈಕೆ ಗಾಡಿ ಬದಲಾದ್ದರಿಂದ ನನ್ನ ಗಾಡಿಯಲ್ಲಿ ಬಂದಳು

**ಶಕಾರ** ಏಯ್, ಚೇಟ, ನೀನೂ ನನ್ನ ಮಾತು ಕೇಳೋದಿಲ್ಲೇನು?

**ಚೇಟ** ಅಯ್ಯ, ನನ್ನ ಈ ಮೈಗೆ ನೀನೇ ಒಡೆಯ ಆದರೆ ನನ್ನ ನಡತೆಗಲ್ಲ ಕ್ಷಮಿಸಬೇಕು, ಕ್ಷಮಿಸಬೇಕು ಅಯ್ಯ ನಾನು ಹೆದರಿಕೊಂಡಿದ್ದೇನೆ

**ಶಕಾರ** ನೀನು ನನ್ನ ಚೇಟನಾಗಿ ಯಾವುದರ ಹೆದರಿಕೆ ನಿನಗೆ?

**ಚೇಟ** ಅಯ್ಯ, ಪರಲೋಕದ್ದು

**ಶಕಾರ** ಏನಯ್ಯ ಅದು, ಪರಲೋಕಾಂದ್ರೆ?

**ಚೇಟ** ಅಯ್ಯ, ಪಾಪಪುಣ್ಯಗಳ ಫಲ ಅನುಭವಿಸೋ ಜಾಗ.

**ಶಕಾರ** · ಪುಣ್ಯದ ಫಲ ಎಂಥದು?

**ಚೇಟ** ಅಯ್ಯನ ಹಾಗೆ ಚಿನ್ನದ ರಾಶಿಯಲ್ಲಿ ಬದುಕೋ ಬಾಳು

**ಶಕಾರ** · ಪಾಪದ್ದು?

**ಚೇಟ** ನನ್ನ ಹಾಗೆ ಇನ್ನೊಬ್ಬರ ಕೂಳುತಿಂದು ಬದುಕೋ ಬಾಳು. ಆದರಿಂದ ನಾನು ಇಂಥ ಕೆಟ್ಟ ಕೆಲಸ ಮಾಡಲಾರೆ

**ಶಕಾರ** ಏನು ಕೊಲ್ಲೋದಿಲ್ಲವಾ? (ಎಂದು ಬಹುವಿಧವಾಗಿ ಹೊಡೆಯುತ್ತಾನೆ )

**ಚೇಟ** ಅಯ್ಯ, ಹೊಡಿ, ಬೇಕಿದ್ದರೆ ಕೊಲ್ಲು ಅಯ್ಯ ಆದರೆ ಇಂಥ ಕೆಟ್ಟಕಸುಬು ಮಾಡೋದಿಲ್ಲ

ನನ್ನ ಹಣೆಬರಹ ಮೊದಲೆ ಕೆಟ್ಟಿತ್ತೆಂದು
ಹುಟ್ಟಿನಿಂದಲೆ ಪರರ ಕೂಲಿ ಮಾಡುವ ಇಂಥ
ಈ ಹಾಳು ಬಾಳು ಬಂತು, ಮತ್ತಿದಕೆ
ಇನ್ನಷ್ಟು ಸೇರಿಸಲು ನನಗಿಷ್ಟವಿಲ್ಲ
ಮಾಡಬಾರದ್ದನ್ನು ನಾ ಮಾಡಲಾರೆ || ೨೫ ||

**ವಸಂತಸೇನೆ** : ಅಯ್ಯ, ನಾನು ಶರಣು ಬಂದಿದ್ದೇನೆ

**ವಿಟ** ಕಾಣೇಲಿಯ ಮಗನೆ, ತಡಕೋ ತಡಕೋ ಭೇಷ್ ಸ್ಥಾವರಕ ಭೇಷ್

ಇನ್ನೊಬ್ಬರ ಕೂಲಿ ಮಾಡಿ ಬದುಕಬೇಕಾದಂಥ
ದುರವಸ್ಥೆಗೀಡಾದ ಈ ಬಡವ ಕೂಡ
ಹೆದರಿ ನಡೆಯುತ್ತಾನೆ ಪುಣ್ಯಪಾಪಕ್ಕೆ
ಇವನ ಯಜಮಾನನಿಗೆ ಅದರ ಗೋಜೇ ಇಲ್ಲ!
ಏಕೆ ಇಂಥವರೆಲ್ಲ, ದೊಡ್ಡ ದುಡ್ಡಿನ ಮಂದಿ
ಹಾಳಾಗಿ ಹೋಗುವುದಿಲ್ಲ?
ಯೋಗ್ಯತೆಗೆ ಬೆಲೆಯ ಕೊಡದವರು
ಅಯೋಗ್ಯರನೆ ಬಳಿಗೆ ಕರೆದುಕೊಳುವವರು! || ೨೬ ||

ಅಲ್ಲದೆ,

ಈ ಕೆಟ್ಟ ವಿಧಿ ಕೂಡ ದುರ್ಬಲರನೇ ತಾನು
ಬೆಂಬತ್ತಿ ಕಾಡುವುದು ಸಮಯ ಕಾದು
ಇಲ್ಲದಿರೆ ಇವನೇಕೆ ದಾಸನಿರಬೇಕಿತ್ತು
ನೀನೇಕೆ ಯಜಮಾನನಾಗಬೇಕಿತ್ತು?
ಈ ನಿನ್ನ ಸಂಪತ್ತು
ಇವನಿಗಾದರು ಏಕೆ ಬರಬಾರದಿತ್ತು?
ಇವನು ಆಜ್ಞೆಯನು ನೀಡಬೇಕು
ನೀನದನು ಕೈಮುಗಿದು ಮಾಡಬೇಕು
ಏಕೆ ಹೀಗಾಗಬಾರದಿತ್ತು! || ೨೭ ||

**ಶಕಾರ** (ಸ್ವಗತ) ಈ ಮುದಿ ನರಿಯಣ್ಣನಿಗೆ ಪಾಪದ ಹೆದರಿಕೆ ಈ ತೊತ್ತಿನ ಮಗನಿಗೆ ಪರಲೋಕದ ನಡುಕ ನಾನಂತು ರಾಜನ ಭಾವಮೈದ ಶ್ರೇಷ್ಠನಾದ ಗಂಡುಮನುಷ್ಯ ನಾನೇಕೆ ಹೆದರಬೇಕು! (ಪ್ರಕಾಶ) ಏ ತೊತ್ತಿನ ಮಗನೆ, ಚೇಟ, ಹೋಗು ನೀನು ಎಲ್ಲಾದರೂ ಒಂದು ಮೂಲೆಗೆ ಹೋಗಿ ಏಕಾಂತದಲಿ ವಿಶ್ರಾಂತಿ ತಗೋ

**ಚೇಟ** ಆಯಿತಯ್ಯ ಅಪ್ಪಣೆ (ವಸಂತಸೇನೆಯ ಬಳಿ ಬಂದು) ಅವ್ವಾ, ನಾನು ಮಾಡಬಹುದಾದದ್ದು ಇಷ್ಟೆ (ಎಂದು ಹೋಗುತ್ತಾನೆ )

**ಶಕಾರ** (ಸೊಂಟ ಬಿಗಿದು) ನಿಲ್ಲು, ವಶಂತಶೇನೆ, ನಿಲ್ಲು ಕೊಂದುಬಿಡ್ತೇನೆ

**ವಿಟ** ಓಹ್, ನನ್ನೆದುರೆ ಕೊಲ್ತಿಯೇನು? (ಎಂದು ಕುತ್ತಿಗೆಯಲ್ಲಿ ಹಿಡಿಯುತ್ತಾನೆ )

**ಶಕಾರ** (ನೆಲಕ್ಕೆ ಬೀಳುತ್ತಾನೆ ) ಭಾವಯ್ಯ ತನ್ನ ದಣಿಯನ್ನೇ ಕೊಲ್ತಾನಪ್ಪೋ (ಎಂದು ಮೂರ್ಛೆಯನ್ನು ನಟಿಸುತ್ತಾನೆ ಅನಂತರ ತಿಳಿದೆದ್ದು ಸ್ವಗತ)–

ತುಪ್ಪದಲಿ, ಮಾಂಶದಲಿ ಅದ್ದಿ ಇವನನ್ನು
ಬಾಳಿನುದ್ದಕು ನಾನು ಶಾಕಿದವನು
ಈಗ ಕೆಲಶಕ್ಕೆ ಬೇಕಾದಾಗ ಮಾತ್ರ
ಇವನು ನನಗೆಯೆ ತಿರುಗಿ ನಿಂತನಲ್ಲ ॥ ೨೮ ॥

(ಆಲೋಚಿಸಿ) ಇರಲಿ ನನಗೆ ಉಪಾಯ ಹೊಳೆಯಿತು ಈ ಮುದಿ ನರಿಯಣ್ಣ ತಲೆಯಾಡಿಶಿ ವಶಂತಶೇನೆಗೆ ಶನ್ನೆ ಬೇರೆ ಮಾಡಿದ್ದಾನೆ ಅದರಿಂದ ಮೊದಲು ಇವನನ್ನು ಇಲ್ಲಿಂದ ಕಳಿಶಿ ಆಮೇಲೆ ವಶಂತಶೇನೆಯನ್ನು ಕೊಲ್ತೇನೆ ಹಾಗೆಯೆ ಶರಿ (ಪ್ರಕಾಶ) ಭಾವಯ್ಯ, ನಾನು ನಿನಗೆ ಏನೋ ಹೇಳಿದೆನಲ್ಲ– ಅಲ್ಲ, ಕಳ್ಳಿನ ಪಾತ್ರೆಯಂಥ ದೊಡ್ಡಗಾತ್ರದ ಗೋತ್ರದಲ್ಲಿ ಹುಟ್ಟಿದ ನಾನು ಇಂಥ ಅಕಾರ್ಯ ಮಾಡಿಯೇನಾ? ಇದು ಶುಮ್ಮನೆ ಅವಳನ್ನು ಒಪ್ಪಿಶೋದಕ್ಕೆ ಹೇಳೋದಲ್ಲವಾ?

**ವಿಟ**

ಕುಲದ ಹೆಗ್ಗಳಿಕೆಯನು ಹೇಳಿಕೊಂಡೇನು ಫಲ
ಒಳಗೆ ಇರಬೇಕಲ್ಲ ಒಳ್ಳೆಯತನ?
ಒಳ್ಳೆಯ ಹಸನಾದ ಗದ್ದೆಯಲಿ ಕೂಡ
ಹುಲುಸಾಗಿ ಬೆಳೆಯುವುದು ಮುಳ್ಳಿನ ಗಿಡ ॥ ೨೯ ॥

**ಶಕಾರ** · ಭಾವಯ್ಯ, ಇವಳಿಗೆ ನೀನಿದ್ದರೆ ನಾಚಿಕೆ ಆಗ್ತದೆ ಅದಕ್ಕೇ ನನ್ನನ್ನು ಒಪ್ಪಿಕೊಳ್ತಾ ಇಲ್ಲ ಆದ್ದರಿಂದ ಹೋಗು ಷ್ಥಾವರಕ ಚೇಟನಿಗೂ ನಾನು ಬಾರಿಶಿಬಿಟ್ಟೆ ಅವನೂ ಎಲ್ಲೋ ಓಡಿಹೋದ ಅವನನ್ನು ಹುಡುಕಿ ಕರಕೊಂಡು ಬಾರಯ್ಯ ಭಾವಯ್ಯ

**ವಿಟ** (ಸ್ವಗತ)–

ನಮ್ಮ ಕಣ್ಣೆದುರೆ ಈ ಮೂರ್ಖನ ಜತೆ ಸೇರಲಿಕೆ
ವಸಂತಸೇನೆಗೂ ಅಭಿಮಾನ ಬಿಡಲಿಕಿಲ್ಲ
ಅದರಿಂದ ನಾನೀಗ
ಒದಗಿಸುವೆ ಏಕಾಂತದವಕಾಶ ಇವಳಿಗೆ
ಏಕಾಂತದ ವಿಶ್ವಾಸದ

ವಾತಾವರಣದಲ್ಲಿ
ಕಾಮಕ್ಕೆ ಕಾವು ಕೊಡುತ್ತೆ ॥ ೩೦ ॥

(ಪ್ರಕಾಶ) ಹಾಗೆಯೆ ಆಗಲಿ ಹೋಗುತ್ತೇನೆ

**ವಸಂತಸೇನೆ** (ಬಟ್ಟೆಯಂಚನ್ನು ಹಿಡಿದು) ನಾನು ಶರಣು ಬಂದಿದ್ದೇನೆ ಎಂದೆನಲ್ಲ!

**ವಿಟ** ವಸಂತಸೇನೆ, ಹೆದರಬೇಡ, ಹೆದರಬೇಡ ಕಾಣೇಲಿಯ ಮಗನೆ, ವಸಂತಸೇನೆಯನ್ನು ನಿನ್ನ ಕೈಯಲ್ಲಿ ನ್ಯಾಸವಾಗಿ ಕೊಟ್ಟಿದ್ದೇನೆ

**ಶಕಾರ** ಹೌದು ಇವಳು ನನ್ನ ಕೈಯಲ್ಲೆ ನ್ಯಾಶವಾಗಿ ಇರಲಿ

**ವಿಟ** · ನಿಜವಾಗಿ?

**ಶಕಾರ** ನಿಜವಾಗಿ

**ವಿಟ** · (ಸ್ವಲ್ಪ ದೂರ ಹೋಗಿ) ಅಥವಾ ನಾನು ಹೋದ ಮೇಲೆ, ಕಣ್ಣಿನಲ್ಲಿ ನೆತ್ತರಿಲ್ಲದ ಈತ ಇವಳನ್ನು ಕೊಂದರೂ ಕೊಂದ ಅದರಿಂದ ಇಲ್ಲೆ ಮರೆ ಯಲ್ಲಿ ಅಡಗಿಕೊಂಡು ಇವನು ಏನು ಮಾಡ್ತಾನೆ ಅನ್ನೋದನ್ನು ನೋಡ್ತೇನೆ (ಎಂದು ಮರೆಯಲ್ಲಿ ನಿಲ್ಲುತ್ತಾನೆ )

**ಶಕಾರ** ಇರಲಿ ಈಗ ನಾನೆ ಕೊಲ್ಲುತ್ತೇನೆ ಅಥವಾ ಈ ಮುದಿನರಿ ಬ್ರಾಹ್ಮಣ ಮಹಾಕಪಟಿ ಎಲ್ಲಾದರೂ ಮರೆಯಲ್ಲಿ ನಿಂತು ನರಿಯಂತೆ ಮೋಶ ಮಾಡಿದರೂ ಮಾಡಿದ ಅವನಿಗೆ ಕೈ ಕೊಡೋದಕ್ಕೆ ಹೀಗೆ ಮಾಡ್ತೇನೆ: (ಹೂವುಗಳನ್ನು ಕೊಯ್ದು ತನ್ನನ್ನು ಸಿಂಗರಿಸಿಕೊಳ್ಳುತ್ತಾನೆ ) ಹದಿವರೆಯದ ಎಳತು ಹೆಣ್ಣೆ, ವಶಂತಶೇನೆ, ಬಾ

**ವಿಟ** . ಅರೆ, ಕಾಮುಕನಾಗಿಬಿಟ್ಟಿದ್ದಾನೆ ಹ್ಲಾ, ಈಗ ನೆಮ್ಮದಿಯಾಯಿತು ಇನ್ನು ಹೋಗ್ತೇನೆ (ಎಂದು ಹೋಗುತ್ತಾನೆ )

**ಶಕಾರ** ಚಿನ್ನ ಮಾಡಿಶಿ ಹಾಕ್ತೇನೆ
ಲಲ್ಲೆ ಮಾತು ಆಡ್ತೇನೆ
ಮುಂಡಾಶು ಬಿಗಿದ ತಲೆಯಿಂದ
ಕಾಲ ಮೇಲೆ ಉರುಳ್ತೇನೆ
ಓ ಬಿಳಿಬಿಳೀ ಹಲ್ಲಿನವಳೆ,
ಆದರೂ ಈ ನಿನ್ನ ನಮ್ರ ಶೇವಕನನ್ನು
ನೀನು ಬಯಶುತ್ತಿಲ್ಲ ಏಕೆ?
ಮನುಷ್ಯರಲ್ಲವಾ ನಾವು ಹಾಗಾದರೆ?
ಮರದ ಬೊಂಬೆಗಳೇನು ನಾವು? ॥ ೩೧ ॥

**ವಸಂತಸೇನೆ** ಅದರಲ್ಲಿ ಸಂಶಯವುಂಟಾ? (ತಲೆ ತಗ್ಗಿಸಿಕೊಂಡು)–
ನಡತೆಗೇಡಿ ನೀಚ ನೀನು
ತಪ್ಪುಗಾರ ದುಷ್ಟ ನೀನು

ದುಡ್ಡಿನಾಮಿಷಕ್ಕೆ ನನ್ನನೊಲಿಸಬಯಸುವೆK
ಒಳ್ಳೆನಡೆಯ ಮಡಿಯ ಮೈಯ
ತಾವರೆಯ ಸಂಗ ತೊರೆದು
ತುಂಬಿಗಳು ಬೇರೆಡೆಗೆ ನಡೆವುದಿಲ್ಲ ॥ ೩೨ ॥

ಬಡವನಾದರೆ ಏನು?
ಕುಲ–ಶೀಲವಂತನನು
ಹೆಣ್ಣು ಹಂಬಲಿಸುತ್ತದೆ
ತನಗೊಪ್ಪುವ ಗಂಡಸನ್ನು
ಮೆಚ್ಚಿ ಸೇರುವುದಂತು
ಸೂಳೆಯರಿಗೊಂದು ಹೆಮ್ಮೆ ॥ ೩೩ ॥

ಅಲ್ಲದೆ– ಕಸಿಮಾವಿನ ಗಿಡವನ್ನು ಸೇವಿಸಿ ಆ ಮೇಲೆ ಗೋಳಿಯ ಗಿಡವನ್ನು ನಾನೊಪ್ಪಲಾರೆ

**ಶಕಾರ** ತೊತ್ತಿನ ಮಗಳೆ, ಆ ದರಿದ್ರ ಚಾರುದತ್ತ ಕಶಿಮಾವಿನ ಮರ ಅಲ್ಲವಾ? ನಾನು ಬರೇ ಗೋಳೀ ಮರ ಆದೆ ಮುತ್ತುಗ ಕೂಡ ಅಲ್ಲ ಹೀಗೆ ನೀನು ನನ್ನನ್ನು ಗೇಲಿ ಮಾಡ್ತಾ ಈಗಲೂ ಆ ಚಾರುದತ್ತನನ್ನೆ ನೆನೆಶುತ್ತಿಯಲ್ಲ!

**ವಸಂತಸೇನೆ** ಹೃದಯದ ಒಳಗೆ ಇರುವವನನ್ನು ಮರೆಯುವುದು ಸಾಧ್ಯವಾ?

**ಶಕಾರ** · ಇನ್ನೂ ನಿನ್ನ ಹೃದಯದ ಒಳಗೆ ಕೂತಿರುವ ಅವನನ್ನೂ ನಿನ್ನನ್ನೂ ಜತೆಯಾಗಿಯೆ ಮುಗಿಶಿಬಿಡ್ತೇನೆ ಆ ದರಿದ್ರ ವ್ಯಾಪಾರೀ ಮನುಷ್ಯನನ್ನು ಕಾಮಿಶುವವಳೆ, ನಿಲ್ಲು ನಿಲ್ಲು

**ವಸಂತಸೇನೆ** ಹೇಳು ಹೇಳು ಇನ್ನೊಮ್ಮೆ ಹೇಳು ಕಿವಿ ತುಂಬ ಕೇಳಬೇಕಾದ ಮಾತುಗಳಿವು

**ಶಕಾರ** ಆ ತೊತ್ತಿನ ಮಗ ದರಿದ್ರ ಚಾರುದತ್ತ ನಿನ್ನನ್ನು ಕಾಪಾಡಲಿ ನೋಡೋಣ.

**ವಸಂತಸೇನೆ** ಆತ ಕಂಡರೆ ಖಂಡಿತ ಕಾಪಾಡ್ತಾನೆ

**ಶಕಾರ** ಏನವನು ಶಕ್ರನೇ
ಇಲ್ಲ, ವಾಲಿಯ ಮಗ ಮಹೇಂದ್ರನೆ?
ರಂಭೆಗೆ ಹುಟ್ಟಿದ ಕಾಲನೇಮಿಯೆ?
ಅಥವಾ ಶುಬಂಧುವೇ ಅವನು?
ಮಹಾರಾಜ ರುದ್ರನೆ?
ದ್ರೋಣಶುತ ಜಟಾಯುವೆ?
ಅವನು ಅಥವ ಚಾಣಕ್ಯ?
ಧುಂಧುಮಾರನೇ ಅವನು?
ಅಥವಾ ತ್ರಿಶಂಕುವೆ? ॥ ೩೪ ॥

ಅಥವಾ ಇವರಾರೂ ನಿನ್ನನ್ನು ಕಾಪಾಡಲಾರರು
ಭಾರತದ ಯುದ್ಧದಲ್ಲಿ
ಚಾಣಕ್ಯ ಶೀತೆಯನ್ನು
ಕೊಂದ ಹಾಗೆ ಕೊಲ್ಲುವೆ
ದ್ರೌಪದಿಯನು ಜಟಾಯು ಹೇಗೆ
ಹಾಗೆ ನಿನ್ನ ಮುಗಿಶುವೆ ॥ ೩೫ ॥

(ಎಂದು ಹೊಡೆಯತೊಡಗುತ್ತಾನೆ )

**ವಸಂತಸೇನೆ** ಓ ಅಮ್ಮಾ, ಎಲ್ಲಿರುವೆ? ಅಯ್ಯಯ್ಯೋ, ಆರ್ಯಚಾರುದತ್ತ, ಬಯಕೆ ತೀರುವ ಮುನ್ನವೆ ನನಗೆ ಇಂಥ ಪಾಡುಬಂತು ಗಟ್ಟಿಯಾಗಿ ಬೊಬ್ಬಿಡಲೇನು? ಅಥವಾ ವಸಂತಸೇನೆ ಬೊಬ್ಬೆ ಹೊಡೀತಿದ್ದಾಳೆ ಅನ್ನೋದು ನಾಚಿಕೆಗೇಡು ಆರ್ಯಚಾರುದತ್ತನಿಗೆ ನಮೋನಮೋ

**ಶಕಾರ** ಈ ತೊತ್ತಿನ ಮಗಳು ಈಗಲೂ ಆ ಪಾಪಿಯ ಹೆಶರನ್ನೆ ಹೇಳುತಿದ್ದಾಳೆ! (ಎಂದು ಕತ್ತು ಒತ್ತಿ ಹಿಡಿದು) ನೆನೆ ತೊತ್ತಿನ ಮಗಳೆ, ಅವನನ್ನೆ ನೆನೆ

**ವಸಂತಸೇನೆ** ಆರ್ಯಚಾರುದತ್ತನಿಗೆ ನಮೋನಮೋ

**ಶಕಾರ** ಶತ್ತು ಹೋಗು ತೊತ್ತಿನ ಮಗಳೆ, ಶತ್ತು ಹೋಗು (ನಾಟ್ಯದಿಂದ ಕತ್ತು ಹಿಚುಕಿ ಬೀಳಿಸುತ್ತಾನೆ )

**ವಸಂತಸೇನೆ** (ಮೂರ್ಛೆಗೊಂಡು, ನಿಶ್ಚೇಷ್ಟಿತಳಾಗಿ ಕುಸಿದುಬೀಳುತ್ತಾಳೆ )

**ಶಕಾರ** (ಸಂತೋಷದಿಂದ)

ದೋಷಗಳ ರಾಶಿ, ಅವಿನಯದ ತವರು ಈ ಇವಳು ಕೆಟ್ಟ ಹುಡುಗಿ
ಆ ಬಡವನನ್ನು ರಮಿಶಲಿಕ್ಕೆಂದು ಬಯಶಿ ಬಂದವಳಿಲ್ಲಿಗೆ
ಶಿಗಲಿಲ್ಲ ಅವನು ಅದರ ಬದಲಾಗಿ ಶಿಕ್ಕಿದ್ದು ನನ್ನಿಂದ ಶಾವು
ನನ್ನ ತೋಳುಗಳ ಹಿರಿಬಲದ ಬಗ್ಗೆ ಹೆಗ್ಗಳಿಕೆಯೇಕೆ ಬೇಕು?
ಹಿಂದೆ ಭಾರತದ ಯುದ್ಧದಲ್ಲಿ ಆ ಶೀತೆ ಹೇಗೆ ಹಾಗೆ
ಉಶಿರು ನಿಂತು, ಶಾವನ್ನೆ ಅಪ್ಪಿ, ನಿಜ ಶತ್ತೆ ಹೋದಳಿವಳು
॥ ೩೬ ॥

ಬಯಶಿಬಂದ ನನ್ನನ್ನು ಇವಳು ಬಯಶಲಿಲ್ಲವೆಂದು
ಶಿಟ್ಟಿನಿಂದ ಈ ಶೂಳೆಯನ್ನು ನಾನಂತು ಕೊಂದುಬಿಟ್ಟೆ
ಹೂದೋಟದಲ್ಲಿ ಈ ಮೂಲೆಯಲ್ಲಿ ಯಾರಿರದ ತಾಣದಲ್ಲಿ
ತೋಳ್‌ಬಳ್ಳಿ ಬೀಶಿ ಗಕ್ಕನೇ ಬಂದು ಅವಳನ್ನು ಗಾಶಿಗೊಳಿಶಿ
ನನ್ನಣ್ಣ ತಮ್ಮ ಹಾಗೆಯೇ ತಂದೆ ದ್ರೌಪದಿಯ ತೆರನ ತಾಯಿ
ಯಾರಿಗೂ ಶಿಗಲಿಲ್ಲ ಮಗನ ಈ ಬೀರವನು ಕಂಡು ನಲಿವ ಭಾಗ್ಯ
॥ ೩೭ ॥

ಇರಲಿ ಈಗಿನ್ನು ಆ ಮುದಿನರಿ ಬರಬಹುದು ಇಲ್ಲಿಂದ ದೂರ ಹೋಗಿ ನಿಲ್ಲುತ್ತೇನೆ

(ಹಾಗೆಯೇ ಮಾಡುತ್ತಾನೆ.)

**ವಿಟ** (ಚೇಟನೊಡನೆ ಪ್ರವೇಶಿಸಿ) ಚೇಟ ಸ್ಥಾವರಕನನ್ನು ಸಂತೈಸಿದ್ದಾಯಿತು ಇನ್ನು ಕಾಣೇಲಿಯ ಮಗನನ್ನು ಕಾಣುತ್ತೇನೆ (ಹೆಜ್ಜೆಹಾಕಿ, ದಿಟ್ಟಿಸಿ) ಅರೆ, ದಾರಿಯಲ್ಲೆ ಅಡ್ಡಾಗಿ ಒಂದು ಮರ ಮುರಿದು ಬಿದ್ದಿದೆ ಅದರಡಿಗೆ ಬಿದ್ದು ಒಬ್ಬ ಹೆಣ್ಮಗಳು ಸತ್ತಿದ್ದಾಳೆ ಎಲಾ ಪಾಪಿಷ್ಠ ಮರವೆ, ನಿನ್ನಂಥ ಪಾಪಿಗಳು ಮುರಿದು ಬಿದ್ದರೆ ದುಃಖವಿಲ್ಲ ಆದರೆ ಈ ಸ್ತ್ರೀಹತ್ಯೆಯನ್ನು ಕಂಡು ನಾನು ಕುಗ್ಗಿ ಹೋದೆ ಇದೊಂದು ಅಪಶಕುನ ವಸಂತಸೇನೆಯ ಕುರಿತು ಯಾಕೋ ಮನಸ್ಸು ದುಗುಡಗೊಳ್ಳುತ್ತಿದೆ ಸರ್ವಥಾ ದೇವತೆಗಳು ಒಳಿತನ್ನು ಮಾಡಲಿ (ಶಕಾರನ ಬಳಿ ಬಂದು) ಕಾಣೇಲಿಯ ಮಗನೆ, ಚೇಟ ಸ್ಥಾವರಕನನ್ನು ಹೀಗೆ ಸಂತೈಸಿ ಕರೆದು ತಂದೆ

**ಶಕಾರ** ಭಾವಯ್ಯ, ನಿನಗೆ ಶ್ವಾಗತ ಮಗೂ, ಷ್ಠಾವರಕ, ಚೇಟ, ನೀನೂ ಶುಖವಾಗಿ ಬಂದೆಯಾ?

**ಚೇಟ** ಹೌದು

**ವಿಟ** . ನನ್ನ ನ್ಯಾಸವನ್ನು ನನಗೆ ಮರಳಿಸು

**ಶಕಾರ** ಯಾವ ನ್ಯಾಶ?

**ವಿಟ** ವಸಂತಸೇನೆ

**ಶಕಾರ** · ಅವಳು ಹೋದಳು

**ವಿಟ** ಎಲ್ಲಗೆ?

**ಶಕಾರ** . ಭಾವಯ್ಯನ ಬೆನ್ನ ಹಿಂದೆಯೇ ಹೋದಳು

**ವಿಟ** (ವಿಮರ್ಶಿಸಿ) ಆ ಕಡೆ ಆಕೆ ಬರಲಿಲ್ಲವಲ್ಲ

**ಶಕಾರ** . ನೀನು ಯಾವ ಕಡೆ ಹೋದೆ?

**ವಿಟ** ಇದೇ ಎದುರಿನ ದಾರಿಯಲ್ಲಿ

**ಶಕಾರ** ಅವಳು ಬಲಗಡೆ ದಾರಿಯಲ್ಲಿ ಹೋದಳು

**ವಿಟ** ನಾನೂ ಬಲಗಡೆ ದಾರಿಯಲ್ಲಿ ಹೋದದ್ದು

**ಶಕಾರ** ಹಾಗಾದರೆ ಅವಳು ಎಡಗಡೆ ಹೋದಳು

**ವಿಟ** ಏನೋ ಅಪರಾತಪರಾ ಮಾತಾಡ್ತಿ? ನನ್ನ ಮನಸ್ಸಿಗೆ ಭರವಸೆಯಾಗ್ತಾ ಇಲ್ಲ ನಿಜ ಹೇಳು

**ಶಕಾರ** ಭಾವಯ್ಯ, ನಿನ್ನ ತಲೆಮೇಲೆ ನನ್ನ ಕಾಲಿಟ್ಟು ಆಣೆಯಿಟ್ಟು ಬೇಕಾದರೆ ಹೇಳ್ತೇನೆ ಎದೆ ಗಟ್ಟಿಮಾಡಿಕೊಂಡು ಕೇಳು ಅವಳನ್ನು ನಾನು ಕೊಂದಿದ್ದೇನೆ

**ವಿಟ** (ವಿಷಾದದಿಂದ) ನಿಜಕ್ಕು ನೀನು ಕೊಂದೆಯಾ?

**ಶಕಾರ** ನನ್ನ ಮಾತಿನಲ್ಲಿ ನಂಬಿಕೆ ಇಲ್ಲವಾದರೆ ನೀನೇ ನೋಡು ಮಹಾರಾಜನ ಭಾವಮೈದ ಶಂಷ್ಥಾನಕನ ಈ ಮೊಟ್ಟಮೊದಲ ಶಾಹಶವನ್ನು! (ಎಂದು ತೋರಿಸುತ್ತಾನೆ )

**ವಿಟ** ಅಯ್ಯಯ್ಯೋ ಕೆಟ್ಟೆನಪ್ಪೋ ಕೆಟ್ಟೆ ನನ್ನ ದೌರ್ಭಾಗ್ಯವೆ! (ಎಂದು ಮೂರ್ಛೆಗೊಂಡು ಬೀಳುತ್ತಾನೆ )

**ಶಕಾರ** : ಹೀಹೀ, ಭಾವಯ್ಯ ಶತ್ತು ಹೋದ

**ಚೇಟ** ಸಮಾಧಾನ ಮಾಡಿಕೋ ಭಾವ, ಸಮಾಧಾನ ಮಾಡಿಕೋ ವಿಚಾರ ಮಾಡದೆ ಗಾಡಿಯನ್ನು ಇತ್ತ ತಂದಾಗಲೆ ನಾನು ಆಕೆಯನ್ನು ಮೊದಲು ಕೊಂದ ಹಾಗಾಯಿತು

**ವಿಟ** (ಚೇತರಿಸಿಕೊಂಡು ದೈನ್ಯದಿಂದ) ಹಾ ವಸಂತಸೇನೆ,
ದಾಕ್ಷಿಣ್ಯದ ತೊರೆ ಬತ್ತಿತು
ಹೊರವಂಟಳು ತನ್ನೂರಿಗೆ ಕಾಮನ ಪಟ್ಟದ ರಾಣಿ!
ಹಾಹಾ ಬಂಗಾರದ ಬಂಗಾರವೆ,
ಚೆಲುಮೋರೆಯ ಸಿಂಗಾರವೆ,
ಹಾ ಯೌವನದಾಟದ ಬೇಟದ ಸರ್ವಸ್ವದ ಸಾರವೆ,
ಹಾ ತಿಳಿನಗೆಯ ತಡಿಯ ಸೌಜನ್ಯದ ನದಿಯೆ,
ಹಾ ನನ್ನಂಥವರ ಆಸರೆಯ ನಿಧಿಯೆ,
ಹಾಹಾ ಹಾಳಾಯಿತು ಹಾಳಾಯಿತು
ಹೆಣ್ತನದ ಸೌಂದರ್ಯಸಾರವನು ಮಾರಲಿಟ್ಟ
ಈ ಮನ್ಮಥನ ಮಾರುಕಟ್ಟೆ ॥ ೩೮ ॥

(ಕಣ್ಣೀರು ಸುರಿಸುತ್ತ) ಕಷ್ಟವೋ ಕಷ್ಟ
ಎಂಥ ಕೆಲಸವನು ಮಾಡಿಬಿಟ್ಟೆ
ಪಾತಕದ ಪ್ರತಿಮೂರ್ತಿ ನೀನು
ಪಾಪವರಿಯದ ಉಜ್ಜಯಿನಿಯ ಸಿರಿಯನ್ನು
ಹಾಳುಗೆಡವಿಬಿಟ್ಟೆ ॥ ೩೯ ॥

(ಸ್ವಗತ) ಈ ಪಾಪಿ ಒಂದೊಮ್ಮೆ ಈ ಅಕಾರ್ಯದ ಹೊಣೆಯನ್ನು ನನ್ನ ಮೇಲೆ ಹೊರಿಸುವುದಕ್ಕು ಹೇಸುವವನಲ್ಲ ಇರಲಿ ಇಲ್ಲಿಂದ ತೆರಳೋದೆ ಮೇಲು (ಎಂದು ಹೊರಡುತ್ತಾನೆ )

(ಶಕಾರ ಬಂದು ಹಿಡಿದುಕೊಳ್ಳುತ್ತಾನೆ )

ವಿಟ · ಪಾಪಿ, ನನ್ನನ್ನು ಮುಟ್ಟಬೇಡ ನಿನ್ನ ಸಹವಾಸ ಸಾಕು ನಾನು ಹೊರಟುಬಿಟ್ಟೆ

ಶಕಾರ ಅರೆ, ವಶಂತಶೇನೆಯನ್ನು ತಾನೇ ಕೊಂದು ಈಗ ನನ್ನ ಮೇಲೆ ದೂರು ಹಾಕಿ ಎಲ್ಲಿಗೆ ಓಡ್ತೀ? ಸದ್ಯ ಎಲ್ಲ ಶೇರಿ ನನ್ನ ಕೈಬಿಟ್ಟು ಅನಾಥನನ್ನು ಮಾಡಹೊರಟಿದ್ದೀರಿ

ವಿಟ . ಹಾಳಾಗಿ ಹೋಗು

ಶಕಾರ ನೂರು ಚಿನ್ನದ ನಾಣ್ಯಗಳನ್ನು ಕೊಡುವೆನಣ್ಣ ನಿನಗೆ
ಅಥವ ಬೆಳ್ಳಿಯ ನಾಣ್ಯ, ತಾಮ್ರದ್ದು, ಕವಡೆಯದು ಕೂಡ
ಅಪವಾದಗೆಡೆಕೊಡುವ ನನ್ನ ಈ ಶಾಹಶ
ನಮ್ಮನಮ್ಮೊಳಗೆ ಗುಟ್ಟಾಗಿಯಿರಲಿ
ಯಾರೊ ಕೊಂದದ್ದಂತೆ ಎಂದಷ್ಟೆ ಶುದ್ದಿ ಬರಲಿ ॥ ೪೦ ॥

ವಿಟ ಥೂ ನಿನ್ನ

ಚೇಟ ಶಾಂತಂ ಪಾಪಂ

ಶಕಾರ (ನಗುತ್ತಾನೆ )

ವಿಟ ನಗು ನಗು ಹೊಟ್ಟೆತುಂಬ ನಗು
ನಿನಗೆ ಬೇಸರಾದರೂ ನನಗೆ ಚಿಂತಿಲ್ಲ
ಸೋಲಿಗೆ ತಳ್ಳುವ ಮರ್ಯಾದೆಗೇಡಿ ಈ
ಪ್ರೀತಿಗೆ ಧಿಕ್ಕಾರವಿರಲಿ
ಇನ್ನೆಂದು ನಿನ್ನ ಸಹವಾಸ ನನಗೆ ಬರದಿರಲಿ
ಹೆದೆ ಮುರಿದ ಬಿಲ್ಲಿನಂತೆ
ನಿರ್ಗುಣನಾದ ನಿನ್ನನ್ನು ತೊರೆಯುತಿದ್ದೇನೆ ॥ ೪೧ ॥

ಶಕಾರ ಭಾವಯ್ಯ, ಶಮಾಧಾನ, ಶಮಾಧಾನ ಭಾರಯ್ಯ, ತಾವರೆಕೊಳದಲ್ಲಿ ಈಜಾಡೋಣ

ವಿಟ · ನಾನು ಪತಿತನಿರದಿದ್ದರೂ
ನಿನ್ನ ಒಡನಾಟದಿಂದಾಗಿ
ಪತಿತನಂತೆಯೆ ಕಾಣುವರು
ನನ್ನನೂ ಲೋಕದ ಜನ
ಪೇಟೆಯ ಹೆಣ್ಮಕ್ಕಳ ಕಣ್ಣಿಗೆ ಬಿದ್ದರೆ ನೀನು
ದುಗುಡದಿಂದವರು ಕಣ್ಣು ಕೆಕ್ಕರಿಸಿ
ಅರೆನೋಟವನ್ನಷ್ಟೆ ನಿನ್ನೆಡೆಗೆ ಬೀರುವರು
ಅಂಥ ಹೆಣ್‌ಗೊಲೆಗಡಕ ನಿನ್ನನ್ನು ನಾನು
ಇನ್ನು ಬೆಂಬತ್ತುವುದು ಸಾಧ್ಯವೇನು? ॥ ೪೨ ॥

(ದೈನ್ಯದಿಂದ) ವಸಂತಸೇನೆ,

ಇನ್ನೊಂದು ಜನ್ಮದಲಿ ನೀನು ಓ ಸುಂದರಿ
ಹುಟ್ಟದಿರು ಸೂಳೆಯಾಗಿ
ಗುಣನಡೆಗೆ ಹೆಸರಾದ ಚೆಂದುಳ್ಳ ಕುಲದಲ್ಲಿ
ಹುಟ್ಟವ್ವ ನೀನು ಮುತ್ತೈದೆಯಾಗಿ || ೪೩ ||

**ಶಕಾರ** ನನ್ನ ಹಳೆಯ ಹೂದೋಟ ಪುಷ್ಪಕರಂಡಕದಲ್ಲಿ ವಶಂತಶೇನೆಯನ್ನು ಕೊಂದು ಎಲ್ಲಿಗೆ ಓಡುತ್ತೀ? ಬಾ, ನನ್ನಕ್ಕನ ಗಂಡನ ಮುಂದೆ ವಿಚಾರಣೆ ಯನ್ನೆದುರಿಶು (ಎಂದು ಹಿಡಿಯುತ್ತಾನೆ )

**ವಿಟ** ಆಹ್, ದೂರ ನಿಲ್ಲು ಹೊಲೆಗೇಡಿ (ಎಂದು ಖಡ್ಗವನ್ನೆಳೆಯುತ್ತಾನೆ )

**ಶಕಾರ** (ಹೆದರಿ ದೂರ ಸರಿದು) ಏನಯ್ಯಾ, ಹೆದರಿಕೊಂಡೆಯಾ? ಹೋಗು ಹಾಗಾದರೆ

**ವಿಟ** (ಸ್ವಗತ) ಇಲ್ಲಿ ನಿಲ್ಲೋದು ತರವಲ್ಲ ಇರಲಿ ಆರ್ಯಶರ್ವಿಲಕ-ಚಂದನಕ ಮುಂತಾದವರು ಇದ್ದಲ್ಲಿಗೇ ನಾನೂ ಹೋಗಿ ಸೇರಿಕೊಳ್ತೇನೆ (ಎಂದು ಹೋಗುತ್ತಾನೆ )

**ಶಕಾರ** ಮಶಣಕ್ಕೆ ಹೋಗು ಏಯ್ ಷ್ಥಾವರಕ, ಮಗೂ, ನಾನು ಮಾಡಿದ್ದು ಹೇಗಾಯಿತು?

**ಚೇಟ** . ಅಯ್ಯ, ಬಹಳ ದೊಡ್ಡ ಅನ್ಯಾಯ ಆಯಿತು

**ಶಕಾರ** ಅರೆ ಚೇಟ, ಏನಂದಿ? ಅನ್ಯಾಯ ಆಯಿತೂಂತೀಯಾ? ಇರಲಿ ಹೀಗೆ ಮಾಡೋಣ (ಮೈಯ ಆಭರಣಗಳನ್ನು ಕಳಚಿ) ತಗೋ ಈ ಆಭರಣಗಳನ್ನು ನಾನಂತು ನಿನಗೆ ಕೊಟ್ಟಿದ್ದೇನೆ ನಾನು ತೊಟ್ಟುಕೊಳ್ಳುವಷ್ಟು ಸಮಯ ನನ್ನದು ಉಳಿದಾಗೆಲ್ಲ ನಿನ್ನದು

**ಚೇಟ** ಇವನ್ನು ಅಯ್ಯ ತೊಟ್ಟರೇನೇ ಒಂದು ಚಂದ ಇವುಗಳನ್ನು ಕಟ್ಟಿ ಕೊಂಡು ನಾನೇನು ಮಾಡೋದು?

**ಶಕಾರ** ಹಾಗಾದರೆ ಹೋಗು ಈ ಎತ್ತುಗಳನ್ನು ಹಿಡಕೊಂಡು ಹೋಗಿ, ಆ ಕೆಳ ಉಪ್ಪರಿಗೆಯ ಕಡೆಗಟ್ಟಿನಲ್ಲಿ ನಿಂದಿರು ನಾನೂ ಈಗ ಬಂದು ಬಿಟ್ಟೆ

**ಚೇಟ** ಅಪ್ಪಣೆ ಅಯ್ಯ (ಎಂದು ಹೋಗುತ್ತಾನೆ )

**ಶಕಾರ** ತನ್ನನ್ನು ಪಾರುಮಾಡುವ ಭರದಲ್ಲಿ ಭಾವ ಕಣ್ಮರೆಯಾದ ಈ ಚೇಟನನ್ನೂ ಕೆಳ ಉಪ್ಪರಿಗೆಯ ಕಡೆಗಟ್ಟಿನಲ್ಲಿ ಬೇಡಿ ಹಾಕಿ ಕೂಡಿಶಿಬಿಡ್ತೇನೆ ಆ?ಘುಗಾಬಟ್ಟುಬಾಹಜ್ಯಾಗಿಯೆ ಉಳಿಯುತ್ತೆ ಹಾಗಾದರೆ ಈಗ ಹೋಗೋಣ ಅಥವಾ ಇವಳನ್ನೊಮ್ಮೆ ನೋಡಬೇಕು: ಪೂರಾ ಶತ್ತಿದ್ದಾಳಾ, ಇಲ್ಲ, ಇನ್ನೊಮ್ಮೆ ಕೊಲ್ಲಬೇಕೋ ಎಂತ (ನೋಡಿ) ಓ, ಪೂರಾ ಶತ್ತಿದ್ದಾಳೆ

ಇರಲಿ ಈ ಶಾಲನ್ನು ಇವಳ ಮೇಲೆ ಹೊದೆಶಿಬಿಡ್ತೇನೆ ಅಥವ, ಇದರಲ್ಲಿ ನನ್ನ ಹೆಶರು ಅಚ್ಚು ಮಾಡಿದೆ ಯಾರಾದರೂ ಬುದ್ಧಿವಂತ ಪತ್ತೆಹಚ್ಚಿ ಬಿಟ್ಟಾನು ಇರಲಿ ಗಾಳಿಗೆ ಇಲ್ಲಿ ರಾಶಿಬಿದ್ದ ತರಗೆಲೆಗಳಿಂದ ಮುಚ್ಚಿಬಿಡ್ತೇನೆ (ಹಾಗೆಯೆ ಮಾಡಿ, ಯೋಚಿಸಿ) ಇರಲಿ ಹೀಗೆ ಮಾಡೋಣ ಈಗ ಮೊದಲು ನ್ಯಾಯಾಲಯಕ್ಕೆ ಹೋಗಿ ಖಟ್ಲೆ ದಾಖಲು ಮಾಡಿಶೋದು ದುಡ್ಡಿನ ಆಶೆಯಿಂದ ಚಾರುದತ್ತ ನೆಂಬ ವ್ಯಾಪಾರಿ ನನ್ನ ಹಳೆಯ ಹೋದೋಟ ಪುಷ್ಪಕರಂಡಕಕ್ಕೆ ಬಂದು ವಶಂತಶೇನೆಯನ್ನು ಕೊಂದಿದ್ದಾನೆ ಎಂದು ಬರೆಶಿ ಬಿಡೋದು

ಚಾರುದತ್ತನನು ಶದೆಬಡಿಯಲಿಕ್ಕೆ
ಹೂಡಬೇಕಾಗಿಹುದು ಹೊಶತೊಂದು ಹೂಟ
ಶಾಂತ ಜೀವನದ ಈ ಚೊಕ್ಕ ಪೇಟೆಯಲಿ
ಭಾರಿ ಪಶುಬಲಿಯೊಂದು ನಡೆಯಬೇಕು ॥ ೪೪ ॥

ಇರಲಿ ಹೋಗುತ್ತೇನೆ (ಎಂದು ಹೊರಟು, ಎದುರು ನೋಡಿ ಹೆದರಿಕೊಂಡು) ಅಯ್ಯಪ್ಪೋ, ಮಾದೇವಿ, ನಾನು ಯಾವ ದಾರಿಯಲ್ಲಿ ಹೋದರೂ ಇವನೊಬ್ಬ ಕೆಟ್ಟ ಬೈರಾಗಿ ಕಾವಿ ಮುಳುಗಿಶಿದ ಶಾಟಿ ಹಿಡಕೊಂಡು ಎದುರು ಬರ್ತಾ ಇದಾನೆ ನಾನು ಹಿಂದೆ ಇವನನ್ನು ಮೂಗು ಕತ್ತರಿಶಿ ಹೊರ ದಬ್ಬಿದ್ದೆ ಈಗ ನನ್ನನ್ನು ನೋಡಿಬಿಟ್ಟರೆ ಆ ಹಿಂದಣ ಹಗೆಯಿಂದ ಇವನು, ನಾನೇ ಇವಳನ್ನು ಕೊಂದದ್ದೆಂದು ಎಂದಾದರೂ ಬಹಿರಂಗ ಮಾಡಿ ಬಿಟ್ಟಾನು ಈಗ ಹೇಗೆ ಹೋಗೋದು? (ನೋಡಿ) ಇರಲಿ ಇಲ್ಲಿ ಅರೆ ಜರಿದ ಈ ತುಂಡುಪಾಗಾರವನ್ನು ಹತ್ತಿ ಹಾರಿ ಹೋಗುತ್ತೇನೆ

ಬಾನಲ್ಲಿ ನೆಲದಲ್ಲಿ ಪಾತಾಳದಲ್ಲಿ
ಹಾಗೆಯೇ ಹನುಮಂತ ಬೆಟ್ಟದಲ್ಲಿ
ಮತ್ತೆ ಲಂಕಾನಗರದಟ್ಟದಲ್ಲಿ
ಹಾಯಾಗಿ ಹಾರುವ ಮಹೇಂದ್ರನಂತೆ
ಬಲುಬೇಗ ನಾನೀಗ ಹೋಗಬೇಕು ॥ ೪೫ ॥

(ಎಂದು ಹೋಗುತ್ತಾನೆ )

**ಸಂವಾಹಕ ಭಿಕ್ಷು** (ತೆರೆಯನ್ನು ತಳ್ಳಿ ಪ್ರವೇಶಿಸಿ) ಈ ಶಾಟಿಯ ಕಂತೆಯನ್ನು ತೊಳೆದದ್ದಾಯಿತು ಇದನ್ನು ಈ ಮರದ ಟೊಂಗೆಯಲ್ಲಿ ಒಣಗಿಸಲೆ? ಇಲ್ಲಿ ಮಂಗಗಳು ಕಿತ್ತುಬಿಟ್ಟಾವು ನೆಲದಲ್ಲಿ ಆರಿಸಲೆ? ಧೂಳಾಗುತ್ತೆ ಎಲ್ಲಿ ಆರಿಸಿ ಒಣಗಿಸಲಿ? (ನೋಡಿ) ಇರಲಿ ಇಲ್ಲಿ ಗಾಳಿಗೆ ಒಟ್ಟಿದ ಈ ಒಣಗೆಲೆಯ ರಾಶಿಯ ಮೇಲೆ ಆರಿಸ್ತೇನೆ (ಹಾಗೆಯೆ ಮಾಡಿ) ಬುದ್ಧಂ ಸರಣಂ ಗಚ್ಛಾಮಿ (ಎಂದು ಕುಳಿತುಕೊಳ್ಳುತ್ತಾನೆ ) ಇರಲಿ ಧಮ್ಮಪದಗಳನ್ನಾದರೂ ಪಠಿಸುತ್ತೇನೆ:

ಐದು ಜನ ಕಳ್ಳರನು ಕೊಂದವನು
ಹೆಣ್ಣನ್ನು ಕೊಂದು ಮನೆಯುಳಿಸಿದವನು

ಮತ್ತೆ ಬೆಂಬಲವಿರದ ಮಾದಿಗನ ಕೊಂದವನು
ಖಂಡಿತಕು ಅಂಥವನು ಸ್ವರ್ಗ ಪಡೆಯುವನು (೮/ ೨)

ಅಥವಾ ಸದ್ಯಕ್ಕೆ ನನಗೆ ಈ ಸ್ವರ್ಗವೂ ಬೇಡಾಗಿದೆ ಬುದ್ಧೋಪಾಸಿಕೆಯಾದ ವಸಂತಸೇನೆಗೆ ಪ್ರತ್ಯುಪಕಾರ ಮಾಡೋ ತನಕ ನನಗೆ ಸಮಾಧಾನ ಇಲ್ಲ ಹತ್ತು ನಾಣ್ಯಗಳಿಗಾಗಿ ಜೂಜುಕೋರರ ಕೈಯಲ್ಲಿ ನಾನು ಸಿಕ್ಕಿಬಿದ್ದಾಗ ಆಕೆ ಪಾರುಮಾಡಿದಳು ಅಂದಿನಿಂದ ನನ್ನನ್ನು ಆಕೆಗೇ ಮಾರಿಕೊಂಡಂತಾಗಿದೆ ಮೊದಲು ಈ ಋಣದಿಂದ ಮುಕ್ತನಾಗಬೇಕು (ನೋಡಿ) ಏನಿದು, ಎಲೆಗಳ ನಡುವೆ ಏನೋ ನಲುಗಾಟ! ಅಥವಾ–

ಗಾಳಿಗೆ ಬಿಸಿಲಿಗೆ ಒಣಗಿ ಆ ಮೇಲೆ
ಶಾಟಿಯ ನೀರಿಗೆ ನೆನೆದ ಈ ಎಲೆಗಳು
ಮೆಲ್ಲನೆ ಹಕ್ಕಿಯ ರಕ್ಕೆಗಳಂತೆ
ಅಲ್ಲೆ ಊದಿಕೊಂಡು ನಲುಗುತ್ತಿವೆ ॥ ೪೬ ॥

(ವಸಂತಸೇನೆ ಸನ್ನೆ ಬಂದು ಕೈ ತೋರಿಸುತ್ತಾಳೆ)

**ಭಿಕ್ಷು** ಹಾಯ್ ಹಾಯ್, ಅಪ್ಪಟ ಚಿನ್ನದ ಬಳೆ ತೊಟ್ಟ ಹೆಣ್ಣು ಕೈಯೊಂದು ಮೇಲೆ ಬರ್ತಾ ಇದೆ ಅರೆ ಏನಿದು? ಎರಡನೆಯ ಕೈಕೂಡ! (ಬಹುವಿಧದಿಂದ ಪರೀಕ್ಷಿಸಿ) ಎಲ್ಲೋ ನೋಡಿದ ಪರಿಚಯದ ಕೈಯಂತಿದೆ ಅಥವಾ ವಿಚಾರ ಎಂಥದು? ಖಂಡಿತವಾಗಿಯೂ ಇದು ನನಗೆ ಅಭಯದಾನ ಮಾಡಿದ ಅದೇ ಕೈ ಇರಲಿ ನೋಡೋಣ (ನಾಟ್ಯದಿಂದ ತರಗೆಲೆಗಳನ್ನು ತೆಗೆದು, ನೋಡಿ, ಗುರುತಿಸಿ) ಬುದ್ಧೋಪಾಸಿಕೆಯಾದ ಆಕೆಯೇ ಹೌದು

**ವಸಂತಸೇನೆ** (ನೀರು ಬಯಸುತ್ತಾಳೆ)

**ಭಿಕ್ಷು** ಏನು, ನೀರು ಕೇಳ್ತಾ ಇದಾಳೆ ಕೆರೆಯೂ ದೂರದಲ್ಲಿದೆ ಈಗೇನು ಮಾಡೋದು? ಇರಲಿ ಈ ಶಾಟಿಯನ್ನು ಆಕೆಯ ಮೇಲೆ ಹಿಂಡ್ತೇನೆ (ಹಾಗೆಯೆ ಮಾಡುತ್ತಾನೆ)

**ವಸಂತಸೇನೆ** (ಸನ್ನೆ ಬಂದು ಎದ್ದು ಕೂಡುತ್ತಾಳೆ)

**ಭಿಕ್ಷು** · (ಬಟ್ಟೆಯ ತುದಿಯಿಂದ ಗಾಳಿ ಬೀಸುತ್ತಾನೆ)

**ವಸಂತಸೇನೆ** ಆರ್ಯ, ಯಾರು ನೀನು?

**ಭಿಕ್ಷು** . ಹತ್ತು ನಾಣ್ಯಗಳಿಗೆ ನನ್ನನ್ನು ಕೊಂಡ ಬುದ್ಧೋಪಾಸಿಕೆಗೆ ನನ್ನ ನೆನಪಿಲ್ಲವಾ?

**ವಸಂತಸೇನೆ** ನೆನಪಿದೆ ಆದರೆ ಆರ್ಯ ಹೇಳಿದ ರೀತಿಯಲ್ಲಿ ಅಲ್ಲ ನಾನು ಸತ್ತೇ ಹೋಗಿದ್ದರೆ ಚನ್ನಾಗಿತ್ತು

**ಭಿಕ್ಷು** ಬುದ್ಧೋಪಾಸಿಕೆ, ಇದೆಲ್ಲ ಏನು?

**ವಸಂತಸೇನೆ** ಸೂಳೆಯರಿಗೆ ತಕ್ಕುದಾದ ಪಾಡು!

**ಭಿಕ್ಷು** ಈ ಮರದ ಸಮೀಪದಲ್ಲಿ ಇಳಿಬಿದ್ದ ಬಳ್ಳಿಯನ್ನು ಆತು ಎದ್ದು ನಿಲ್ಲು ಬುದ್ಧೋಪಾಸಿಕೆ (ಎಂದು ಬಳ್ಳಿಯನ್ನು ಬಗ್ಗಿಸಿಕೊಡುತ್ತಾನೆ )

**ವಸಂತಸೇನೆ** (ಹಿಡಿದು ಎದ್ದು ನಿಲ್ಲುತ್ತಾಳೆ )

**ಭಿಕ್ಷು** ಪಕ್ಕದ ಬುದ್ಧ ವಿಹಾರದಲ್ಲಿ ನನ್ನ ಧರ್ಮಭಗಿನಿ ಇದ್ದಾಳೆ ಅಲ್ಲಿ ಒಂದಿಷ್ಟು ವಿಶ್ರಮಿಸಿ ನೆಮ್ಮದಿ ಪಡೆದು ಮತ್ತೆ ಬುದ್ಧೋಪಾಸಿಕೆ ಮನೆಗೆ ಹೋಗಬಹುದು (ಎಂದು ಹೆಜ್ಜೆಯಿಡುತ್ತಾನೆ ಮುಂದೆ ನೋಡಿ) ದಾರಿ ಬಿಡಿ ಅಯ್ಯಾ ದಾರಿ ಬಿಡಿ ಈಕೆ ಹರೆಯದ ಹುಡುಗಿ ಈತ ಬುದ್ಧಭಿಕ್ಷು ಹೀಗೆ ನನ್ನದು ಶುದ್ಧ ಧರ್ಮಮಾರ್ಗ

ಕೈಬಾಯಿಗಳ ಕಟ್ಟಿ
ಮತ್ತೆ ಇಂದ್ರಿಯಗಳನು ಬಿಗಿದಿಟ್ಟುಕೊಂಡವನು
ನಿಜವಾದ ಮಾನವ
ಅಂಥವಗೆ ಕಾನೂನು ಏನು ಮಾಡೀತು?
ಪರಲೋಕ ಕೂಡ ಅವನ ಕೈಗಂಟು ॥ ೪೭ ॥

(ಎಂದು ಎಲ್ಲರೂ ಹೋಗುತ್ತಾರೆ )

**"ದಾಳಿಗೆ ತುತ್ತಾದ ವಸಂತಸೇನೆ" ಎಂಬ**

**ಎಂಟನೆಯ ಅಂಕ**

**ಮುಗಿಯಿತು**

ಅಂಕ . ಒಂಬತ್ತು

## ನ್ಯಾಯಾಲಯದಲ್ಲಿ ವಿಚಾರಣೆ

(ಪ್ರವೇಶ: ಶೋಧನಕ)

**ಶೋಧನಕ** ನ್ಯಾಯಾಲಯದ ಅಧಿಕಾರಿಗಳು ಅಪ್ಪಣೆ ಮಾಡಿದ್ದಾರೆ: "ಶೋಧನಕ, ನ್ಯಾಯಾಲಯಕ್ಕೆ ಹೋಗಿ ಆಸನಗಳನ್ನು ಅಣಿಗೊಳಿಸು" ಎಂದು ಅದರಿಂದ ವಿಚಾರಣಾಲಯವನ್ನು ಸಜ್ಜುಗೊಳಿಸುತ್ತೇನೆ (ಹೆಜ್ಜೆಹಾಕಿ ನೋಡಿ) ಇದು ನ್ಯಾಯಾಲಯ, ಪ್ರವೇಶಿಸುತ್ತೇನೆ (ಪ್ರವೇಶಿಸಿ, ಕಸ ಸಾರಿಸಿ, ಆಸನ ಇಟ್ಟು) ನ್ಯಾಯಾಲಯವನ್ನು ಗುಡಿಸಿ ಸ್ವಚ್ಚಗೊಳಿಸಿದ್ದಾಯಿತು ಆಸನಗಳನ್ನು ಅಣಿಗೊಳಿಸಿದ್ದೂ ಆಯಿತು ಯಾವುದಕ್ಕು )ನ್ಯಾಯಾಧೀಶರಿಗೆ ಹೋಗಿ ತಿಳಿಸ್ತೇನೆ (ಹೆಜ್ಜೆ ಹಾಕಿ, ನೋಡಿ) ಏನಿದು, ರಾಜನ ಭಾವಮೈದ ಈ ದುಷ್ಟ ಮೂರ್ಖಮನುಷ್ಯ ಇತ್ತ ಕಡೆಗೆಯೆ ಬರುತ್ತಿದ್ದಾನೆ ಅವನ ಕಣ್ಣು ತಪ್ಪಿಸಿ ಹೋಗ್ತೇನೆ (ಎಂದು ಮರೆಯಲ್ಲಿ ನಿಲ್ಲುತ್ತಾನೆ )

(ಪ್ರವೇಶ: ಭರ್ಜರಿ ಪೋಷಾಕು ತೊಟ್ಟ ಶಕಾರ )

**ಶಕಾರ** ತಣ್ಣೇರಿನ ನೀರಿನ ಜಲದಲ್ಲಿ ಮಿಂದು
ಉದ್ಯಾನದ ಹೂದೋಟದ ಕಾಡಿನಲಿ ಕುಳಿತೆ
ಹೆಣ್ಮಕ್ಕಳ ಹೆಂಗಸರ ಹುಡುಗಿಯರ ಜತೆಗೆ
ಚೆಲುವಾದ ಮೈಯಿಂದ ಗಂಧರ್ವನಂತೆ ॥ ೧ ॥

ಒಮ್ಮೆ ತಲೆಶೂಡಿ, ಇನ್ನೊಮ್ಮೆ ಜುಟ್ಟುಜಡೆ
ಇಳಿಗೂದಲೊಮ್ಮೊಮ್ಮೆ, ಗುಂಗುರಿನ್ನೊಮ್ಮೆ
ಒಮ್ಮೆ ಕೂದಲು ಬಿಟ್ಟು ಮತ್ತೊಮ್ಮೆ ಮೇಲಕೆ ಕಟ್ಟಿ
ರಾಜನ ಭಾವಮೈದ
ನನ್ನ ಈ ವೇಷವ್ರೋ ಅಚ್ಚರಿಯೊಳಚ್ಚರಿ ॥ ೨ ॥

ಅಲ್ಲದೆ– ವಿಷದ ಬೇರಿನೊಳಗೆ ಶಿಕ್ಕಿಕೊಂಡ ಹುಳುವಿನಂತೆ ಹೊರಕ್ಕೆ ಬರಲು ಎಡೆ ಹುಡುಕುತಿದ್ದ ನನಗೆ ದೊಡ್ಡದೊಂದು ಹೊರದಾರಿ ಶಿಕ್ಕಿಬಿಟ್ಟಿತು ಈಗ ಈ ಪಾತಕದ ಹೊಣೆಯನ್ನು ಯಾರ ಮೇಲೆ ಹೊರಿಶಲಿ? (ನೆನಪಿಸಿಕೊಂಡು) ಞ್ಲಂ ನೆನಪಾಯಿತು ಆ ದರಿದ್ರ ಚಾರುದತ್ತನ ಮೇಲೆ ಈ ಪಾತಕದ ಹೊಣೆಯನ್ನು ಹೊರಿಶುತ್ತೇನೆ ಅಷ್ಟೆ ಅಲ್ಲ, ಅವನೀಗ ದಟ್ಟದರಿದ್ರನಾಗಿದ್ದಾನೆ ಅವನ ಮೇಲೆ ಏನು ಆರೋಪ ಹಾಕಿದರೂ ನಡಿಯುತ್ತೆ ಇರಲಿ ನ್ಯಾಯಾಲಯಕ್ಕೆ ಹೋಗಿ ಮೊದಲು ದೂರು ದಾಖಲು ಮಾಡಬೇಕು: ಚಾರುದತ್ತ ವಶಂತಶೇನೆಯ ಕತ್ತು ಹಿಚುಕಿ ಕೊಲೆ ಮಾಡಿದ್ದಾನೇ ಅಂತ ಯಾವುದಕ್ಕು ನ್ಯಾಯಾಲಯಕ್ಕೆ ಹೋಗುತ್ತೇನೆ (ಹೆಜ್ಜೆಹಾಕಿ ನೋಡಿ) ಇದೇ

ನ್ಯಾಯಪೀಠ ಒಳಗೆ ಹೋಗುತ್ತೇನೆ (ಹೊಕ್ಕು ನೋಡಿ) ಏನು, ಆಸನಗಳೆಲ್ಲ ಸಜ್ಜಾಗಿವೆ ನ್ಯಾಯಪೀಠದ ಅಧಿಕಾರಿಗಳು ಬರೋ ತನಕ ಈ ಅಂಗಳದ ಗರಿಕೆಹುಲ್ಲಿನ ಹಾಸೆಯ ಮೇಲೆ ಕೂತು ದಾರಿ ಕಾಯುತ್ತೇನೆ (ಹಾಗೆಯೆ ಮಾಡುತ್ತಾನೆ )

**ಶೋಧನಕ** (ಬೇರೆಡೆಯಿಂದ ನಡೆದು ಬಂದು, ಎದುರು ನೋಡಿ) ಓ, ನ್ಯಾಯಾಧೀಶರು ಬರ್ತಾ ಇದಾರೆ ನಾನು ಅವರ ಬಳಿ ಹೋಗ್ತೇನೆ (ಎಂದು ಅತ್ತ ಹೋಗುತ್ತಾನೆ )

(ಪ್ರವೇಶ: ಸೆಟ್ಟಿ-ಕಾಯಸ್ಥ ಮುಂತಾದವರಿಂದ ಪರಿವೃತನಾದ ನ್ಯಾಯಾಧೀಶ )

**ನ್ಯಾಯಾಧೀಶ** ಅಯ್ಯಾ ಸೆಟ್ಟಿ ಮತ್ತು ಕಾಯಸ್ಥರೆ,

**ಸೆಟ್ಟಿ–ಕಾಯಸ್ಥ** ಏನಪ್ಪಣೆ ಸ್ವಾಮಿ?

**ನ್ಯಾಯಾಧೀಶ** ಕಾನೂನಿನ ಕೈಗೊಂಬೆಯಾಗಿ ನಡೆಯಬೇಕಾದ ನ್ಯಾಯಾಧೀಶರಿಗೆ ಯಾರ ಹೃದಯ ಹೇಗೆ ಎಂದು ತಿಳಿಯೋದೇ ಕಷ್ಟವಯ್ಯಾ–

ನ್ಯಾಯ–ಸತ್ಯಗಳನ್ನು ದೂರಕ್ಕೆ ತಳ್ಳಿ
ಕಪಟನೆಪವನ್ನೊಡ್ಡಿ ಇಲ್ಲಿಗೆ ಬರುತ್ತಾರೆ!
ಯಾವುದೋ ಆಸೆ ಆಮಿಷಗಳಿಗೆ ಬಲಿಯಾಗಿ
ತಮ್ಮ ತಪ್ಪುಗಳನ್ನು ಮುಚ್ಚಿಡುತ್ತಾರೆ!
ಕಾನೂನು ಒಂದು ಕಡೆ, ಸತ್ಯ ಇನ್ನೊಂದು ಕಡೆ
ವಾದಿ ಪ್ರತಿವಾದಿಗಳ ವಾದ ಬೆಳೆಯುತ್ತದೆ
ತಪ್ಪುತೀರ್ಪಿನ ದೋಷ ರಾಜನಿಗೆ ತಟ್ಟುವುದು
ಒಟ್ಟಿನಲಿ ಈ ನ್ಯಾಯದರ್ಶಿಗಳ ಬದುಕಿನಲಿ
ಅಗ್ಗದಲಿ ಅಪವಾದ; ಹೊಗಳಿಕೆಯೊ ದೂರ || ೩ ||

ಅಲ್ಲದೆ–

ಸಿಟ್ಟಿನಬ್ಬರದಲ್ಲಿ ನ್ಯಾಯವನು ಕೈಬಿಟ್ಟು
ಎಲ್ಲಿಂದಲೋ ಹೆಕ್ಕಿ ಹುಡುಕಿ ಹೇಳುತ್ತಾರೆ
ತಮ್ಮ ಎದುರಾಳಿಗಳ ದೋಷವನ್ನು
ಈ ಪಕ್ಷ, ಆ ಪಕ್ಷ, ಯಾ ಪಕ್ಷ ಹಿಡಿದರೂ
ಎಲ್ಲವೂ ಪಾತಕದ ಒಂದೊಂದು ಮುಖಗಳು
ಸಜ್ಜನರು ಕೂಡ ಈ ಸುಳಿಗೆ ಸಿಕ್ಕಿ
ನ್ಯಾಯಪೀಠದ ಮುಂದೆ ತಮ್ಮ ತಪ್ಪುಗಳನ್ನು
ಮುಚ್ಚಿಡಲು ಹೋಗಿ ದಾರಿ ತಪ್ಪುತ್ತಾರೆ
ಒಟ್ಟಿನಲಿ ಈ ನ್ಯಾಯದರ್ಶಿಗಳ ಬದುಕಿನಲಿ
ಅಗ್ಗದಲಿ ಅಪವಾದ; ಹೊಗಳಿಕೆಯೊ ದೂರ || ೪ ||

ಏಕೆಂದರೆ, ನ್ಯಾಯಾಧೀಶನೆಂದರೆ–

ಕಾನೂನು ಬಲ್ಲವನು
ಕಪಟದ ಸುಳಿವನ್ನು ತಳದಲ್ಲೆ ಹಿಡಿವವನು
ಮಾತಿನಲಿ ಬಲ್ಲಿದನು
ಸಿಟ್ಟು–ಸೆಡವುಗಳನ್ನು ತಡೆಹಿಡಿಯಬಲ್ಲವನು
ಗೆಳೆಯ ಹಗೆ ನಮ್ಮವನು ಪರಕೀಯನೆಂದೆಂಬ
ಪರಿಭೇದ ಇರದವನು
ನಡೆದ ಘಟನೆಗಳನ್ನು ಮಾತ್ರ ಗಮನಕೆ ತಂದು
ತೀರ್ಪು ಕೊಡುವವನು
ದುರ್ಬಲರ ಕಡೆ ನಿಂತು ದುರ್ಜನರ ದಂಡಿಸುವವನು
ನ್ಯಾಯಕ್ಕೆ ಧರ್ಮಕ್ಕೆ ಸರಿಯಾಗಿ ನಡೆವವನು
ಲಂಚಕ್ಕೆ ಕೈನೀಡದವನು
ಸತ್ಯದನ್ವೇಷಣೆಗೆ ತೆರೆದ ಬಾಗಿಲಿನಂತೆ
ದೀಕ್ಷೆ ತೊಟ್ಟವನು
ಈ ಎಲ್ಲದರ ನಡುವೆ
ರಾಜ ಕೋಪಿಸದಂತೆ ಎಚ್ಚರಿರುವವನು || ೫ ||

**ಶ್ರೇಷ್ಠಿ–ಕಾಯಸ್ಥ** ಅಯ್ಯಾ, ತಮ್ಮ ಗುಣಗಳನ್ನೆ ತಾವು ದೋಷ ಎನ್ನುತಿದ್ದೀರಿ ಹಾಗಾದರೆ ಬೆಳದಿಂಗಳಲ್ಲೆ ಕತ್ತಲು ಎಂದು ಕೊರಗಬೇಕಾದೀತು

**ನ್ಯಾಯಾಧೀಶ** ಭದ್ರ ಶೋಧನಕ, ನ್ಯಾಯಪೀಠದ ದಾರಿ ತೋರಿಸು

**ಶೋಧನಕ** ಬರಬೇಕು ಬರಬೇಕು, ನ್ಯಾಯಾಧೀಶರು ದಯಮಾಡಿಸಬೇಕು

(ಎಂದು ನಡೆದು ಹೋಗುತ್ತಾರೆ)

**ಶೋಧನಕ** ಇದು ನ್ಯಾಯಪೀಠ ನ್ಯಾಯಾಧಿಕಾರಿಗಳು ಪ್ರವೇಶಿಸಬೇಕು (ಎಲ್ಲರೂ ಪ್ರವೇಶಿಸುತ್ತಾರೆ)

**ನ್ಯಾಯಾಧೀಶ** . ಭದ್ರ ಶೋಧನಕ, ಹೊರಗೆ ಹೋಗಿ ನೋಡಿಬಾ– ಯಾರು ಯಾರು ಕಾರ್ಯಾರ್ಥಿಗಳಾಗಿ ಬಂದಿದ್ದಾರೆ ಎಂದು

**ಶೋಧನಕ** ಅಪ್ಪಣೆ (ಎಂದು ಹೊರ ಬಂದು) ಸ್ವಾಮಿ, ನ್ಯಾಯಾಧೀಶರು ಕೇಳುತಿದ್ದಾರೆ: ಯಾರು ಯಾರು ಇಲ್ಲಿ ನ್ಯಾಯಾರ್ಥಿಗಳಾಗಿ ಬಂದಿದ್ದೀರಿ?

**ಶಕಾರ** : (ಸಂತಸದಿಂದ) ನ್ಯಾಯಾಧೀಶರು ಬಂದಾಗಿದೆ (ಠೀವಿಯಿಂದ ನಡೆದು ಬಂದು) ನಾನು ದೊಡ್ಮನುಷ್ಯ, ವಾಶುದೇವ, ರಾಜನ ಭಾವನಂಟ, ಅರಸನ ಹೆಂಡತಿಯ ತಮ್ಮ ನ್ಯಾಯಾರ್ಥಿ

**ಶೋಧನಕ** (ಗಲಿಬಿಲಿಗೊಂಡು) ಅಯ್ಯಯ್ಯೋ, ಮೊದಲೇ ರಾಜನ ಭಾವನಂಟ ಗಂಟುಬಿದ್ದನಲ್ಲ! ಇರಲಿ ಅಯ್ಯ, ಒಂದು ಕ್ಷಣ ಇರು ನ್ಯಾಯಾಧೀಶರಿಗೆ ಹೇಳಿ ಬರ್ತೇನೆ (ಒಳ ಬಂದು) ಸ್ವಾಮಿ, ರಾಜರ ಭಾವನಂಟ ಕಾರ್ಯಾರ್ಥಿಯಾಗಿ ಬಂದಿದ್ದಾನೆ

**ನ್ಯಾಯಾಧೀಶ** : ಏನು, ಮೊದಲೇ ರಾಜನ ಭಾವನಂಟ ಗಂಟುಬಿದ್ದನೆ? ಸೂರ್ಯ ಮೂಡುವಾಗಲೆ ಗ್ರಹಣ ಹಿಡಿದ ಹಾಗಾಯಿತು ಇದು ಯಾರೋ ಮಹಾಪುರುಷರ ಅಪಾಯದ ಸೂಚನೆ ಶೋಧನಕ, ಇವತ್ತು ಬಾಕಿ ಇರುವ ವಿಚಾರಣೆಗಳದ್ದೆ ತುಂಬ ರಗಳೆ ಉಂಟು ಭದ್ರ, ಹೋಗಿ ಹೇಳು: "ಹೋಗು, ಇವತ್ತು ನಿನ್ನ ವಿಚಾರಣೆ ನಡೆಯೋದಿಲ್ಲ" ಎಂತ

**ಶೋಧನಕ** ಅಪ್ಪಣೆ (ಎಂದು ಹೊರಬಂದು ಶಕಾರನ ಬಳಿ ಹೋಗಿ) ಅಯ್ಯಾ, ನ್ಯಾಯಾಧೀಶರು ಹೇಳಿದರು: ಈಗ ಹೋಗಬೇಕಂತೆ ಇವತ್ತು ನಿಮ್ಮ ವ್ಯವಹರಣೆ ನೋಡೋದಿಲ್ಲಾಂತೆ

**ಶಕಾರ** (ಕೋಪದಿಂದ) ಛೆ! ಏನು? ನನ್ನ ವ್ಯವಹರಣೆ ಇವತ್ತು ನೋಡೋ ದಿಲ್ಲವಾ? ನೋಡದೆ ಇದ್ರೆ, ನಾನು ನೋಡಿಕೊಳ್ತೇನೆ ನನ್ನ ಅಕ್ಕನ ಗಂಡ, ನನ್ನ ಭಾವನಂಟ, ಮಹಾರಾಜ ಪಾಲಕನ ಹತ್ತಿರ ಹೇಳಿ, ಅಕ್ಕನ ಹತ್ತಿರ, ತಾಯಿಯ ಹತ್ತಿರ ಹೇಳಿ ಈ ನ್ಯಾಯಾಧೀಶರನ್ನು ನಿವಾಳಿಶಿ ಇಲ್ಲಿ ಬೇರೆ ನ್ಯಾಯಾಧೀಶರನ್ನು ಇಡಿಶ್ತೇನೆ (ಎಂದು ಹೊರಡುತ್ತಾನೆ )

**ಶೋಧನಕ** ಅಯ್ಯ, ರಾಜರ ಭಾವನಂಟ, ಒಂದು ಕ್ಷಣ ಇರು ನ್ಯಾಯಾಧೀಶರಿಗೆ ಸಂಗತಿ ತಿಳಿಸ್ತೇನೆ (ನ್ಯಾಯಾಧೀಶರ ಬಳಿಬಂದು) ರಾಜರ ಭಾವನಂಟ ಸಿಟ್ಟುಗೊಂಡು ಹೀಗೆ ಹೇಳಿದ "ನನ್ನ ಅಕ್ಕನ ಗಂಡ, ನನ್ನ ಭಾವನಂಟ, ಮಹಾರಾಜ ಪಾಲಕನ ಹತ್ತಿರ ಹೇಳಿ, ಅಕ್ಕನ ಹತ್ತಿರ, ತಾಯಿಯ ಹತ್ತಿರ ಹೇಳಿ ಈ ನ್ಯಾಯಾಧೀಶರನ್ನು ನಿವಾಳಿಸಿ ಇಲ್ಲಿ ಬೇರೆ ನ್ಯಾಯಾಧೀಶರನ್ನು ಇಡಿಸ್ತೇನೆ"– ಹಾಗೇಂತ

**ನ್ಯಾಯಾಧೀಶ** ಈ ಮೂರ್ಖನಲ್ಲಿ ಯಾವುದೂ ಅಸಂಭವ ಅಲ್ಲ ಭದ್ರ, ಹೋಗು "ನಿನ್ನ ವ್ಯವಹರಣೆ ಇವತ್ತೆ ನೋಡ್ತಾರಂತೆ, ಬಾ" ಎಂದು ಹೇಳಿ ಕರಕೊಂಡು ಬಾ

**ಶೋಧನಕ** (ಶಕಾರನ ಬಳಿ ಬಂದು) ಅಯ್ಯ, ನ್ಯಾಯಾಧೀಶರು ಹೇಳಿದರು: ಇವತ್ತೆ ನಿನ್ನ ವ್ಯವಹರಣೆ ನೋಡ್ತಾರಂತೆ ಬರಬೇಕಂತೆ ಅಯ್ಯ, ಒಳಗೆ ಹೋಗು

**ಶಕಾರ** ಮೊದಲು ನೋಡೋದಿಲ್ಲ ಅಂದರು ಈಗ ನೋಡ್ತೇನೆ ಅಂತಿದಾರೆ ಪಾಪ, ನ್ಯಾಯಾಧೀಶರು ತುಂಬ ಹೆದರ್ಕೊಂಡು ಬಿಟ್ಟಿದ್ದಾರೆ ಈಗ ನಾನು ಏನು ಹೇಳಿದ್ರೂ ಅವರು ಸುಲಭವಾಗಿ ಒಪ್ಕೊಂಡು ಬಿಡ್ತಾರೆ ಇರಲಿ

ಹೋಗ್ತೇನೆ (ಪ್ರವೇಶಿಸಿ, ಸಮೀಪ ಬಂದು) ನಾವು ಶುಖವಾಗಿದ್ದೇವೆ ನಿಮಗೂ ಶುಖ ಕೊಡ್ತೇನೆ ಮತ್ತು ಕೊಡೋದಿಲ್ಲ ಕೂಡ

**ನ್ಯಾಯಾಧೀಶ** (ಸ್ವಗತ) ಉಫ್, ಎಂಥ ಕೆಟ್ಟ ಸಂಸ್ಕಾರದ ಮನುಷ್ಯ ಈತ! (ಪ್ರಕಾಶ) ಕೂತುಕೊ

**ಶಕಾರ** ಹ್ಹಾ ಇದು ನಮ್ಮದೇ ಜಾಗ ನನಗೆ ಎಲ್ಲಿ ಇಷ್ಟವೊ ಅಲ್ಲಿ ಕೂಡ್ತೇನೆ (ಶ್ರೇಷ್ಠಿಯನ್ನು ಕುರಿತು) ಇದೊ ಕೂಡ್ತೇನೆ (ಶೋಧನಕನನ್ನು ಕುರಿತು) ನಾನು ಇಲ್ಲಿ ಕೂಡ್ಲೇನು? (ಎಂದು ನ್ಯಾಯಾಧೀಶರ ತಲೆಯ ಮೇಲೆ ಕೈಯಿಟ್ಟು) ಇದೊ ಕೂತೆ (ಎಂದು ನೆಲದಲ್ಲಿ ಕೂಡುತ್ತಾನೆ)

**ನ್ಯಾಯಾಧೀಶ** ನೀನು ನ್ಯಾಯಾರ್ಥಿಯಾಗಿ ಬಂದವನೆ?

**ಶಕಾರ** . ಹೌದು

**ನ್ಯಾಯಾಧೀಶ** ಏನು ನಿನ್ನ ದೂರು– ಹೇಳು

**ಶಕಾರ** ದೂರು ಕಿವಿಯಲ್ಲಿ ಹೇಳ್ತೇನೆ ಕಳ್ಳಿನ ಪಾತ್ರೆಯ ಗಾತ್ರದ ದೊಡ್ಡ ಗೋತ್ರದಲ್ಲಿ ಹುಟ್ಟಿದವ ನಾನು

ನನ್ನ ತಂದೆಯು ಮಹಾರಾಜನಿಗೆ ಮಾವ
ನನ್ನ ತಂದೆಗೆ ಮಹಾರಾಜನಳಿಯ
ನಾನು ರಾಜನಿಗೆ ಖಾಸ ಭಾವನಂಟ
ನನ್ನ ಅಕ್ಕನ ಗಂಡ ನಮ್ಮ ರಾಜ ॥ ೬ ॥

**ನ್ಯಾಯಾಧೀಶ** ಎಲ್ಲ ಗೊತ್ತುಂಟು

ಕುಲದ ಹೆಗ್ಗಳಿಕೆ ಹೇಳಿಕೊಂಡೇನು ಫಲ?
ಒಳಗೆ ಇರಬೇಕಲ್ಲ ಒಳ್ಳೆಯತನ!
ಒಳ್ಳೆಯ ಹಸನಾದ ಗದ್ದೆಯಲಿ ಕೂಡ
ಹುಲುಸಾಗಿ ಬೆಳೆಯುವುದು ಮುಳ್ಳಿನ ಗಿಡ (೮/೨೯)

ಆದರಿಂದ ಬಂದ ಕೆಲಸ ಏನು ಅದನ್ನಷ್ಟು ಹೇಳು

**ಶಕಾರ** : ಆಯಿತು ಹೇಳ್ತೇನೆ: ನಾನು ತಪ್ಪು ಮಾಡಿದರೂ ರಾಜ ನನಗೇನೂ ಮಾಡೋದಿಲ್ಲ ಅದರಿಂದಲೆ ನನ್ನ ಅಕ್ಕನ ಗಂಡ ಮಹಾರಾಜ ಪ್ರೀತಿಯಿಂದ ನನಗೆ ವಿಹಾರಕ್ಕೆಂದು, ಮೇಲ್ವಿಚಾರಣೆ ನೋಡಲಿಕ್ಕೆಂದು ಹೂದೋಟಗಳಲ್ಲೆಲ್ಲ ಉತ್ತಮವಾದ ಹಳೆಯ ಉದ್ಯಾನ ಪುಷ್ಪಕರಂಡಕವನ್ನು ಕೊಟ್ಟಿದ್ದಾನೆ ಅದನ್ನು ನೋಡಿಕೊಳ್ಳೋದಕ್ಕಾಗಿ, ಒಣಗಿಸೋದಕ್ಕಾಗಿ, ಕಶ ತೆಗಿಶೋದಕ್ಕಾಗಿ, ನೀರು–ಗೊಬ್ಬರ ಹಾಕಿಶೋದಕ್ಕಾಗಿ, ಗಿಡ ಕತ್ತರಿಶೋದಕ್ಕಾಗಿ ನಾನು ದಿನಾ ಅಲ್ಲಿಗೆ ಹೋಗ್ತೇನೆ ಆಗ ದೈವಾತ್ ಅಲ್ಲಿ ಶತ್ತು ಬಿದ್ದ ಒಬ್ಬ ಹೆಂಗಶನ್ನು ಕಂಡೆ– ಅಥವಾ ಕಾಣಲಿಲ್ಲ.

**ನ್ಯಾಯಾಧೀಶ** . ಸತ್ತ ಹೆಂಗಸು ಯಾರು ಎಂದು ಗೊತ್ತೇನು?

**ಶಕಾರ** ಓಹೋ ನ್ಯಾಯಾಧೀಶರೆ, ಮೈತುಂಬ ಬಂಗಾರ ತೊಟ್ಟ, ಇಡಿಯ ಪೇಟೆಗೆ ಅಲಂಕಾರವಾಗಿದ್ದ ಅವಳ ಪರಿಚಯ ಇಲ್ಲದೆ ಉಂಟೆ? ದುಡ್ಡಿ ನಾಶೆಗೆ ಯಾರೋ ಘಟಿಂಗ ನಿರ್ಜನವಾಗಿದ್ದ ನನ್ನ ಹಳೆಯ ಹೂದೋಟ ಪುಷ್ಪಕರಂಡಕಕ್ಕೆ ಆಕೆಯನ್ನು ಕರಕೊಂಡು ಹೋಗಿ ತೋಳಿನಿಂದ ಹಿಚುಕಿ ಕೊಂದದ್ದು ನಾನಲ್ಲ (ಎಂದು ಅರ್ಧೋಕ್ತಿಯಲ್ಲೆ ಮೋರೆ ಮುಚ್ಚಿಕೊಳ್ಳುತ್ತಾನೆ )

**ನ್ಯಾಯಾಧೀಶ** . ಓಹ್, ನಗರಪಾಲಕರು ಎಂಥ ಅಜಾಗರೂಕತೆಯಿಂದ ನಡೆದುಕೊಂಡಿದ್ದಾರೆ! ಶ್ರೇಷ್ಠಿಗಳೆ, ಕಾಯಸ್ಥರೆ, ಈತನ ಹೇಳಿಕೆಯಲ್ಲಿ ಬಂದ 'ನಾನಲ್ಲ' ಎಂಬ ಒಕ್ಕಣೆಯನ್ನು ಮೊದಲು ಬರಕೊಳ್ಳಿ

**ಶ್ರೇಷ್ಠಿ–ಕಾಯಸ್ಥ** ಅಪ್ಪಣೆ (ಹಾಗೆ ಮಾಡಿ) ಸ್ವಾಮಿ, ಬರೆದಾಯಿತು

**ಶಕಾರ** (ಸ್ವಗತ) ಅಯ್ಯಯ್ಯೋ, ಅವಸರ ಹೆಚ್ಚಾಗಿ ಬಿಸಿ ಪಾಯಸಕ್ಕೆ ಬಾಯಿ ಹಾಕಿದಂತೆ ಈಗ ನಾನು ನನಗೇ ಕೇಡು ಮಾಡಿಕೊಂಡೆ ಇರಲಿ ಹೀಗೆ ಹೇಳ್ತೇನೆ: ಓಹೋಯ್, ನಾನಲ್ಲಿ ಹೋಗಿ ನೋಡಿದೆ ಎಂದು ಹೇಳ್ತಾ ಇದೇನೆ ಯಾಕೆ ಕೋಲಾಹಲ ಮಾಡ್ತಾ ಇದೀರಿ? (ಎಂದು ಕಾಲಿನಿಂದ ಬರೆದದ್ದನ್ನು ಅಳಿಸುತ್ತಾನೆ )

**ನ್ಯಾಯಾಧೀಶ** ದುಡ್ಡಿಗಾಗಿ ಆಕೆಯನ್ನು ಕತ್ತು ಹಿಚುಕಿ ಕೊಲ್ಲಲಾಗಿದೆ ಎಂದು ನಿನಗೆ ಹೇಗೆ ಗೊತ್ತಾಯಿತು?

**ಶಕಾರ** ಹಯ್ಯಯ್ಯ, ಬೋಳಾಗಿ ಊದಿಕೊಂಡ ಕುತ್ತಿಗೆ, ಆಭರಣದ ಕುಳಿವೇ ಇಲ್ಲದ ಬೋಳು ಬೋಳಾದ ಮೈಕೈಗಳಿಂದ

**ಶ್ರೇಷ್ಠಿ–ಕಾಯಸ್ಥ** ನ್ಯಾಯವಾದ ಮಾತು

**ಶಕಾರ** (ಸ್ವಗತ) ಅಯ್ಯಪ್ಪ, ಒಮ್ಮೆಗೆ ಬದುಕಿದೆ

**ಶ್ರೇಷ್ಠಿ–ಕಾಯಸ್ಥ** ಸ್ವಾಮಿ, ಈಗ ಈ ವಿಚಾರಣೆಗಾಗಿ ಯಾರನ್ನು ಅವಲಂಬಿಸಬೇಕಾಗಿದೆ?

**ನ್ಯಾಯಾಧೀಶ** ವ್ಯವಹರಣೆಯಲ್ಲಿ ಎರಡು ಬಗೆ ಉಂಟು

**ಶ್ರೇಷ್ಠಿ–ಕಾಯಸ್ಥ** ಯಾವುದೆಲ್ಲ?

**ನ್ಯಾಯಾಧೀಶ** ಬಂದ ದೂರಿನ ಮೇಲೆ ಒಂದು; ಮತ್ತು ನಡೆದ ಸಂಗತಿಗಳನ್ನು ಗಮನಿಸಿ ಒಂದು ದೂರಿನ ಮೇಲೆ ನಡೆಯುವ ವ್ಯವಹರಣೆ ವಾದಿ–ಪ್ರತಿವಾದಿಗಳ ನಡುವೆ ನಡೆದ ಸಂಗತಿಗಳನ್ನವಲಂಬಿಸಿ ನಡೆಯುವ ವ್ಯವಹರಣೆ ನ್ಯಾಯಾಧೀಶರ ವಿವೇಚನೆಯನ್ನೆ ಹೊಂದಿಕೊಂಡಿದೆ

**ಶ್ರೇಷ್ಠಿ–ಕಾಯಸ್ಥ** ಹಾಗಾದರೆ ಈ ವ್ಯವಹಾರದಲ್ಲಿ ವಸಂತಸೇನೆಯ ತಾಯಿಯನ್ನು ವಿಚಾರಿಸುವುದು ಅವಶ್ಯವಿದೆ

**ನ್ಯಾಯಾಧೀಶ** ಹೌದು; ಭದ್ರ ಶೋಧನಕ, ವಸಂತಸೇನೆಯ ತಾಯಿಯನ್ನು ಗಾಬರಿಗೊಳಿಸದೆ ಸಮಾಧಾನದಿಂದ ಕರೆದುಕೊಂಡು ಬಾ

**ಶೋಧನಕ** . ಆಗಲಿ (ಎಂದು ಹೊರಕ್ಕೆ ಹೋಗಿ, ವೇಶ್ಯೆಯ ತಾಯಿಯ ಜತೆ ಬಂದು) ಬ್ಯಾಮ್ಮ, ಬಾ

**ಮುದುಕಿ** ತನ್ನ ಯೌವನವನ್ನು ಅನುಭವಿಸಲೆಂದು ನನ್ನ ಮಗಳು ತನ್ನ ಗೆಳೆಯನ ಮನೆಗೆ ಹೋಗಿದ್ದಾಳೆ ಈ ಹುಡುಗ ಹೇಳ್ತಿದಾನೆ: ನ್ಯಾಯಾಧೀಶರು ಕರೀತಾ ಇದಾರೆ, ಬಾ ಅಂತ ಮನಸ್ಸು ಯಾಕೋ ತುಂಬ ಕಳವಳಗೊಂಡಿದೆ ಹೃದಯ ಕಂಪಿಸುತ್ತಿದೆ ಅಯ್ಯ, ನ್ಯಾಯಾಲಯದ ದಾರಿ ತೋರಿಸಪ್ಪ

**ಶೋಧನಕ** ಬ್ಯಾಮ್ಮ, ಬಾ (ಇಬ್ಬರೂ ನಡೆದು ಬರುತ್ತಾರೆ)

**ಶೋಧನಕ** · ಇದು ನ್ಯಾಯಪೀಠ ಒಳಗೆ ಹೋಗು ತಾಯಿ (ಇಬ್ಬರೂ ಪ್ರವೇಶಿಸುತ್ತಾರೆ)

**ಮುದುಕಿ** (ಹತ್ತಿರ ಬಂದು) ಪೂಜ್ಯರಾದ ನಿಮಗೆ ಸುಖವಾಗಲಿ

**ನ್ಯಾಯಾಧೀಶ** ಭದ್ರೆ, ಸ್ವಾಗತ ಕುಳಿತುಕೋ

**ಮುದುಕಿ** ಆಗಲಿ (ಎಂದು ಕೂಡುತ್ತಾಳೆ)

**ಶಕಾರ** (ಆಕ್ಷೇಪದ ಧ್ವನಿಯಲ್ಲಿ) ಬಂದಿಯಾ ಮುದಿಗೂಬೆ, ಹೆಣ್ಮಗಳ ದಲ್ಲಾಳಿ ಬಂದಿಯಾ!

**ನ್ಯಾಯಾಧೀಶ** ನೀನು ವಸಂತಸೇನೆಯ ತಾಯಿಯಲ್ಲ?

**ಮುದುಕಿ** ಹೌದು

**ನ್ಯಾಯಾಧೀಶ** ಈಗ ವಸಂತಸೇನೆ ಎಲ್ಲಿಗೆ ಹೋಗಿದ್ದಾಳೆ?

**ಮುದುಕಿ** ಗೆಳೆಯನ ಮನೆಗೆ

**ನ್ಯಾಯಾಧೀಶ** ಆಕೆಯ ಗೆಳೆಯನ ಹೆಸರು?

**ಮುದುಕಿ** (ಸ್ವಗತ) ಹಾಯ್ ಹಾಯ್, ಇದು ಮಾತ್ರ ನಾಚಿಕೆಗೇಡಿನ ಸಂಗತಿ (ಪ್ರಕಾಶ) ಸಾಮಾನ್ಯ ಜನ ಕೇಳುವಂಥ ಮಾತು ಇದು ನ್ಯಾಯಾಧೀಶರು ಕೇಳಬಾರದು

**ನ್ಯಾಯಾಧೀಶ** ನಾಚಿಕೆ ಬೇಡ, ವ್ಯವಹರಣೆಗಾಗಿ ನಾನು ಕೇಳಬೇಕಾಗಿದೆ

**ಶ್ರೇಷ್ಠಿ–ಕಾಯಸ್ಥ** : ವ್ಯವಹರಣೆಗಾಗಿ ಕೇಳಬೇಕಾಗಿದೆ ತಪ್ಪೇನೂ ಇಲ್ಲ ಹೇಳು

**ಮುದುಕಿ** ಏನು? ವ್ಯವಹರಣೆ! ಹಾಗಾದರೆ ಕೇಳಿ ಸ್ವಾಮಿ, ಆತ ವಿನಯದತ್ತನೆಂಬ ವ್ಯಾಪಾರಿಯ ಮೊಮ್ಮಗ, ಸಾಗರದತ್ತನ ಮಗ ಸಾಹುಕಾರರ ಬೀದಿಯಲ್ಲಿ ವಾಸವಾಗಿದ್ದಾನೆ ಚಾರುದತ್ತ ಎಂತ ಆತನ ಹೆಸರು ಆತನ ಬಳಿ ನನ್ನ ಮಗಳು ಯೌವನಸುಖವನ್ನು ಅನುಭವಿಸುತಿದ್ದಾಳೆ

**ಶಕಾರ** : ಕೇಳಿದಿರಾ ಸ್ವಾಮಿಗಳು? ಈ ಮಾತುಗಳನ್ನು ಬರಕೊಳ್ಳಿ ನನಗೂ ಚಾರುದತ್ತನೊಡನೆಯೆ ವಿವಾದ

**ಶ್ರೇಷ್ಠಿ–ಕಾಯಸ್ಥ** ಚಾರುದತ್ತ ಆಕೆಯ ಗೆಳೆಯ ಆತನ ಮೇಲೆ ತಪ್ಪು ಹೊರಿಸಲಾಗುವುದಿಲ್ಲ

**ನ್ಯಾಯಾಧೀಶ** ಈಗ ವಿಚಾರಣೆ ಚಾರುದತ್ತನನ್ನವಲಂಬಿಸಿದೆ

**ಶ್ರೇಷ್ಠಿ–ಕಾಯಸ್ಥ** · ಹೌದು

**ನ್ಯಾಯಾಧೀಶ** ಧನದತ್ತ, "ವಸಂತಸೇನೆ ಆರ್ಯಚಾರುದತ್ತನ ಮನೆಗೆ ಹೋಗಿದ್ದಳು" ಎಂದು ವ್ಯವಹರಣೆಯ ಮೊದಲ ಒಕ್ಕಣೆ ಬರಕೊಳ್ಳಿ ಹ್ಞೂ ಆರ್ಯಚಾರುದತ್ತನನ್ನೂ ನಾವು ಕರೆಯಬೇಕಾದ ಪ್ರಸಂಗ ಬಂತಲ್ಲಾ! ಅಥವಾ, ವ್ಯವಹಾರಕ್ಕಾಗಿ ಆತನನ್ನು ಕರೆಯೋದು ಅನಿವಾರ್ಯ ಭದ್ರ ಶೋಧನಕ, ಹೋಗು, ಆರ್ಯಚಾರುದತ್ತನ ಬಳಿ ಹೋಗಿ, ಮೆಲ್ಲನೆ, ಗಾಬರಿಗೊಳಿಸದೆ, ಉದ್ವೇಗಕ್ಕೆ ಎಡೆಗೊಡದೆ, ಗೌರವಪೂರ್ವಕವಾಗಿ ಪ್ರಸ್ತಾವ ತೆಗೆದು ಹೇಳು: "ನ್ಯಾಯಾಧೀಶರು ನಿಮ್ಮನ್ನು ಕಾಣಬಯಸುತ್ತಾರೆ" ಎಂದು

**ಶೋಧನಕ** ಅಪ್ಪಣೆ (ಎಂದು ಹೋಗುತ್ತಾನೆ ಅನಂತರ ಚಾರುದತ್ತನೊಡನೆ ಪ್ರವೇಶಿಸಿ) ಬನ್ನಿ ಅಯ್ಯ, ಬನ್ನಿ

**ಚಾರುದತ್ತ** (ಆಲೋಚಿಸಿ)

ನನ್ನ ಶೀಲದ ಶುದ್ಧಿ
ನನ್ನ ಕುಲದುನ್ನತಿಕೆ
ರಾಜನಿಗೆ ಗೊತ್ತಿರದೆ ಇಲ್ಲ
ಆದರೂ ಬಂದಿರುವ ಈ ಕರೆಯ ಕಂಡರೆ
ನನ್ನ ಪಾಡಿನ ಕುರಿತೆ ಅವನ ಸಂದೇಹ ॥ ೭ ॥

(ಊಹಿಸಿ, ಸ್ವಗತ)

ಸೆರೆಯ ತಪ್ಪಿಸಿಕೊಂಡು
ಬೀದಿಪಾಲಾದವನ
ನನ್ನ ಗಾಡಿಯಲಿ ನಾನು ಕಳಿಸಿಕೊಟ್ಟದ್ದು
ಚಾರಕರ ಕಣ್ಣಿಂದ
ಕಾಣಬಹ ರಾಜನಿಗೆ
ಈ ಸುದ್ದಿ ಕಿವಿಗೆ ಬಿತ್ತೇನು?
ಅದರಿಂದಲೇ ಈಗ
ನನ್ನನಪರಾಧಿಯೊಲು
ಕೊಂಡೊಯ್ಯುತಿರುವರೇನು? ॥ ೮ ॥

ಅಥವ ಈಗೇಕೆ ಆ ವಿಚಾರ ಯಾವುದಕ್ಕೂ ನ್ಯಾಯಾಲಯಕ್ಕೆ ಹೋಗೋಣ (ಪ್ರಕಾಶ) ಭದ್ರ ಶೋಧನಕ, ನ್ಯಾಯಾಲಯದ ದಾರಿ ತೋರಿಸಪ್ಪ.

**ಶೋಧನಕ** ಬನ್ನಿ, ಬನ್ನಿ ಅಯ್ಯ (ಎಂದು ನಡೆದು ಹೋಗುತ್ತಾರೆ )

**ಚಾರುದತ್ತ** (ಸಂಶಯಗೊಂಡು) ಇದೇನಿದು?
ಕಾಗೆ ಕರ್ಕಶವಾಗಿ ಕೂಗುತಿಹುದು
ರಾಜದೂತರು ಬೇರೆ ಕರೆಯುತಿಹರು
ಎಡಗಣ್ಣು ಕೂಡ ಕುಣಿಯುತ್ತಲಿಹುದು
ಈ ಶಕುನಗಳು ನನ್ನ ಕಂಗೆಡಿಸುತಿಹವು ॥ ೯ ॥

**ಶೋಧನಕ** ಬನ್ನಿ ಅಯ್ಯ, ಮೆಲ್ಲ ಬನ್ನಿ ಗಾಬರಿ ಇಲ್ಲ

**ಚಾರುದತ್ತ** (ನಡೆದಾಡಿ, ಎದುರು ನೋಡಿ)–
ಒಣಗಿ ಬಾಡಿದ ಮರದ ಟೊಂಗೆಯಲಿ ಕುಳಿತಿರುವ
ಈ ಕೆಟ್ಟ ಕಾಗೆಯೊಂದು •
ಸೂರ್ಯನೆಡೆ ಮುಖಮಾಡಿ ನನ್ನೆಡೆಗೆ ಕೆಕ್ಕರಿಸಿ
ಎಡಗಣ್ಣು ಹಾಯಿಸುತಿದೆ ॥ ೧೦ ॥

(ಬೇರೊಂದೆಡೆ ನೋಡಿ) ಅರೆ! ಏನಿದು ಹಾವು!

ನನ್ನ ದಾರಿಗಡ್ಡವಾಗಿ ಮಲಗಿರುವ ಈ ಹಾವು
ಬಿಳಿಯ ಕೋರೆಹಲ್ಲು ನಾಕು,
ಕಾಡಿಗೆಯಂತೆ ಕಪ್ಪು ಮೈ
ನನ್ನೆಡೆ ನೋಡುತಿದೆ ಕೋಪಗೊಂಡವರಂತೆ
ಚಾಚಿ ಹೊಳೆವ ನಾಲಿಗೆ
ದುಂಡಾದ ಹೊಟ್ಟೆಯನು ಅತ್ತಿತ್ತ ಹೊಸೆಯುತ್ತ
ನನ್ನತ್ತ ಬರುತಿದೆ ॥ ೧೧ ॥

ಅಲ್ಲದೆ ಇದು–

ನೆಲದ ಮೇಲಿಟ್ಟ ಹೆಜ್ಜೆ ನಿಲ್ಲದೆಯೆ ಜಾರುತಿದೆ
ಆದರೂ ನೆಲವೇನು ಒದ್ದೆಯಾಗಿಲ್ಲ
ಎಡಗಣ್ಣು ಅದುರುತಿದೆ ಮೇಲಿಂದ ಮೇಲೆ
ಜತೆಗೆ ಈ ಎಡದ ತೋಳು ಕೂಡ
ಈ ಹಾಳು ಹಕ್ಕಿಯೂ ಎಡೆಬಿಡದೆ ಕೂಗುತಿದೆ
ಇದು ಘೋರವಾದೊಂದು ಸಾವಿನ ಮುನ್‌ಸೂಚನೆ
ಇದಕೆ ಸಂಶಯವಿಲ್ಲ ॥ ೧೨ ॥

ಸರ್ವಥಾ ದೇವತೆಗಳು ಮಂಗಲವನ್ನು ಮಾಡಲಿ

**ಶೋಧನಕ** . ಬನ್ನಿ ಬನ್ನಿ ಅಯ್ಯ ಇದೋ ನ್ಯಾಯಾಲಯವನ್ನು ಪ್ರವೇಶಿಸಿ ಅಯ್ಯ

**ಚಾರುದತ್ತ** : (ಒಳಹೊಕ್ಕು, ಸುತ್ತ ನೋಡಿ) ಓ ನ್ಯಾಯಪೀಠದ ಶೋಭೆ ಎಂಥ ಹಿರಿದು ಇಲ್ಲಿ–

ಈ ರಾಜಕಾರಣವೆಂದರೆ
ಹಿಂಸ್ರಜಂತುಗಳಿಂದ ತುಂಬಿರುವ ಒಂದು ಕಡಲು
ಕಾನೂನಿನ ಕಂತೆಯಲ್ಲಿ
ನ್ಯಾಯಾನ್ಯಾಯದ ಚಿಂತೆಯಲ್ಲಿ
ಮುಳುಗಿದ ಮಂತ್ರಿಗಳೆ ಇದರ ಉಪ್ಪುನೀರು
ರಾಜದೂತರೆ ಇದರ ತೆರೆಗಳು– ಚಿಪ್ಪುಗಳು
ಸುತ್ತ ಸುಳಿವ ಗೂಢಚರರೆ ಮೊಸಳೆ ಹೆಮ್ಮೀನುಗಳು
ಇದರೊಡನೆ ತುಂಬ ಆನೆಕುದುರೆಗಳೆಂಬ ಹಿಂಸ್ರಜಂತುಗಳು
ಬಗೆ ಬಗೆಯ ವಾದಿ–ಪ್ರತಿವಾದಿಗಳು
ಸುತ್ತ ಗಿಡಿದಿರುವ ಮಿಂಚುಲಿಗ ಹಕ್ಕಿಗಳು
ಶ್ರೇಷ್ಠಿ–ಕಾಯಸ್ಥರೇ ಹರಿವ ಹಾವುಗಳಿಲ್ಲಿ
ಕಾನೂನು–ಕಟ್ಟಲೆಗಳೇ ಈ ಕಡಲ ತಡಿಗಳು ॥ ೧೩ ॥

ಇರಲಿ (ಪ್ರವೇಶಿಸುವಾಗ ತಲೆಗೆ ತಾಗಿದಂತೆ ಅಭಿನಯಿಸಿ, ತರ್ಕಿಸಿ) ಅಹಹ, ಇದು ಮತ್ತೊಂದು–

ಎಡಗಣ್ಣು ಅದುರುತಿದೆ
ಕಾಗೆಯೂ ಕೂಗುತಿದೆ
ದಾರಿಗಡ್ಡಾಗಿಯೇ ಹಾವು ಮಲಗಿತ್ತು
ಸರ್ವಥಾ ಶುಭವನ್ನು ಕರುಣಿಸಲಿ ದೈವ ॥ ೧೪ ॥

ಯಾವುದಕ್ಕೂ ಒಳಗೆ ಹೋಗುತ್ತೇನೆ (ಎಂದು ಪ್ರವೇಶಿಸುತ್ತಾನೆ)

**ನ್ಯಾಯಾಧೀಶ** ಓ! ಈತನೆ ಚಾರುದತ್ತ–

ಎದ್ದುಕಾಣುವ ಮೂಗು
ಉದ್ದನೆಯ ಅರಳುಕಣ್ಣು
ಸುಳ್ಳು ಅಪವಾದಕ್ಕೆ ಬಲಿಯಾಗುವಂಥ
ವ್ಯಕ್ತಿತ್ವವಲ್ಲವಿದು
ಆನೆಯಲಿ, ಹಸುವಿನಲಿ, ಕುದುರೆಯಲಿ ಎಂತಂತೆ
ಮನುಜರಲಿ ಕೂಡ ಚೆಲುವಿನಾಕಾರ
ತಕ್ಕ ನಡೆಯನ್ನು ಬಿಟ್ಟಿರುವುದಿಲ್ಲ ॥ ೧೫ ॥

**ಚಾರುದತ್ತ** ನ್ಯಾಯಾಧೀಶರಿಗೆ ಸ್ವಸ್ತಿ ನ್ಯಾಯಪೀಠದ ಅಧಿಕಾರಿಗಳೆ, ನಿಮಗೆಲ್ಲ ಕುಶಲ ತಾನೆ?

**ನ್ಯಾಯಾಧೀಶ** (ಅವಸರಗೊಂಡು) ಆರ್ಯನಿಗೆ ಸ್ವಾಗತ ಭದ್ರ ಶೋಧನಕ, ಆರ್ಯನಿಗೆ ಆಸನವನ್ನಿಡು

**ಶೋಧನಕ** (ಆಸನ ತಂದು) ಇದೋ ಆಸನ ಇಲ್ಲಿ ಕುಳಿತುಕೊಳ್ಳಿ ಅಯ್ಯ (ಚಾರುದತ್ತ ಕೂಡುತ್ತಾನೆ )

**ಶಕಾರ** (ಸಿಟ್ಟಿನಿಂದ) ಬಂದಿಯಾ, ಹೆಣ್ಗೊಲೆಗಡುಕ, ಬಂದಿಯಾ? ಓಹೋ ಹೋ, ಏನು ನ್ಯಾಯ, ಎಷ್ಟು ಧರ್ಮ ಈ ನ್ಯಾಯಾಲಯದಲ್ಲಿ! ಏಕೆಂದರೆ ಒಬ್ಬ ಹೆಣ್ಗೊಲೆಗಡುಕನಿಗೆ ಕೂಡ ಬಂದಕೂಡಲೆ ಉಪಚರಿಶಿ ಆಶನ ನೀಡಲಾಗುತ್ತದೆ (ರೇಖಿಯಿಂದ) ಇರಲಿ ಕೊಡಿ ಕೊಡಿ

**ನ್ಯಾಯಾಧೀಶ** ಆರ್ಯಚಾರುದತ್ತ, ನಿನಗೆ ಈಕೆಯ ಮಗಳ ಜತೆಗೆ ಪರಿಚಯ, ಗೆಳೆತನ, ಒಲವು ಇರುವುದು ಹೌದಾ?

**ಚಾರುದತ್ತ** ಯಾರ ಮಗಳು?

**ನ್ಯಾಯಾಧೀಶ** ಈಕೆಯ (ಎಂದು ವಸಂತಸೇನೆಯ ತಾಯಿಯನ್ನು ತೋರಿಸುತ್ತಾನೆ )

**ಚಾರುದತ್ತ** (ಎದ್ದು) ಆರ್ಯೆ, ನಮಸ್ಕಾರ

**ಮುದುಕಿ** ದೀರ್ಘಾಯುಷಿಯಾಗಿ ಬಾಳು ಮಗೂ (ಸ್ವಗತ) ಈತನೆ ಆ ಚಾರುದತ್ತ ನನ್ನ ಮಗಳು ತನ್ನ ಯೌವನವನ್ನು ಒಳ್ಳೆಯ ಕಡೆ ಉಪಯೋಗಿಸಿಕೊಂಡಿದ್ದಾಳೆ

**ನ್ಯಾಯಾಧೀಶ** ಆರ್ಯ, ಆ ವೇಶ್ಯೆ ನಿನ್ನ ಗೆಳತಿ ಹೌದಾ?

**ಚಾರುದತ್ತ** (ನಾಚಿಕೆಯನ್ನು ನಟಿಸುತ್ತಾನೆ )

**ಶಕಾರ** ನಾಚಿಕೆಯಿಂದ, ಹೆದರಿಕೆಯಿಂದ
ತನ್ನ ದುರ್ನಡತೆಯನು
ಮುಚ್ಚಿಕೊಳುತಿದ್ದಾನೆ
ದುಡ್ಡಿನ ಕಾರಣಕಾಗಿ
ತಾನೆ ಅವಳನು ಕೊಂದು
ಮುಚ್ಚಿಕೊಳ್ಳದೆ ಈಗ
ಮತ್ತೇನು ಮಾಡುವುದು
ಈ ಅಯ್ಯನವರು ॥ ೧೬ ॥

**ಶ್ರೇಷ್ಠಿ–ಕಾಯಸ್ಥ** ಆರ್ಯಚಾರುದತ್ತ ಸಂಕೋಚ ಬೇಡ ಇದು ವ್ಯವಹರಣೆ

**ಚಾರುದತ್ತ** : (ಸಂಕೋಚದಿಂದಲೆ) ನ್ಯಾಯಾಧೀಶರೆ, ನಾನು ಹೇಗೆ ಇಂಥ ಮಾತು ಹೇಳಲಿ: ಒಬ್ಬ ವೇಶ್ಯೆ ನನ್ನ ಗೆಳತಿ ಎಂದು ಅಥವಾ ಇದು ಯೌವನದ ಅಪರಾಧ; ನನ್ನ ಚಾರಿತ್ರದ್ದಲ್ಲ

**ನ್ಯಾಯಾಧೀಶ** ತುಂಬ ತೊಡಕುಗಳಿಂದ ತುಂಬಿಹುದು ವ್ಯವಹರಣೆ
ಬಗೆಯೊಳಗೆ ತುಂಬಿರುವ ಸಂಕೋಚ ಬಿಟ್ಟುಬಿಡು
ಗಟ್ಟಿಮಾಡಿಕೊ ಮನಸು ನಿಜವನ್ನು ಹೇಳಿಬಿಡು
ಯಾವುದೇ ಕಪಟಕ್ಕೆ ಇಲ್ಲಿ ಎಡೆಯಿಲ್ಲ ॥ ೧೭ ॥

ಸಂಕೋಚ ಬೇಡ ವ್ಯವಹರಣೆಗಾಗಿ ನಿನ್ನನ್ನು ಕೇಳಬೇಕಾಗಿದೆ

**ಚಾರುದತ್ತ** ನ್ಯಾಯಾಧೀಶರೆ, ಯಾರೊಡನೆ ನನಗೆ ಈ ವಿವಾದ?

**ಶಕಾರ** (ಠೀವಿಯಿಂದ) ಅರೇ, ನನ್ನೊಡನಯ್ಯಾ ವಿವಾದ

**ಚಾರುದತ್ತ** ನಿನ್ನೊಡನೆ ನನಗೆ ವಿವಾದ ಇರೊದು ಶಕ್ಯವೇ ಇಲ್ಲ

**ಶಕಾರ** . ಏನಯ್ಯಾ ಹೆಂಗೊಲೆಗಡುಗ, ಅಂಥ ಅವಳನ್ನು ಮೈತುಂಬ ಬಂಗಾರ ತೊಟ್ಟ ಆ ವಶಂತಶೇನೆಯನ್ನು ಕೈಯಾರೆ ಕೊಂದು ಈಗ ಮುಚ್ಚಿಕೊಳ್ಳೋದಕ್ಕೆ ಕಪಟನಾಟಕ ಹೂಡ್ತಾ ಇದೀಯಾ?

**ಚಾರುದತ್ತ** : ಏನು ಹುಚ್ಚು ಮಾತಾಡುತ್ತಿರುವೆ!

**ನ್ಯಾಯಾಧೀಶ** ಆರ್ಯಚಾರುದತ್ತ ಅವನ ಮಾತು ಇರಲಿ ನಿಜ ಹೇಳು ಆ ವೇಶ್ಯೆ ನಿನ್ನ ಗೆಳತಿ ಹೌದಾ?

**ಚಾರುದತ್ತ** . ಹೌದು

**ನ್ಯಾಯಾಧೀಶ** ಆರ್ಯ, ಈಗ ವಸಂತಸೇನೆಯೆಲ್ಲಿ?

**ಚಾರುದತ್ತ** ಮನೆಗೆ ಹೋದಳು

**ಶ್ರೇಷ್ಠಿ–ಕಾಯಸ್ಥ** . ಹೇಗೆ ಹೋದಳು? ಯಾವಾಗ ಹೋದಳು? ಹೋಗುವಾಗ ಜತೆಗೆ ಯಾರಿದ್ದರು?

**ಚಾರುದತ್ತ** (ಸ್ವಗತ) ತಲೆಮರೆಸಿಕೊಂಡು ಗುಟ್ಟಾಗಿ ಹೋದಳೆಂದು ಹೇಳಲೇನು?

**ಶ್ರೇಷ್ಠಿ–ಕಾಯಸ್ಥ** ಆರ್ಯ, ಏನು ಹೇಳು?

**ಚಾರುದತ್ತ** . ಮನೆಗೆ ಹೋದಳು ಇನ್ನೇನು ಹೇಳಲಿ?

**ಶಕಾರ** ನನ್ನ ಹಳೆಯ ಹೂದೋಟ ಪುಷ್ಪಕರಂಡಕಕ್ಕೆ ಕರಕೊಂಡು ಹೋಗಿ ದುಡ್ಡಿಗಾಗಿ ಆಕೆಯನ್ನು ಕತ್ತು ಹಿಚುಕಿ ಕೊಂದಿದ್ದೀಯಾ ಈಗ ಹೇಳುತ್ತಿ– ಮನೆಗೆ ಹೋದಳು ಎಂದು

**ಚಾರುದತ್ತ** . ಏಯ್, ತಲೆಹರಟೆಯವನೆ,
ಮೋಡಗಳು ಮಳೆಯನ್ನು ಸುರಿಸಿಲ್ಲ ನಿನ್ನೆಡೆಗೆ
ಮತ್ತೇಕೆ ಮೈತುಂಬ ನೀರಿಳಿಸುವೆ?
ಸುಳ್ಳೆ ಮೋರೆಯು ನಡುವೆ ಕಪ್ಪಿಟ್ಟಿತೇಕಯ್ಯ
ಚಾಷ ಹಕ್ಕಿಯ ಕಪ್ಪು ಪುಕ್ಕದಂತೆ?

ಏಕೆ ಕಳೆಗುಂದಿಹುದು
ಹೇಮಂತದಲಿ ಬೆಳೆದ ಕಮಲದಂತೆ? ॥ ೧೮ ॥

**ನ್ಯಾಯಾಧೀಶ** (ಜನಾಂತಿಕ)–
ಚಾರುದತ್ತನ ಮೇಲೆ ಆರೋಪ ಹೊರಿಸುವುದು
ತಕ್ಕಡಿಯೊಳಿಟ್ಟು ಹಿಮಗಿರಿಯ ತೂಗಿದಂತೆ
ಕೈಯಿಂದಲೀಸಿ ಕಡಲನ್ನು ದಾಟಿದಂತೆ
ಗಾಳಿಯನು ಬೊಗಸೆಯಲಿ ಸೆರೆ ಹಿಡಿಯುವಂತೆ ॥ ೧೯ ॥

(ಪ್ರಕಾಶ) ಆರ್ಯಚಾರುದತ್ತನಲ್ಲವೆ ಈತ? ಇಂಥವನು ಇಂಥ ಅಕಾರ್ಯವನ್ನು ಹೇಗೆ ಮಾಡಿಯಾನು?

ಎದ್ದು ಕಾಣುವ ಮೂಗು
ಉದ್ದನೆಯ ಅರಳು ಕಣ್ಣು
ಸುಳ್ಳು ಅಪವಾದಕ್ಕೆ ಬಲಿಯಾಗುವಂಥ
ವ್ಯಕ್ತಿತ್ವವಲ್ಲವಿದು
ಆನೆಯಲಿ, ಹಸುವಿನಲಿ, ಕುದುರೆಯಲಿ ಎಂತಂತೆ
ಮನುಜರಲಿ ಕೂಡ ಚೆಲುವಿನಾಕಾರ
ತಕ್ಕ ನಡೆಯನ್ನು ಬಿಟ್ಟಿರುವುದಿಲ್ಲ (೯/ ೧೫)

**ಶಕಾರ** . ಏನು ವ್ಯವಹರಣೆಯಲ್ಲಿ ಪಕ್ಷಪಾತ ಮಾಡಲಾಗುತ್ತಿದೆ?

**ನ್ಯಾಯಾಧೀಶ** ತೊಲಗು ಮೂರ್ಖ–
ಸಂಸ್ಕಾರವಿಲ್ಲದಿಹ ಕೊಳಕ ನೀನಾದರೂ
ವೇದಗಳ ಮರ್ಮವನು ಹೇಳಹೊರಟಿರುವೆ
ನಿನ್ನ ನಾಲಿಗೆ ಬಿದ್ದು ಹೋಗಲಿಲ್ಲ!
ನಡುಹಗಲ ಸೂರ್ಯನನು ಕೆಕ್ಕರಿಸ ಹೊರಟಿರುವೆ
ನಿನ್ನ ಕಣ್ಣೊ ಇಂಗಿಹೋಗಲಿಲ್ಲ!
ಸುಡುವ ಬೆಂಕಿಯ ನಡುವೆ ಕೈಯನಿಕ್ಕುತ್ತಿರುವೆ
ನಿನ್ನ ಕೈಗಳು ಕರಕಿಹೋಗಲಿಲ್ಲ!
ಚಾರುದತ್ತನ ಮೇಲೆ ಅಪವಾದ ಹೊರಿಸುತಿಹೆ
ಭೂಮಿಯಾದರು ನಿನ್ನ ನುಂಗಲಿಲ್ಲ! ॥ ೨೦ ॥

ಆರ್ಯಚಾರುದತ್ತ ಅಕಾರ್ಯವನ್ನು ಮಾಡೋದು ಹೇಗೆ ಸಾಧ್ಯ?

ನಿರಪೇಕ್ಷನಾಗಿಯೇ
ಮುತ್ತು ರತ್ನಗಳನ್ನು ಧಾರೆಯೆರೆದವನೀತ
ಬಯಸಿ ಬಂದವರಿಗೆಲ್ಲ
ಹೀಗಾಗಿ ಕಡಲಲ್ಲಿ

ಈಗ ಉಳಿದದ್ದು ಬರಿದೆ ನೀರು ಮಾತ್ರ
ಹಿರಿಯ ಗುಣಗಳ ನಿಧಿಯೊ ಈ ಮಹಾತ್ಮ
ಹಗೆಗಳೂ ಯೋಚಿಸದ ಈ ಪಾಪ ಕೃತ್ಯವನು
ಇವನು ಮಾಡುವನೆ ಬರಿದೆ ದುಡ್ಡಿಗಾಗಿ? ॥ ೨೧ ॥

**ಮುದುಕಿ** ಆಸೆಗೇಡಿ, ನ್ಯಾಸವಾಗಿಟ್ಟ ಚಿನ್ನದ ಒಡವೆಯನ್ನು ರಾತ್ರೆ ಕಳ್ಳರು ಕದ್ದರು ಎಂದು ಅದಕ್ಕೆ ಬದಲಾಗಿ ಭೂಮಂಡಲದಲ್ಲೆ ಅಪೂರ್ವವಾದ ಮುತ್ತಿನ ಹಾರವನ್ನು ಕಳಿಸಿಕೊಟ್ಟಂಥ ಮನುಷ್ಯ ಪುಡಿಗಾಸಿನ ಕಾರಣಕ್ಕಾಗಿ ಇಂಥ ಅಕಾರ್ಯ ಮಾಡುತ್ತಾನೇನು? ಓ ಕಂದ, ಬಾ ನನ್ನ ಮಗಳೆ (ಎಂದು ಅಳುತ್ತಾಳೆ )

**ನ್ಯಾಯಾಧೀಶ** ಆರ್ಯಚಾರುದತ್ತ, ಆಕೆ ನಡೆದುಕೊಂಡೆ ಹೋದಳೋ, ಇಲ್ಲ, ಗಾಡಿಯಲ್ಲಿ ಹೋದಳೋ?

**ವೀರಕ** (ಪ್ರವೇಶಿಸಿ, ಸೆಡವಿನಿಂದ)

ಕಾಲಿನಿಂದ ಒದೆಸಿಕೊಂಡ
ಸೋಲಿನ ಅವಮಾನದಿಂದ
ಬೆಳೆದ ಹಗೆಯ ಕೊರಗಿನಲ್ಲೆ
ಅಂತು ಇಂತು ಹೇಗೊ ಏನೊ
ಇರುಳುರುಳಿ ಬೆಳಗಾಯಿತು ॥ ೨೨ ॥

ಯಾವುದಕ್ಕು ನ್ಯಾಯಾಲಯಕ್ಕೆ ಹೋಗುತ್ತೇನೆ (ಒಳ ಬಂದು) ಪೂಜ್ಯರಿಗೆ ಸುಖವಾಗಲಿ

**ನ್ಯಾಯಾಧೀಶ** ಅರೆ! ನಗರರಕ್ಷೆಗಾಗಿ ನಿಯುಕ್ತನಾದ ವೀರಕ! ವೀರಕ, ಏನು ಬಂದೆ?

**ವೀರಕ** ಸ್ವಾಮಿ, ಆರ್ಯಕ ಸೆರೆಯಿಂದ ತಪ್ಪಿಸಿಕೊಂಡ ಸುದ್ದಿಯಿಂದ ಗಲಿಬಿಲಿಗೊಂಡ ನಾನು ಅವನನ್ನು ಹುಡುಕುತ್ತಿರುವಾಗ ಒಂದು ಮುಚ್ಚಿದ ಗಾಡಿ ಹೋಗುತ್ತಿರುವುದನ್ನು ಕಂಡೆ ಅದನ್ನು ವಿಚಾರಿಸಿ, ಪರಿಶೀಲಿಸು ತ್ತಿರುವಾಗ ದಳಪತಿ ಚಂದನಕ ಅಡ್ಡಬಂದು ತಡೆದ ಆಗ ನಾನು "ನೀನು ನೋಡಿದ್ದೇನೋ ಸರಿ ಆದರೆ ನಾನೂ ನೋಡಿ ಬಿಡುತ್ತೇನೆ" ಎಂದು ಹೇಳಿದೆ ಅಷ್ಟಕ್ಕೆ ಅವನು ನನಗೆ ಕಾಲಿನಿಂದ ಒದ್ದುಬಿಟ್ಟ ಇಷ್ಟು ಸಂಗತಿ ಕೇಳಿದ ಮೇಲೆ ಇನ್ನು ತಮಗೆ ತೋಚಿದಂತೆ ಮಾಡಿ ಸ್ವಾಮಿ. ತಮ್ಮ ಚಿತ್ತ

**ನ್ಯಾಯಾಧೀಶ** ಭದ್ರ, ಅದು ಯಾರ ಗಾಡಿ ಗೊತ್ತೇನು?

**ವೀರಕ** ಈತನದ್ದು, ಆರ್ಯಚಾರುದತ್ತನದ್ದು ಹಳೆಯ ಹೂದೋಟ ಪುಷ್ಪ ಕರಂಡಕಕ್ಕೆ ವಿಹಾರಕ್ಕೆಂದು ವಸಂತಸೇನೆ ಅದರಲ್ಲಿ ಹೋಗುತಿದ್ದಾಳೆ ಎಂದು ಗಾಡಿಯವ ಹೇಳಿದ

**ಶಕಾರ** ಕೇಳಿದಿರೇನಯ್ಯ?

**ನ್ಯಾಯಾಧೀಶ** ತಿಳಿಬೆಳದಿಂಗಳಿನ ಈ ಚಂದ್ರನನ್ನು
ಕಬಳಿಸುತಿದೆ ರಾಹು
ಕದಡಿಕೊಳ್ಳುತಿದೆ ಕೊಳದ ತಿಳಿನೀರು
ತಡಿಯೆ ಕವಚಿಬಿದ್ದು! ॥ ೨೩ ॥

ವೀರಕ, ನಿನ್ನ ದೂರನ್ನು ಮತ್ತೆ ವಿಚಾರಿಸುತ್ತೇವೆ ನ್ಯಾಯಾಲಯದ ಬಾಗಿಲಲ್ಲಿರುವ ಕುದುರೆಯನ್ನೇರಿ ಮೊದಲು ಪುಷ್ಪಕರಂಡಕೋದ್ಯಾನಕ್ಕೆ ಹೋಗಿ ನೋಡಿ ಬಾ–ಅಲ್ಲಿ ಒಬ್ಬ ಹೆಣ್ಮಗಳು ಸತ್ತಿರುವುದು ನಿಜವೇ ಎಂದು

**ವೀರಕ** . ಅಪ್ಪಣೆ (ಎಂದು ಹೋಗುತ್ತಾನೆ ಮತ್ತೆ ಪ್ರವೇಶಿಸಿ) ಅಲ್ಲಿಗೆ ಹೋಗಿ ಬಂದೆ ಅಲ್ಲಿ ನರಿ–ನಾಯಿಗಳು ಕಚ್ಚಿ ಎಳೆದಾಡುತ್ತಿದ್ದ ಒಂದು ಹೆಂಗಸಿನ ಹೆಣವನ್ನೂ ಕಂಡೆ

**ಶ್ರೇಷ್ಠಿ–ಕಾಯಸ್ಥ** · ಅದು ಹೆಂಗಸಿನ ಹೆಣ ಎಂದು ಹೇಗೆ ನಿನಗೆ ಗೊತ್ತಾಯಿತು?

**ವೀರಕ** ಅರ್ಧ ತಿಂದುಳಿದ ತಲೆಗೂದಲು, ಕೈ, ಕಾಲುಗಳಿಂದ ಗುರುತಿಸಿದೆ

**ನ್ಯಾಯಾಧೀಶ** ಓಹ್, ಈ ಲೋಕವ್ಯವಹಾರ ಎಂಥ ಜಟಿಲವಾಗಿದೆ ಧಿಕ್ಕಾರ ವಿರಲಿ ಅದಕ್ಕೆ

ಎಷ್ಟುಎಷ್ಟು ಹೆಚ್ಚು ವಿಚಾರ ಮಾಡಿದರೆ
ಅದು ಇನ್ನಷ್ಟು ಸಿಕ್ಕುಸಿಕ್ಕಾಗುತ್ತದೆ
ಕಾನೂನಿನ ಕಟ್ಟಲೆಗಳು ತೀರತೀರ ಜಟಿಲ
ಇಂಥಲ್ಲಿ ಬುದ್ಧಿಯೂ ತಡವರಿಸುತ್ತದೆ
ಕೆಸರಿನಲಿ ಕಾಲಿಟ್ಟ ಹಸುವಿನಂತೆ ॥ ೨೪ ॥

**ಚಾರುದತ್ತ** (ಸ್ವಗತ)–
ಮೊದಲ ದಿನ ಮೊಗ್ಗು ಅರಳಿಕೊಂಡಾಗ
ಎಲ್ಲ ದುಂಬಿಗಳು ಅದರ ಮೇಲೆರಗುವಂತೆ
ಮನುಜನಿಗೆ ಆಪತ್ತು ಬಂದೊದಗಿದಾಗ
ಎಲ್ಲ ಸಂಕಟಗಳೂ ಸಮಯ ಕಾದು
ಒಮ್ಮೆಲೇ ಎರಗುವವು ಅವನ ಮೇಲೆ ॥ ೨೫ ॥

**ನ್ಯಾಯಾಧೀಶ** ಆರ್ಯಚಾರುದತ್ತ, ನಿಜವಾದ ಸಂಗತಿ ಏನು ಹೇಳು

**ಚಾರುದತ್ತ** : ಹೆರವರ ಸಜ್ಜನಿಕೆಯಲ್ಲಿ ಮತ್ಸರ ತಾಳುವ
ದುಷ್ಟನಾದ ಮನುಷ್ಯ
ಬಯಕೆಗಳ ಬಲೆಯಲ್ಲಿ ಕುರುಡಾಗಿ
ಹೆರವರನು ಬಲಿಹಾಕಹೊರಟವನು

ಅಂಥವನು ತನ್ನ ಹುಟ್ಟುಗುಣದನುಸಾರ
ಸುಳ್ಳೆ ಏನಾದರೂ ಹೇಳಿದರು ಕೂಡ
ಗ್ರಾಹ್ಯವಾಗುವುದೇನು? ಅದನು
ಒಪ್ಪಿಬಿಡಬಹುದೇನು ಕಣ್ಣುಮುಚ್ಚಿ? ॥ ೨೬ ॥

ಹೂವರಳಿ ನಿಂತ ಬಳ್ಳಿಯನು ಕೂಡ
ಜಗ್ಗಿ ಎಳೆದವನಲ್ಲ ಹೂವಿಗಾಗಿ
ಅಂಥ ನಾನೇ ಈಗ,
ಅಸಹಾಯಳಾಗಿ ಅಳುವ ಹೆಣ್ಣೊಬ್ಬಳನು
ತುಂಬಿಗಳ ಗರಿಯಂತೆ ಕಪ್ಪಾದ ನೀಳಾದ
ಕೂದಲಲಿ ಹಿಡಿದೆಳೆದು
ಕೊಂದೇನೆ ದುಡ್ಡಿಗಾಗಿ? ॥ ೨೭ ॥

**ಶಕಾರ** · ಓಹೋಯ್, ನ್ಯಾಯಾಧೀಶರೆ, ನೀವು ಇನ್ನೂ ಪಕ್ಷಪಾತದಿಂದಲೆ ವ್ಯವಹರಣೆಯನ್ನು ನೋಡ್ತಾ ಇದೀರಿ ಈಗಲೂ ಈ ಆಶೆಗೇಡಿ ಚಾರುದತ್ತನನ್ನು ಆಶನದಲ್ಲೆ ಕೂಡಿಶಿದ್ದೀರಲ್ಲ?

**ನ್ಯಾಯಾಧೀಶ** ಭದ್ರ, ಶೋಧನಕ, ಹಾಗೆಯೆ ಮಾಡು (ಶೋಧನಕ ಹಾಗೆಯೆ ಮಾಡುತ್ತಾನೆ )

**ಚಾರುದತ್ತ** ವಿಚಾರಮಾಡಿ, ನ್ಯಾಯಾಧೀಶರೆ, ವಿಚಾರಮಾಡಿ (ಎಂದು ಆಸನದಿಂದೆದ್ದು ನೆಲದಲ್ಲಿ ಕೂಡುತ್ತಾನೆ )

**ಶಕಾರ** (ಸ್ವಗತ, ಸಂತೋಷದಿಂದ ಕುಣಿಯುತ್ತ) ನಾನು ಮಾಡಿದ ಪಾಪವನ್ನು ಹೀಗೆ ಇನ್ನೊಬ್ಬನ ತಲೆಗೆ ಹೊತ್ತು ಹಾಕಿಬಿಟ್ಟೆ ಅದರಿಂದ ಚಾರುದತ್ತ ಕೂತಿದ್ದಲ್ಲಿ ಈಗ ನಾನು ಕೂಡಬೇಕು (ಹಾಗೆಯೆ ಮಾಡಿ) ಚಾರುದತ್ತ, ನೋಡು, ನೋಡು ನನ್ನನ್ನು ಈಗಲಾದರೂ ಹೇಳು– ನಾನೇ ಕೊಂದದ್ದು– ಎಂತ

**ಚಾರುದತ್ತ** ಸ್ವಾಮಿ ನ್ಯಾಯಾಧೀಶರೆ,
ಹೆರವರ ಸಜ್ಜನಿಕೆಯಲ್ಲಿ ಮತ್ಸರ ತಾಳುವ
ದುಷ್ಟನಾದ ಮನುಷ್ಯ
ಬಯಕೆಗಳ ಬಲೆಯಲ್ಲಿ ಕುರುಡಾಗಿ
ಹೆರವರನು ಬಲಿಹಾಕಹೊರಟವನು
ಅಂಥವನು ತನ್ನ ಹುಟ್ಟುಗುಣದನುಸಾರ
ಸುಳ್ಳೆ ಏನಾದರೂ ಹೇಳಿದರು ಕೂಡ
ಗ್ರಾಹ್ಯವಾಗುವುದೇನು? ಅದನು
ಒಪ್ಪಿಬಿಡಬಹುದೇನು ಕಣ್ಣುಮುಚ್ಚಿ? (೯/ ೨೬)

(ನಿಟ್ಟುಸಿರುಗರೆದು ಸ್ವಗತ)

ಓ ಗೆಳೆಯ ಮೈತ್ರೇಯ,
ಎಂಥ ಆಘಾತವಿದು ನನ್ನ ಮೇಲೆರಗಿತು!
ಒಳ್ಳೆಯ ಬ್ರಾಹ್ಮಣರ ಕುಲದಲ್ಲಿ ಹುಟ್ಟಿಯೂ
ನನ್ನ ಕೈಹಿಡಿದ ಓ ನಿರ್ಭಾಗ್ಯ ಹೆಣ್ಣೆ,
ಓ ಕಂದ ರೋಹಸೇನ,
ನೀನು ಕಾಣುತ್ತಿಲ್ಲ ನನ್ನ ಈ ಪಾಡನ್ನು
ಇಲ್ಲಿ ದುಃಖದ ಮಡುವೆ ಬಾಯ್ದೆರೆದು ನಿಂತಿದೆ
ಸುಳ್ಳೆ ಸಂತಸದಲ್ಲಿ ನೀನಾಡುತಿರುವೆ ॥ ೨೮ ॥

ಆಕೆಯ ಸುದ್ದಿ ತಿಳಿಯುವುದಕ್ಕಾಗಿ ಮತ್ತು ಮಗುವಿಗೆ ಆಟದ ಬಂಡಿ ಮಾಡುವುದಕ್ಕಾಗಿ ಆಕೆ ಕೊಟ್ಟುಹೋದ ಚಿನ್ನವನ್ನು ಮರಳಿ ಒಪ್ಪಿಸುವುದಕ್ಕಾಗಿ ಮೈತ್ರೇಯನನ್ನು ನಾನು ವಸಂತಸೇನೆಯ ಬಳಿ ಕಳಿಸಿದ್ದೆ ಅವನೂ ಏತಕ್ಕಾಗಿ ತಡಮಾಡುತಿದ್ದಾನೆ?

(ಪ್ರವೇಶಃ ಚಿನ್ನದ ಗಂಟು ಹಿಡಿದುಕೊಂಡ ವಿದೂಷಕ )

**ವಿದೂಷಕ** ಆರ್ಯಚಾರುದತ್ತ ನನ್ನನ್ನು ವಸಂತಸೇನೆಯ ಬಳಿಗೆ ಆಕೆಯ ಆಭರಣಗಳನ್ನೂ ಕೊಟ್ಟು ಕಳಿಸಿಕೊಟ್ಟಿದ್ದಾನೆ "ಆರ್ಯಮೈತ್ರೇಯ, ವಸಂತಸೇನೆ ನಮ್ಮ ಹುಡುಗ ರೋಹಸೇನನಿಗೆ ತನ್ನ ಆಭರಣಗಳನ್ನೆಲ್ಲ ತೊಡಿಸಿ ತಾಯ ಬಳಿ ಕಳಿಸಿಕೊಟ್ಟಿದ್ದಾಳೆ ಈ ಆಭರಣಗಳನ್ನು ಕೊಟ್ಟುಬಿಡಬೇಕು ನಾವು ಸ್ವೀಕರಿಸಬಾರದು ಅದರಿಂದ ಇದನ್ನು ಮರಳಿಸಿ ಬಾ" ಎಂದು ಹೇಳಿದ್ದಾನೆ ಅದರಿಂದ ವಸಂತಸೇನೆಯ ಬಳಿಗೇ ಹೋಗುತ್ತೇನೆ (ನಡೆದು ಹೋಗಿ, ನೋಡಿ ಆಕಾಶದಲ್ಲಿ) ಅರೆ, ಗೆಳೆಯ ರೇಭಿಲ! ಓಹೋಯ್ ಭಾವ ರೇಭಿಲ, ಏನು ನೀನು ಗಾಬರಿಗೊಂಡವರಂತೆ ಕಾಣಿಸುತ್ತಿರುವೆ? (ಕಿವಿಗೊಟ್ಟಾಲಿಸಿ) ಏನಂದೆ, ಪ್ರಿಯಮಿತ್ರ ಚಾರುದತ್ತನನ್ನು ನ್ಯಾಯಾಲಯಕ್ಕೆ ಕರೆದೊಯ್ದಿದ್ದಾರೆ ಎಂದೆಯಾ? ಹಾಗಾದರೆ ಏನೋ ದೊಡ್ಡ ಸಮಸ್ಯೆ ಇರಬೇಕು (ಆಲೋಚಿಸಿ) ಹಾಗಾದರೆ ವಸಂತಸೇನೆಯ ಬಳಿ ಆಮೇಲೆ ಹೋಗುತ್ತೇನೆ ನ್ಯಾಯಾಲಯದತ್ತ ಮೊದಲು ಹೋಗುತ್ತೇನೆ (ನಡೆದು ಬಂದು ನೋಡಿ) ಇದು ನ್ಯಾಯಾಲಯ ಒಳಕ್ಕೆ ಹೋಗುತ್ತೇನೆ. (ಒಳಹೋಗಿ) ನ್ಯಾಯಾಧೀಶರಿಗೆ ಆರಾಮವಾ? ಎಲ್ಲಿ ನನ್ನ ಗೆಳೆಯ?

**ನ್ಯಾಯಾಧೀಶ** ಇದೋ ಇಲ್ಲಿದಾನೆ

**ವಿದೂಷಕ** . ಗೆಳೆಯ ನಿನಗೆ ಮಂಗಳವಾಗಲಿ

**ಚಾರುದತ್ತ** : ಮುಂದಕ್ಕೆ ಆಗಬೇಕು

**ವಿದೂಷಕ** ಕ್ಷೇಮ ತಾನೆ?

**ಚಾರುದತ್ತ** ಅದೂ ಮುಂದೆ ಆಗಬೇಕು

**ವಿದೂಷಕ** ಓಯ್ ಗೆಳೆಯ, ಏಕೆ ತುಂಬ ಉದ್ವೇಗಗೊಂಡಿದ್ದೀಯಾ? ಏತಕ್ಕಾಗಿ ಇಲ್ಲಿ ಕರೆಸಿದ್ದು?

**ಚಾರುದತ್ತ** ಗೆಳೆಯ,–

ದಯೆಯಿಲ್ಲದ ನಾನು
ಪರಲೋಕದ ಭಯವಿಲ್ಲದ ನಾನು
ಒಬ್ಬ ಹೆಣ್ಮಗಳನ್ನು
ಮೈವೆತ್ತು ಬಂದ ರತಿದೇವಿಯನ್ನು
ಉಳಿದುದನು ಹೇಳುವನು ಇವನು ॥ ೨೯ ॥

**ವಿದೂಷಕ** ಏನು ಏನು?

**ಚಾರುದತ್ತ** (ಕಿವಿಯಲ್ಲಿ) ಹೀಗಂತೆ

**ವಿದೂಷಕ** ಯಾರು ಹೀಗೆ ಹೇಳುವವ?

**ಚಾರುದತ್ತ** (ಸನ್ನೆಯಿಂದ ಶಕಾರನನ್ನು ತೋರಿಸುತ್ತಾನೆ) ನನ್ನ ಅದೃಷ್ಟಕ್ಕೆ ಈತ ಕಾರಣಪುರುಷನಾಗಿ ಬಂದಿದ್ದಾನೆ

**ವಿದೂಷಕ** (ಜನಾಂತಿಕ) ಮನೆಗೆ ಹೋಗಿದ್ದಾಳೆ ಎಂದು ನೀನೇಕೆ ಹೇಳ್ಳಿಲ್ಲ?

**ಚಾರುದತ್ತ** ಹೇಳಿದರೂ ಪರಿಸ್ಥಿತಿಯಿಂದಾಗಿ ಯಾರಿಗೂ ಅರ್ಥ ಆಗ್ತಾ ಇಲ್ಲ

**ವಿದೂಷಕ** ಅಯ್ಯ, ಪೇಟೆಯ ಕೇರಿಗಳಿಂದ, ಸನ್ಯಾಸಿಗಳಿಗೆ ವಿಹಾರಗಳಿಂದ, ಉದ್ಯಾನಗಳು, ದೇವಾಲಯಗಳು, ಕೆರೆಬಾವಿಗಳು, ಯಜ್ಞಸ್ತಂಭಗಳಿಂದ ಉಜ್ಜಯಿನಿಯನ್ನು ಬೆಳಗಿಸಿದ ಒಬ್ಬ ಮನುಷ್ಯ ಪುಡಿಗಾಸಿಗಾಗಿ ಕೈಸಾಗದ ಇಂಥ ಅಕಾರ್ಯ ಮಾಡಿದ್ದಾನೆ ಎಂದರೆ ನೀವು ನಂಬ್ತೀರಾ? (ಸಿಟ್ಟಿನಿಂದ) ಏಯ್, ಸೂಳೆಮಗನೆ, ರಾಜನ ಭಾವನಂಟ ಸಂಸ್ಥಾನಕ, ಸಿಕ್ಕ ಹಾಗೆ ಮಾಡೋ ಮೂರ್ಖ, ಇದ್ದವರಿಗೆಲ್ಲ ತೊಂದರೆಕೊಟ್ಟು ಬದುಕೋ ಭಂಡ, ಮೈತುಂಬ ಬಂಗಾರ ತೊಟ್ಟ ಮುಜ್ಜುಮಂಗ, ಹೇಳು, ನನ್ನೆದುರು ಹೇಳು ನೋಡೋಣ ನನ್ನ ಗೆಳೆಯ, ಹೂಬಿಟ್ಟ ಬಳ್ಳಿಯನ್ನು ಕೂಡ, ಎಲ್ಲಿ ಚಿಗುರಿಗೆ ನೋವಾದೀತೋ ಎಂದು ಜಗ್ಗಿ ಜಗ್ಗಿಸಿ ಹೂಕೀಳದ ಕರುಣಾಳು; ಇಹಪರಗಳಿಗೆ ಸಲ್ಲದ ಇಂಥ ಅಕಾರ್ಯವನ್ನು ಅವನು ಮಾಡ್ತಾನೇನು? ನಿಲ್ಲು, ದಲ್ಲಾಳಿಗೆ ಹುಟ್ಟಿದವನೆ, ನಿಲ್ಲು ನಿನ್ನ ಮನಸ್ಸಿನಂತೆಯೆ ಸೊಟ್ಟಗಾದ ಈ ದಂಟಿಯಿಂದ ನಿನ್ನ ತಲೆಯನ್ನು ಒಡೆದು ಬಿಡ್ತೇನೆ

**ಶಕಾರ** (ಸಿಟ್ಟಿನಿಂದ) ಕೇಳಿ ಕೇಳಿ ಸ್ವಾಮಿಗಳೇ ವಿವಾದ ಇರೋದು, ವ್ಯವಹಾರ ಇರೋದು ನನ್ನ ಮತ್ತು ಚಾರುದತ್ತನ ನಡುವೆ ಮತ್ತೆ ಇವನು, ಈ ಕಾಗೆ ಕೂತ ಅವಲಕ್ಷಣದ ತಲೆಮಂಡೆಯುವವನು ನನ್ನ ತಲೆ ಯಾಕೆ ಒಡೀತಾನಂತೆ? ಸಾಧ್ಯವಿಲ್ಲ ಏಯ್ ತೊತ್ತಿನ ಮಗನೆ, ಕೆಟ್ಟ ಬ್ರಾಹ್ಮಣ.

**ವಿದೂಷಕ** (ದಂಟೆಯೆತ್ತಿ) ಏಯ್ ಸೂಳೆಮಗನೆ, ರಾಜನ ಭಾವನಂಟ ಸಂಸ್ಥಾನಕ, ಸಿಕ್ಕಹಾಗೆ ಮಾಡೋ ಮೂರ್ಖ, ಇದ್ದವರಿಗೆಲ್ಲ ತೊಂದರೆ ಕೊಟ್ಟು ಬದುಕೋ ಭಂಡ, ಮೈತುಂಬ ಬಂಗಾರ ತೊಟ್ಟ ಮುಜ್ಜು ಮಂಗ, ಹೇಳು, ನನ್ನೆದುರು ಹೇಳು ನೋಡೋಣ ನನ್ನ ಗೆಳೆಯ, ಹೂಬಿಟ್ಟ ಬಳ್ಳಿಯನ್ನು ಕೂಡ, ಎಲ್ಲಿ ಚಿಗುರಿಗೆ ನೋವಾದೀತೋ ಎಂದು ಜಗ್ಗಿ ಬಗ್ಗಿಸಿ ಹೂ ಕೀಳದ ಕರುಣಾಳು; ಇಹಪರಗಳಿಗೆ ಸಲ್ಲದ ಇಂಥ ಅಕಾರ್ಯವನ್ನು ಅವನು ಮಾಡ್ತಾನೇನು? ನಿಲ್ಲು, ದಲ್ಲಾಳಿಗೆ ಹುಟ್ಟಿದವನೆ, ನಿಲ್ಲು ನಿನ್ನ ಮನಸ್ಸಿನಂತೆಯೆ ಸೊಟ್ಟಗಾದ ಈ ದಂಟೆಯಿಂದ ನಿನ್ನ ತಲೆಯನ್ನು ಒಡೆದುಬಿಡ್ತೇನೆ (ಶಕಾರ ಸಿಟ್ಟಿನಿಂದ ಎದ್ದು ಬಂದು ಹೊಡೆಯುತ್ತಾನೆ ವಿದೂಷಕ ತಿರುಗಿ ಹೊಡೆಯುತ್ತಾನೆ ಹೀಗೆ ಪರಸ್ಪರ ಹೊಡೆದಾಡಿಕೊಳ್ಳುತ್ತಾರೆ ವಿದೂಷಕನ ಬಗಲಿನಿಂದ ಚಿನ್ನದ ಗಂಟು ಕೆಳಗೆ ಬೀಳುತ್ತದೆ )

**ಶಕಾರ** (ಆಭರಣಗಳನ್ನು ಹೆಕ್ಕಿ, ದಿಟ್ಟಿಸಿ, ನೋಡಿ, ಅಳುಕುತ್ತಲೇ) ನೋಡಿ ನೋಡಿ ಅಯ್ಯಾ, ಇವೇ ಪಾಪ, ಆಕೆಯ ಒಡವೆಗಳು (ಚಾರುದತ್ತನನ್ನು ಕುರಿತು) ಈ ಪುಡಿಗಾಸಿನ ಆಶೆಗಾಗಿ ಆಕೆಯನ್ನು ಕೊಂದು ಶಾಯಿಶಿದೆ– ಅಲ್ಲವಾ?

(ನ್ಯಾಯಾಧಿಕಾರಿಗಳೆಲ್ಲರೂ ತಲೆ ತಗ್ಗಿಸುತ್ತಾರೆ )

**ಚಾರುದತ್ತ** (ಜನಾಂತಿಕ)

ಇಂಥ ಬಿಕ್ಕಟ್ಟೊಂದು ಬಂದೊದಗಿದಾಗಲೇ
ಕಾಣಿಸಿತು ಈ ಚಿನ್ನದೊಡವೆ
ನಮ್ಮ ಭಾಗ್ಯವೆ ನಮಗೆ ಬೆನ್ನು ತಿರುಗಿಸಿದಾಗ
ತಾನು ಕೆಳಗೆ ಬಿತ್ತು
ಜತೆಗೆ ನಮ್ಮನ್ನೂ ಬೀಳಿಸಿತು ಕೆಳಗೆ ॥ ೩೦ ॥

**ವಿದೂಷಕ** ಹೋಯ್, ಇದ್ದ ಸಂಗತಿಯನ್ನು ಏಕೆ ಹೇಳಿಬಿಡಬಾರದು?

**ಚಾರುದತ್ತ** ಗೆಳೆಯ,

ದುರ್ಬಲವಾಗಿದೆ ರಾಜನ ಕಾನೂನಿನ ಕಣ್ಣು
ಕಾಣದೊ ಎಂದೂ ಅದು ನಿಜಸಂಗತಿಯನ್ನು
ಸತ್ಯ ಹೇಳಿದವನಿಗಿಲ್ಲಿ ಮೂರುಕಾಸಿನ ಬೆಲೆ
ಅವಮಾನದ ಸಾವುಂಟು ಅದರ ಮೇಲೆ ॥ ೩೧ ॥

**ನ್ಯಾಯಾಧೀಶ** ಕಷ್ಟವಯ್ಯಾ ಕಷ್ಟ

ಕುಜದೋಷದಿಂದಾಗಿ
ಮೊದಲೆ ದುರ್ಬಲನಾದ ಗುರುವಿಗೆ
ಪಕ್ಕದಲೆ ಇನ್ನೊಂದು

ಧೂಮಕೇತುವು ಕೂಡ
ಮೂಡಿ ಕಾಡಿದರೆ ಹೇಗೆ ಹಾಗಾಯಿತು ॥ ೩೨ ॥

**ಶ್ರೇಷ್ಠಿ–ಕಾಯಸ್ಥ** (ಒಡವೆಗಳತ್ತ ಕಣ್ಣುಹಾಯಿಸಿ, ವಸಂತಸೇನೆಯ ತಾಯಿಯನ್ನು ಕುರಿತು) ತಾಯಿ, ಸಾವಧಾನವಾಗಿ ಈ ಒಡವೆಗಳನ್ನು ನೋಡಿ ಇವು ನಿನ್ನ ಮಗಳದು ಹೌದೆ ಅಲ್ಲವೆ ಹೇಳು

**ಮುದುಕಿ** (ದಿಟ್ಟಿಸಿ ನೋಡಿ) ಇದು ಅಂಥದೇ ಒಡವೆ ಆದರೆ ಅದಲ್ಲ

**ಶಕಾರ** ಛೀ, ಮುದಿದಲ್ಲಾಳಿ, ಕಣ್ಣಲ್ಲಿ ಗುರುತಿಶಿ ಬಾಯಲ್ಲಿ ಮುಚ್ಚಿಡ್ತೀಯಾ?

**ಮುದುಕಿ** ಆಸೆಗೇಡಿ, ತೊಲಗಾಚೆ

**ಶ್ರೇಷ್ಠಿ–ಕಾಯಸ್ಥ** ಸರಿಯಾಗಿ ಯೋಚಿಸಿ ಹೇಳು: ಇದು ಅದೇ ಹೌದೇ ಅಲ್ಲವೆ ಎಂದು

**ಮುದುಕಿ** ಅಯ್ಯಾ, ಅದೇ ಬಗೆಯ ನಾಜೂಕು ಕುಸುರು ಕೆಲಸಗಳಿಂದ ಹಾಗೆಯೆ ಕಾಣಿಸುವುದು ಹೌದು ಆದರೆ ಅದೇ ಇದಲ್ಲ

**ನ್ಯಾಯಾಧೀಶ** ಭದ್ರೆ, ಈ ಒಡವೆಗಳದ್ದು ನಿನಗೆ ಗುರುತಿಲ್ಲವೆ?

**ಮುದುಕಿ** ಹೇಳಿದೆನಲ್ಲ– ಇಲ್ಲ ಇಲ್ಲ –ನನಗೆ ಗೊತ್ತಿಲ್ಲ ಅಥವಾ ಒಂದೊಮ್ಮೆ ಅದೇ ಸೊನೆಗಾರ ಇದನ್ನೂ ಮಾಡಿರಬಹುದು – ಅಷ್ಟೆ

**ನ್ಯಾಯಾಧೀಶ** : ಶ್ರೇಷ್ಠಿಗಳೆ, ಗಮನಿಸಿ–

ಒಂದೆ ಬಗೆಯ ಹಲವು ವಸ್ತು
ಇರಬಹುದು ತಪ್ಪಲ್ಲ
ಒಬ್ಬ ಕಡೆದ ರೂಪವನ್ನು
ಕಂಡು ಹಾಗೆ ಮಾಡಬಹುದು
ಬೇರೆ ಶಿಲ್ಪಿಗಳು ಕೂಡ
ಕೈಯ ಚಳಕದಿಂದ ತೀರ
ಹೋಲಿಕೆಯೂ ಇರುವುದುಂಟು ॥ ೩೩ ॥

**ಶ್ರೇಷ್ಠಿ–ಕಾಯಸ್ಥ** ಆರ್ಯಚಾರುದತ್ತ, ಇವು ನಿನ್ನ ಒಡವೆಗಳೇನು?

**ಚಾರುದತ್ತ** ಅಲ್ಲ ಅಲ್ಲ

**ಶ್ರೇಷ್ಠಿ–ಕಾಯಸ್ಥ** ಹಾಗಾದರೆ ಯಾರದ್ದು?

**ಚಾರುದತ್ತ** · ಈಕೆಯ ಮಗಳದ್ದು

**ಶ್ರೇಷ್ಠಿ–ಕಾಯಸ್ಥ** : ಆಕೆಯ ಒಡವೆ ನಿನ್ನ ಬಳಿ ಹೇಗೆ ಬಂತು?

**ಚಾರುದತ್ತ** ಹೀಗೇ ಬಂತು ಛೀ ಇದು

**ಶ್ರೇಷ್ಠಿ–ಕಾಯಸ್ಥ** . ಆರ್ಯಚಾರುದತ್ತ, ಇಲ್ಲಿ ಸತ್ಯವನ್ನಷ್ಟೆ ಹೇಳಬೇಕು ನೋಡು–

ಸತ್ಯವನೆ ನುಡಿದವರು ಸುಖವನ್ನೆ ಪಡೆಯುವರು
ಸತ್ಯವನೆ ನುಡಿದಾಗ ಪಾಪಕ್ಕೆ ಎಡೆಯಿಲ್ಲ
'ಸತ್ಯ' ಎನ್ನುವ ಎರಡು ಅಕ್ಷರವೆ ಸಾಕು
ಸತ್ಯವನು ಸುಳ್ಳಿಂದ ಮುಚ್ಚಬೇಡ ॥ ೩೪ ॥

**ಚಾರುದತ್ತ** · ಈ ಆಭರಣ, ಆ ಆಭರಣ ಒಂದೂ ನನಗೆ ಗೊತ್ತಿಲ್ಲ ಅವುಗಳನ್ನು ನಮ್ಮ ಮನೆಯಿಂದ ತಂದದ್ದು ಎಂದು ಮಾತ್ರ ಗೊತ್ತು

**ಶಕಾರ** ಮೊದಲು ಹೂದೋಟಕ್ಕೆ ಕರಕೊಂಡು ಹೋಗಿ ಕೊಂದು, ಈಗ ಕಪಟನಾಟಕ ಹೂಡಿ ಮುಚ್ಚಿಡ್ತೀಯಾ?

**ನ್ಯಾಯಾಧೀಶ** ಆರ್ಯಚಾರುದತ್ತ, ಸತ್ಯ ಹೇಳು
ನಮ್ಮಾಸೆಗಳನೆಲ್ಲ ಹುಡಿಗೊಳಿಸಿ ಈಗ
ನಿನ್ನ ಈ ಮಿದುವಾದ ಮೈಯ ಮೇಲೆ
ಬೀಳಲಿದೆ ನಿಷ್ಠುರದ ಚಾಟಿಯೇಟು! ॥ ೩೫ ॥

**ಚಾರುದತ್ತ** ಪುಣ್ಯವಂತರ ಕುಲದಿ ಹುಟ್ಟಿದವ ನಾನು
ನಾನಂತು ಪಾಪವನು ಮಾಡಿದವನಲ್ಲ
ನನ್ನ ಮೇಲೆಯೆ ನೀವು ಸಂದೇಹಪಟ್ಟಿರಲು
ನಾನು ಪಾತಕಿಯಲ್ಲ ಎಂದುಸುರಿ ಫಲವೇನು? ॥ ೩೬ ॥

(ಸ್ವಗತ) ವಸಂತಸೇನೆಯನ್ನು ಕಳೆದುಕೊಂಡು ನಾನಾದರೂ ಬದುಕಿ ಫಲವೇನು? (ಪ್ರಕಾಶ) ಅಯ್ಯಾ, ಹೆಚ್ಚು ಮಾತೇಕೆ?

ದಯೆಯಿಲ್ಲದ ನಾನು
ಪರಲೋಕದ ಭಯವಿಲ್ಲದ ನಾನು
ಮುತ್ತಿನಂತಹ ಒಬ್ಬ ಹೆಣ್ಮಗಳನು
ಉಳಿದುದನು ಹೇಳುವನು ಇವನು ॥ ೩೭ ॥

**ಶಕಾರ** : ಕೊಂದಿದ್ದೇನೆ ಅರೆ ನೀನೂ ಹೇಳಯ್ಯಾ ನಾನೇ ಕೊಂದದ್ದು ಎಂದು

**ಚಾರುದತ್ತ** . ನೀನೇ ಹೇಳಿದೆಯಲ್ಲ?

**ಶಕಾರ** · ಕೇಳಿ ಅಯ್ಯನವರು, ಕೇಳಿ ಇವನೇ ಕೊಂದದ್ದು ಇವನೇ ಶಂಶಯ ಪರಿಹಾರ ಮಾಡಿದನಲ್ಲ ಈಗ ಈ ದರಿದ್ರಚಾರುದತ್ತನ ದೇಹಕ್ಕೆ ದಂಡನೆ ವಿಧಿಶೋಣಾಗಲಿ

**ನ್ಯಾಯಾಧೀಶ** . ಶೋಧನಕ, ರಾಜನ ಭಾವನಂಟ ಹೇಳೋದು ಸರಿ, ಭಟರೆ, ಈ ಚಾರುದತ್ತನನ್ನು ಬಂಧಿಸಿರಿ. (ಭಟರು ಬಂಧಿಸುತ್ತಾರೆ)

**ಮುದುಕಿ** . ಸ್ವಾಮಿ, ದಯಮಾಡಿ ಪ್ರಸನ್ನರಾಗಿ ನ್ಯಾಸವಾಗಿಟ್ಟ ಚಿನ್ನವನ್ನು ರಾತ್ರೆ ಕಳ್ಳರು ಕದ್ದರು ಎಂದು ಅದಕ್ಕೆ ಪ್ರತಿಯಾಗಿ ಭೂಮಂಡಲದಲ್ಲೆ

ಅಪೂರ್ವವಾದ ಮುತ್ತಿನ ಹಾರವನ್ನು ಕಳಿಸಿಕೊಟ್ಟ ಈ ಮಹಾನುಭಾವ ಈಗ ದುಡ್ಡಿನ ಕಾರಣಕ್ಕಾಗಿ ಇಂಥ ಅಕಾರ್ಯ ಮಾಡ್ತಾನೇನು? ನನ್ನ ಮಗಳು ಹೋದವಳು ಹೇಗೂ ಹೋದಳು ಈತನನ್ನಾದರೂ ಬದುಕಿಸಿ ಅಲ್ಲದೆ, ವಾದಿ ಪ್ರತಿವಾದಿಗಳಿಗೆ ವಿವಾದ ತಾನೆ? ನಾನು ವಾದಿಯಾಗಿ ಬಂದು ಕೇಳುತಿದ್ದೇನೆ: ಈತನನ್ನು ಬಿಡುಗಡೆಗೊಳಿಸಿ

**ಶಕಾರ** . ತೊಲಗು ಹುಟ್ಟು ತೊತ್ತಿನವಳೆ, ಹೋಗುಹೋಗು ಅವನನ್ನು ಕಟ್ಟಿಕೊಂಡು ಏನು ಮಾಡ್ತೀಯಾ?

**ನ್ಯಾಯಾಧೀಶ** · ನೀನು ಹೋಗವ್ವ ಭಟರೆ, ಈಕೆಯನ್ನು ಹೊರಕ್ಕೆ ಕಳಿಸಿರಿ

**ಮುದುಕಿ:** ಹಾಯ್ ಕಂದ, ಹಾಯ್ ನನ್ನ ಮಗನೆ, (ಎಂದು ಅಳುತ್ತ ಹೋಗುತ್ತಾಳೆ )

**ಶಕಾರ** (ಸ್ವಗತ) ಇವನಿಗೆ ನಾನು ಏನು ಮಾಡಬೇಕೊ ಅದನ್ನು ಮಾಡಿದ್ದಾಯಿತು ಇನ್ನು ಹೋಗ್ತೇನೆ (ಎಂದು ಹೋಗುತ್ತಾನೆ )

**ನ್ಯಾಯಾಧೀಶ** . ಆರ್ಯಚಾರುದತ್ತ, ತೀರ್ಪು ಕೊಡುವುದು ನಮ್ಮ ಕೆಲಸ ಉಳಿದದ್ದು ರಾಜರಿಗೆ ಬಿಟ್ಟದ್ದು ಆದರೂ ಶೋಧನಕ, ಪಾಲಕ ಮಹಾರಾಜನಲ್ಲಿ ಹೀಗೆ ವಿಜ್ಞಾಪಿಸಿಕೋ:

ಈತ, ಈ ಬ್ರಾಹ್ಮಣನು ಅಪರಾಧಿಯಾದರೂ
ಕೊಲ್ಲಬಾರದು ಎಂದು ಮನುವಚನವುಂಟು
ಅವನೆಲ್ಲ ಸಂಪತ್ತು–ಸೊತ್ತುಗಳ ಜತೆಗೆ
ಕಳಿಸಬಹುದವನನ್ನು ಗಡಿಯಿಂದ ಹೊರಗೆ ॥ ೩೮ ॥

**ಶೋಧನಕ** . ಅಪ್ಪಣೆ (ಎಂದು ಹೋಗಿ, ಮತ್ತೆ ಪ್ರವೇಶಿಸಿ, ಕಂಬನಿ ಮಿಡಿಯುತ್ತ) ಅಯ್ಯೋ, ಅಲ್ಲಿಗೆ ಹೋದೆ ಮಹಾರಾಜರು ಹೇಳುತ್ತಾರೆ: "ಪುಡಿಗಾಸಿನಾಸೆಗಾಗಿ ವಸಂತಸೇನೆಯನ್ನು ಕೊಂದವನನ್ನು, ಅದೇ ಒಡವೆಗಳನ್ನು ಅವನ ಕೊರಳಿಗೆ ಬಿಗಿದು, ಡೋಲು ಬಾರಿಸಿಕೊಂಡು ಬೀದಿಯಲ್ಲಿ ಒಯ್ದು, ತೆಂಕುದಿಕ್ಕಿನ ಮಸಣದಲ್ಲಿ ಶೂಲಕ್ಕೇರಿಸಿರಿ" ಎಂದು. ಇನ್ನು ಯಾರಾದರೂ ಇಂಥ ಅಕಾರ್ಯ ಮಾಡಿದರೂ ಅವನಿಗೂ ಇದೇ ಗತಿಯಾಗುತ್ತದೆ ಎಂದು ಎಚ್ಚರಿಸಿದ್ದಾರೆ

**ಚಾರುದತ್ತ** : ಓಹ್, ಎಂಥ ದುಡುಕಿನ ನಿರ್ಣಯ ಈ ರಾಜನದು! ಅಥವಾ–

ಇಂಥ ವ್ಯವಹರಣೆಯ ಬೆಂಕಿಯಲಿ ತಳ್ಳುವರು
ಮಂತ್ರಿಗಳು ರಾಜನನ್ನು
ಇದಕೆ ಬಲಿಬಿದ್ದ ಮುಗ್ಧ ರಾಜರ ಪಾಡು
ನಿಜವಾಗಿ ಶೋಚನೀಯ ॥ ೩೯ ॥

ಅಲ್ಲದೆ–

ರಾಜಶಾಸನವನ್ನು ಕೆಡಿಸಲೆಂದೇ ಇರುವ
ಇಂಥ ಬಿಳಿಕಾಗೆಗಳ ಕಾರಣಕ್ಕಾಗಿ
ನೂರು–ಸಾವಿರ ನಿರಪರಾಧಿಗಳು ಈಗಲೂ
ಸಾಯುತಿರುವರು, ಹಿಂದೆ ಸತ್ತಿರುವರು || ೪೦ ||

ಗೆಳೆಯ ಮೈತ್ರೇಯ, ಹೋಗು ನನ್ನ ಪರವಾಗಿ ತಾಯಿಗೆ ಕೊನೆಯ ನಮಸ್ಕಾರಗಳನ್ನು ತಿಳಿಸು ನನ್ನ ಕಂದ ರೋಹಸೇನನನ್ನು ಚೆನ್ನಾಗಿ ನೋಡಿಕೋ

**ವಿದೂಷಕ** ಬೇರನ್ನೆ ಕಡಿದು ಮರ ಏನು ಸಾಕೋದು?

**ಚಾರುದತ್ತ** · ಅಲ್ಲ, ಹಾಗಲ್ಲ–
ಪರಲೋಕ ಪಡೆದಿರುವ ಮನುಜರಿಗೆ
ಮಕ್ಕಳೇ ಪಡಿನೆಳಲ ಹಾಗೆ
ನನ್ನಲ್ಲಿ ನಿನಗಿದ್ದ ಪ್ರೀತಿಯಿನ್ನು
ರೋಹಸೇನನಿಗೆ ಸಲ್ಲಬೇಕು || ೪೧ ||

**ವಿದೂಷಕ** · ಅಲ್ಲ ಗೆಳೆಯ, ನಾನು ನೀನು ಇಂಥ ಗೆಳೆಯರಾಗಿದ್ದೂ ನಿನ್ನನ್ನು ಕಳಕೊಂಡು ಮತ್ತೆ ನಾನು ಮಾತ್ರ ಬದುಕಿರಬೇಕಾ?

**ಚಾರುದತ್ತ** . ರೋಹಸೇನನನ್ನಾದರೂ ನಮಗೊಮ್ಮೆ ತಂದು ತೋರಿಸು

**ವಿದೂಷಕ** : ಆಯಿತು ಸರಿ

**ನ್ಯಾಯಾಧೀಶ** . ಭದ್ರ ಶೋಧನಕ, ಈ ಮಾಣಿಯನ್ನಾಚೆ ಕಳಿಸು (ಶೋಧನಕ ಹಾಗೆಯೆ ಮಾಡುತ್ತಾನೆ )

**ನ್ಯಾಯಾಧೀಶ** : ಯಾರಲ್ಲಿ? ಕೊಲೆಗಡುಕರಿಗೆ ಆದೇಶ ನೀಡಿ (ಚಾರುದತ್ತನನ್ನು ಬಿಟ್ಟು ಎಲ್ಲ ರಾಜಕೀಯ ವ್ಯಕ್ತಿಗಳೂ ಹೋಗುತ್ತಾರೆ )

**ಶೋಧನಕ** : ಇತ್ತ, ಇತ್ತ ಬನ್ನಿ ಅಯ್ಯ

**ಚಾರುದತ್ತ** · (ದೈನ್ಯದಿಂದ)
ಓ ಗೆಳೆಯ ಮೈತ್ರೇಯ
ಎಂಥ ಆಘಾತವಿದು ನನ್ನ ಮೇಲೆರಗಿತು!
ಒಳ್ಳೆಯ ಬ್ರಾಹ್ಮಣರ ಕುಲದಲ್ಲಿ ಹುಟ್ಟಿಯೂ
ನನ್ನ ಕೈಹಿಡಿದ ಓ ನಿರ್ಭಾಗ್ಯ ಹೆಣ್ಣೆ!
ಓ ಕಂದ ರೋಹಸೇನ,
ನೀನು ಕಾಣುತ್ತಿಲ್ಲ ನನ್ನ ಈ ಪಾಡನ್ನು
ಇಲ್ಲಿ ದುಃಖದ ಮಡುವೆ ಬಾಯ್ದೆರೆದು ನಿಂತಿದೆ
ಸುಳ್ಳೆ ಸಂತಸದಲ್ಲಿ ನೀನಾಡುತಿರುವೆ! (೯/ ೨೮)

(ಆಕಾಶದಲ್ಲಿ)–

ವಿಷವೋ, ನೀರೋ ಅಥವ ತಕ್ಕಡಿಯೊ ಬೆಂಕಿಯೋ
ಪಾಪದ ಪರೀಕ್ಷೆಗೀ ಸಾಧನಗಳಿದ್ದವು
ನೀನೆನ್ನ ಗರಗಸದಿ ಸಿಗಿಯಬಯಸಿದೆಯಲಾ!
ನನ್ನ ಹಗೆಯಾದವನ ಸಾಕ್ಷಿಯನ್ನೇ ನಂಬಿ
ಕೊಲ್ಲಹೊರಟಿರುವೆ ಈ ಬ್ರಾಹ್ಮಣನನು!
ನೀನು ನರಕದ ದಾರಿ ತೆರೆದುಕೊಂಡೆ
ನಿನ್ನ ಮಕ್ಕಳು ಮತ್ತು ಮೊಮ್ಮಕ್ಕಳೊಡನೆ ॥ ೪೨ ॥

ಇದೋ ಬಂದೆ

(ಎಂದು ಎಲ್ಲರೂ ಹೋಗುತ್ತಾರೆ)

**"ನ್ಯಾಯಾಲಯದಲ್ಲಿ ವಿಚಾರಣೆ" ಎಂಬ**
**ಒಂಬತ್ತನೆಯ ಅಂಕ**
**ಮುಗಿಯಿತು.**

## ಅಂಕ ಹತ್ತು

## ಮುಗಿತಾಯ

(ಪ್ರವೇಶಿಸಿ: ಕೊಲೆಗಡುಕರಿಬ್ಬರೊಡನೆ ಚಾರುದತ್ತ)

**ಇಬ್ಬರೂ** : ಏನು, ಏತಕೆ ಎಂದು
ಕಾರಣವ ಕೇಳದಿರಿ
ನಾವು ಕೋವಿದರಯ್ಯ
ಕಟ್ಟಿಕೊಂಡೊಯ್ಯಲಿಕೆ ಮತ್ತು ಕೊಲ್ಲಲಿಕೆ
ತಡಮಾಡದೆ ತಲೆಯ ಕಡಿಯಬೇಕೆ?
ಶೂಲಕೇರಿಸಬೇಕೆ?
ನಾವು ಪರಿಣತರಯ್ಯ ಈ ವಿದ್ಯೆಯಲ್ಲಿ ॥ ೧ ॥

ಸರೀರಪ್ಪೋ ಸರೀರಿ ಈತ ಆರ್ಯಚಾರುದತ್ತ–
ಇವನ ಕೊರಳಿಗೆ ಹಾಕಿ ಕರವೀರದಾ ಮಾಲೆ
ಕರೆತರುತ್ತಿದ್ದೇವೆ
ಕೊಲೆಗಡುಕರೋ ನಾವು
ಮೆಲ್ಲಮೆಲ್ಲನೆ ಇವನು ನಂದಿಹೋಗುತ್ತಿಹನು
ಎಣ್ಣೆಯಾರಿದ ದೀಪದಂತೆ ॥ ೨ ॥

**ಚಾರುದತ್ತ** : (ದುಃಖದಿಂದ)–
ಕಂಬನಿ ಸುರಿದು ನೆನೆದಿದೆ
ಧೂಳಿಡಿದು ಕೆಂಜಡರಿದೆ
ಮಸಣದಲಿ ಬೆಳೆದ ಹೂ ತೊಟ್ಟ ಈ ಮೈ
ಬಳಿದ ಕೆಂಪು ಚಂದನಕ್ಕೆ
ಮಾಂಸದೊಂದು ಬಲಿಯಿದೆಂದು
ಭ್ರಮಿಸಿಕೊಂಡ ಕಾಗೆಗಳು
ಹೊಂಚುತಿವೆ ಬಾಯಲ್ಲಿ ನೀರು ಸುರಿಸುತ್ತ ॥ ೩ ॥

**ಕೊಲೆಗಡುಕರು** : ಸರೀರಪ್ಪೋ, ಸರೀರಿ
ಕೊಡಲಿಗೆ ತಲೆಕೊಡಲಿರುವ
ಈ ಸತ್‌ಪುರುಷನನ್ನು
ಸುಜನರೆಂಬ ಹಕ್ಕಿಗಳಿಗೆ
ನೆಲೆಯಿತ್ತು ಸಲಹಿದ್ದ
ಈ ಮಹಾವೃಕ್ಷವನ್ನು
ಏಕಿಂತು ನೋಡುವಿರಿ ಈತನನ್ನು? ॥ ೪ ॥

ಬಾ ಚಾರುದತ್ತ, ಬಾ

**ಚಾರುದತ್ತ** ಮನುಷ್ಯನ ಭಾಗ್ಯ ಯಾವಾಗ ಎತ್ತ ತಿರುಗುತ್ತದೆ ಎಂದು ಯಾರಿಗೆ ಗೊತ್ತು! ಇಲ್ಲವಾದರೆ ನನಗೆ ಇಂಥ ಪಾಡು ಬರಬೇಕೆ?

ಮೈತುಂಬ ಚಂದನದ ಕೆಂಪು ಕೈತಟ್ಟು
ಅದರ ಮೇಲಕೆ ಮತ್ತೆ ಬಿಳಿಯ ಹಿಟ್ಟು
ಘನತೆ-ಗೌರವ ಪಡೆದ ವ್ಯಕ್ತಿ ನಾನಾಗಿಯೂ
ಪಶುವಿಗಿಂತಲು ಕೀಳು ನನ್ನ ಪಾಡಾಯಿತು || ೫ ||

(ಎದುರುಗಡೆ ನೋಡಿ) ಓಹ್, ಎಂಥ ಪಕ್ಷಪಾತ ಈ ಜನರಲ್ಲಿ! (ಕರುಣೆದುಂಬಿ)

ನನ್ನ ಈ ಪಾಡನ್ನು ಕಂಡ ಈ ಜನರು
ಕಣ್ಣೀರು ಮಿಡಿಯುತ್ತ ನುಡಿಯುತಿಹರು
ಧಿಕ್ಕಾರವಿರಲಿ ಈ ನರಜನ್ಮಕೆಂದು!
ಕಾಪಾಡಲಾರದವರಾಗಿ ನನ್ನನ್ನವರು
ಸ್ವರ್ಗವನು ಸೇರೆಂದು ಹರಸುತಿಹರು || ೬ ||

**ಕೊಲೆಗಡುಕರು** ಸರೀರಪ್ಪೋ ಸರೀರಿ ಏನು ನೋಡುತ್ತೀರಿ?

ಸೋತ ರಾಜನು ರಾಜ್ಯ ತೊರೆದು ಓಡುವುದನ್ನು
ಹಸುಗಳೀಯುವುದನ್ನು, ತಾರೆ ಸಿಡಿಯುವುದನ್ನು
ಹಾಗೆಯೇ ಸಜ್ಜನರ ಸಾವಿನಾಪತ್ತನ್ನು
ನೋಡಬಾರದು ಜನರು ಹೀಗೆ ನಾಕನ್ನು || ೭ ||

**ಒಬ್ಬ** ಅರೆ, ಆಹೀಂತ, ನೋಡು ನೋಡು-

ವಿಧಿಯ ಆಣತಿಯಂತೆ
ಊರಿಗೇ ಮೊದಲಿಗನು
ಸಾವಿನೆಡೆ ನಡೆದಾಗ
ಆಕಾಶ ಅಳುತಿದೆಯೆ
ಮೋಡವಿಲ್ಲದೆಯೆ ಅಥವ
ಸಿಡಿಲೆರಗುತಿದೆಯೆ? || ೮ ||

**ಇನ್ನೊಬ್ಬ** ಅರೆ ಗೋಹಾ,

ಆಕಾಶ ಅಳುತಿಲ್ಲ
ಮೋಡವಿಲ್ಲದೆಯೆ ಅಥವ
ಸಿಡಿಲು ಸಿಡಿಯುತ್ತಿಲ್ಲ
ಹೆಣ್ಮಕ್ಕಳೆಂಬ ಮೋಡ
ಕಣ್ಣೀರು ಸುರಿಸುತಿದೆ
ಧಾರೆಯಲಿ-ಅಷ್ಟೆ || ೯ ||

ಅಲ್ಲದೆ–

ಈತನನು ಕೊಲಲೆಂದು ಕೊಂಡೊಯ್ಯುತಿರುವಾಗ
ಕಣ್ಣೀರು ಸುರಿಸುತಿದೆ ಸುತ್ತ ಜನವೆಲ್ಲ
ಸುರಿದ ಕಂಬನಿಯಿಂದ ನೆನೆದ ಬೀದಿಗಳಿಂದ
ಧೂಳು ಕೂಡಾ ಮೇಲಕೇಳುತಿಲ್ಲ ॥ ೧೦ ॥

**ಚಾರುದತ್ತ** (ದಿಟ್ಟಿಸಿ ದೈನ್ಯದಿಂದ)
ಮಹಡಿಯಲಿ ನಿಂತ ಈ ಮಹಿಳೆಯರು
ಕಿಟಕಿಯೆಡೆಯಲ್ಲಿ ಮೋರೆಯನು ತೂರಿ
ಚಾರುದತ್ತನೆ ಅಯ್ಯೋ ಎಂದು ನುಡಿಯುತ್ತ
ಕಣ್ಣ ನಾಲೆಗಳಿಂದ ನೀರು ಸುರಿಸುವರು ॥ ೧೧ ॥

**ಕೊಲೆಗಡುಕರು** ಬಾ ಚಾರುದತ್ತ, ಬಾ ಇದು ಘೋಷಣೆಯ ತಾಣ ಇಲ್ಲಿ ಘೋಷಿಸಬೇಕು ನಗಾರಿ ಬಾರಿಸಿರಿ

**ಇಬ್ಬರೂ** ಕೇಳಿರಯ್ಯಾ ಕೇಳಿರಿ ಈತ ವ್ಯಾಪಾರಿ ವಿನಯದತ್ತನ ಮೊಮ್ಮಗ; ಸಾಗರದತ್ತನ ಮಗ; ಆರ್ಯಚಾರುದತ್ತ ಎಂದು ಹೆಸರು ಈತ ಮಾಡ ಬಾರದ ಕೆಲಸ ಮಾಡಿದ ಕೇವಲ ಹಣದ ಆಸೆಗಾಗಿ ವೇಶ್ಯೆ ವಸಂತಸೇನೆ ಯನ್ನು ಹಳೆಯ ಹೂದೋಟ ಪುಷ್ಪಕರಂಡಕಕ್ಕೆ ಕರೆದೊಯ್ದು ಕುತ್ತಿಗೆ ಹಿಚುಕಿ ಕೊಲೆ ಮಾಡಿದ ಕದ್ದ ಮಾಲಿನ ಜತೆಗೆ ಈತನನ್ನು ಸೆರೆ ಹಿಡಿಯಲಾಯಿತು ಮತ್ತು ಈತನೇ ತನ್ನ ತಪ್ಪನ್ನು ಒಪ್ಪಿಕೊಂಡಿದ್ದಾನೆ ಆದರಿಂದ ಪಾಲಕ ಮಹಾರಾಜರು ಈತನನ್ನು ಗಲ್ಲಿಗೇರಿಸಬೇಕೆಂದು ಆಜ್ಞೆ ಮಾಡಿದ್ದಾರೆ ಇಹಪರಗಳಿಗೆ ಸಲ್ಲದ ಇಂಥ ಕೆಟ್ಟಕೆಲಸವನ್ನು ಇನ್ನು ಯಾರಾದರೂ ಮಾಡಿದರೂ ಅವರಿಗೂ ಮಹಾರಾಜರು ಇಂಥದೇ ಶಿಕ್ಷೆಯನ್ನು ವಿಧಿಸುತ್ತಾರೆ ನೆನಪಿರಲಿ

**ಚಾರುದತ್ತ** (ಬೇಸರದಿಂದ, ಸ್ವಗತ)
ನೂರಾರು ಯಾಗಗಳಿಂದ
ಪಾವನವಾದೀ ನನ್ನ ಕುಲದ ಹೆಸರನ್ನು
ಯಾಗಶಾಲೆಗಳಲ್ಲಿ
ವೇದಘೋಷದ ನಡುವೆ
ಹೊಗಳುತಿದ್ದರು ಹಿಂದೆ
ಈಗದೇ ಹೆಸರು
ನಾನು ಸಾವಿನ ಕೊನೆಯ ಗಳಿಗೆಯಲ್ಲಿರುವಾಗ
ಪಾತಕಿಗಳಾದ ಈ ಕೊಲೆಗಡುಕರಿಂದ
ಘೋಷಿಸಲ್ಪಡುತಿದೆ! ॥ ೧೨ ॥

(ಉದ್ವೇಗದಿಂದ ಕಿವಿಗಳನ್ನು ಮುಚ್ಚಿಕೊಂಡು)

ಹಾ ಪ್ರಿಯೆ, ವಸಂತಸೇನೆ,

ಬೆಳುದಿಂಗಳಂತೆ ಚೆಲುದಂತಪಂಕ್ತಿಯವಳೆ,
ಹವಳಕ್ಕೆ ಸಮನಾದ ಚೆಂದುಟಿಯ ಚೆಲುವೆ,
ನಿನ್ನ ತುಟಿಸೊದೆಯನ್ನು ಸವಿದು ಮೈಮರೆತವನು
ಹೇಗೆ ಕುಡಿಯಲಿ ಈಗ ಅಪಯಶದ ಈ ವಿಷ? ॥ ೧೩ ॥

**ಇಬ್ಬರೂ** : ಸರೀರಪ್ಪೋ ಸರೀರಿ
ಈತ ಗುಣಗಳ ಕಡಲು
ಸಜ್ಜನರ ದುಃಖಗಳ ದಾಟುಸೇತುವೆಯೀತ
ಚಿನ್ನಕ್ಕು ಮಿಗಿಲಾದ ಒಡವೆಯೀತ
ಈತನನು ನಾವು ಕೊಂಡೊಯ್ಯುತಿದ್ದೇವೆ
ಬಲು ದೂರ ಊರಿಂದ ಹೊರಗೆ ॥ ೧೪ ॥

ಅಲ್ಲದೆ–

ಸುಖದಲ್ಲಿ ಇದ್ದಾಗ ಎಲ್ಲರೂ ಇದ್ದಾರೆ
ಬಂದು ಹೋಗಿ ವಿಚಾರಿಸುವ ಮಂದಿ
ಎಡವಿ ಬಿದ್ದಾಗಲೂ ನೆರವಿಗೆ ನಿಲ್ಲುವವರು
ಹುಡುಕಿದರು ಸಿಗುವುದಿಲ್ಲ ॥ ೧೫ ॥

**ಚಾರುದತ್ತ** . (ಸುತ್ತಲೂ ನೋಡಿ)
ಬಟ್ಟೆಯ ತುದಿಯಿಂದ ಮೋರೆಯನು ಮರೆಮಾಡಿ
ದೂರ ಸರಿಯುತಿದ್ದಾರೆ ಗೆಳೆಯರೆಲ್ಲ
ಎಲ್ಲ ಸರಿಯಿದ್ದಾಗ ಹಗೆಯವನು ಕೂಡ
ಗೆಳೆಯನಾಗುತ್ತಾನೆ
ಬಾಳು ಹದಗೆಟ್ಟವಗೆ ಗೆಳೆಯನೇ ಇಲ್ಲ ॥ ೧೬ ॥

**ಕೊಲೆಗಡುಕರು** . ಜನರನ್ನು ದೂರ ಸರಿಸಿದ್ದಾಯಿತು ರಾಜಬೀದಿ ಖಾಲಿಯಾಗಿದೆ ಆದರಿಂದ ಸಾವಿನ ಸಂಕೇತಗಳನ್ನು ಹೊತ್ತ ಈತನನ್ನು ಕೊಂಡೊಯ್ಯೋಣ

**ಚಾರುದತ್ತ** (ನಿಟ್ಟುಸಿರುಗರೆದು)–
ಓ ಗೆಳೆಯ ಮೈತ್ರೇಯ,
ಎಂಥ ಆಘಾತವಿದು ನನ್ನ ಮೇಲೆರಗಿತು!
ಒಳ್ಳೆಯ ಬ್ರಾಹ್ಮಣರ ಕುಲದಲ್ಲಿ ಹುಟ್ಟಿಯೂ
ನನ್ನ ಕೈ ಹಿಡಿದ ಓ ನಿರ್ಭಾಗ್ಯ ಹೆಣ್ಣೆ,

ಓ ಕಂದ ರೋಹಸೇನ,
ನೀನು ಕಾಣುತ್ತಿಲ್ಲ ನನ್ನ ಈ ಪಾಡನ್ನು
ಇಲ್ಲಿ ದುಃಖದ ಮಡುವೆ ಬಾಯ್ದೆರೆದು ನಿಂತಿದೆ
ಸುಳ್ಳೆ ಸಂತಸದಲ್ಲಿ ನೀನಾಡುತಿರುವೆ! (೯/ ೨೮)

(ತೆರೆಯ ಮರೆಯಲ್ಲಿ)

ಓ ಅಪ್ಪಾ ಹಾಯ್ ಪ್ರಿಯಮಿತ್ರಾ

**ಚಾರುದತ್ತ** (ಕಿವಿಗೊಟ್ಟು ದೈನ್ಯದಿಂದ) ಓ ಕೊಲೆಗಡುಕರ ಗುರಿಕಾರ, ನಿನ್ನಿಂದ ನಾನೊಂದು ದಾನಬೇಡ್ತಾ ಇದೇನೆ

**ಕೊಲೆಗಡುಕರು** ಏನು, ನಮ್ಮ ಕೈಯಿಂದ ದಾನ ತೊಗೊಳ್ತೀಯಾ?

**ಚಾರುದತ್ತ** ಶಾಂತಂ ಪಾಪಂ ನೀವು ಹೊಲೆಯರಲ್ಲ ವಿಚಾರಿಸದೆ ದುಡುಕಿನಿಂದ ನಿರಪರಾಧಿಗೆ ಶಿಕ್ಷೆ ನೀಡಿದ ನಿಮ್ಮ ರಾಜನಂಥ ಹೊಲೆಯ ಬೇರಿಲ್ಲ ಅದರಿಂದ ನೆಮ್ಮದಿಯಾಗಿ ಪರಲೋಕವನ್ನು ಸೇರುವುದಕ್ಕಾಗಿ, ಸಾವಿನ ಈ ಕೊನೆಯ ಗಳಿಗೆಯಲ್ಲಿ ನನ್ನ ಮಗುವಿನ ಮೋರೆಯನ್ನೊಮ್ಮೆ ನೋಡಗೊಡಿ ಎಂದು ಬೇಡುತಿದ್ದೇನೆ

**ಕೊಲೆಗಡುಕರು** ಹಾಗೇ ಮಾಡು

(ತೆರೆಯ ಮರೆಯಲ್ಲಿ)

ಓ ಅಪ್ಪಾ, ಅಪ್ಪಾಽಽ

**ಚಾರುದತ್ತ** (ಆಲಿಸಿ, ದೈನ್ಯದಿಂದ) ಓ ಕೊಲೆಗಡುಕರ ಗುರಿಕಾರ, ನಿನ್ನಿಂದ ನಾನೊಂದು ದಾನ ಬೇಡ್ತಾ ಇದ್ದೇನೆ

**ಕೊಲೆಗಡುಕರು** ಓ ನಾಗರಿಕರೆ, ಒಂದು ಕ್ಷಣ ದಾರಿ ಬಿಡಿ ಆರ್ಯ ಚಾರುದತ್ತ ತನ್ನ ಮಗನ ಮೋರೆಯನ್ನು ನೋಡಲಿ (ತೆರೆಯ ಕಡೆಗೆ ನೋಡಿ) ಅಯ್ಯ, ಇತ್ತ ಬಾ, ಇತ್ತ ಬಾ ಏ ಮಗೂ, ಬಾ, ಇಲ್ಲಿ ಬಾ

(ಪ್ರವೇಶ: ಮಗುವನ್ನು ಹಿಡಿದುಕೊಂಡ ವಿದೂಷಕ)

**ವಿದೂಷಕ** ಬೇಗ ಬಾ, ಬೇಗ ಬಾ ಮುದ್ದು ನಿನ್ನ ತಂದೆಯನ್ನು ಕೊಲ್ಲಲು ಕೊಂಡೊಯ್ಯುತಿದ್ದಾರೆ

**ಮಗು** · ಅಪ್ಪಾ ಓ ಅಪ್ಪಾಽಽ

**ವಿದೂಷಕ** . ಹಾಯ್ ಗೆಳೆಯ, ನಿನ್ನನ್ನು ನಾನು ಇನ್ನೆಲ್ಲಿ ನೋಡಬೇಕು?

**ಚಾರುದತ್ತ** (ಮಗನನ್ನೂ ಗೆಳೆಯನನ್ನೂ ನೋಡಿ) ಹಾ ಮಗೂ, ಹಾಯ್ ಮೈತ್ರೇಯ, (ದೈನ್ಯದಿಂದ) ಹಾಯ್ ಕಷ್ಟವೇ!–

ಈ ಪುಟ್ಟಕೈಯಿಂದ ನೀಡಿದ ಜಲಾಂಜಲಿಯು
ನನ್ನ ತಣಿಸಲಿಕೆ ಸಾಕಾಗದೆ

ನಾನು ಪರಲೋಕದಲಿ ನೀರಡಿಕೆಯಿಂದಲೇ
ಬಹುಕಾಲ ಬಳಲಲುಂಟು ॥ ೧೭ ॥

ಏನು ಕೊಡಲಿ ಮಗುವಿಗೆ? (ಮೈಯನ್ನು ನೋಡಿಕೊಂಡು, ಯಜ್ಞೋಪವೀತವನ್ನು ಕಂಡು) ಓ್ಲಂ ಇದೊಂದಿದೆ

ಮುತ್ತು-ಬಂಗಾರಕಿಂತಲೂ ಮಿಗಿಲಾದ
ಬ್ರಾಹ್ಮಣರ ಒಡವೆಯಿದು
ದೇವರಿಗೆ, ಪಿತೃಗಳಿಗೆ
ತರ್ಪಣವನೀಯಲಿಕೆ ಸಾಧನವಿದು ॥ ೧೮ ॥

(ಎಂದು ಯಜ್ಞೋಪವೀತವನ್ನು ಕೊಡುತ್ತಾನೆ )

**ಕೊಲೆಗಡುಕ** · ಬಾ, ಚಾರುದತ್ತ, ಬಾ

**ಎರಡನೆಯವ** : ಏಯ್, ಆರ್ಯಚಾರುದತ್ತನನ್ನು ಬರಿದೆ ಹೆಸರಿನಿಂದ ಕೂಗಿ ಕರೀತೀಯಾ? ಅರೆ, ನೋಡು-

ಬಾಳಿನ ಏಳಿನಲ್ಲಿ ಮತ್ತು ಬೀಳಿನಲ್ಲಿ
ಮನುಷ್ಯನನ್ನು ಆಕ್ರಮಿಸುತ್ತದೆ
ವಿಧಿನಿಯತಿ ಹಗಲಿರುಳು
ಹಿರಿಯರ ಹಂಗು ತೊರೆದ ಹರೆಯದ ಹೆಣ್ಣಿನಂತೆ
ಅದು ಹೋದುದೇ ದಾರಿ,
ಅದನಾರು ತಡೆಯುವವರಿಲ್ಲ ॥ ೧೯ ॥

ಅಲ್ಲದೆ-

ಹೇಗೆ ಕರೆದರು ಒಂದೆ ಈತನನ್ನೀಗ
ಆದರೂ ತಪ್ಪೇನು
ನಾವು ಗೌರವದಿಂದ ತಲೆಬಾಗಿ ನಡೆಯುವುದು?
ರಾಹು ಕಬಳಿಸಿದರೇನು
ಚಂದ್ರ, ಚಂದ್ರನೆ ತಾನೆ
ಪೂಜಿಸುವುದಿಲ್ಲೇನು ಜನರಾಗಲೂ? ॥ ೨೦ ॥

**ಮಗು** ಅಯ್ಯಾ ಚಂಡಾಲರೆ, ನನ್ನ ತಂದೆಯನ್ನು ಎಲ್ಲಿಗೆ ಕೊಂಡು ಹೋಗುತ್ತೀರಿ?

**ಚಾರುದತ್ತ** . ಮಗೂ,

ಕೊರಳಲ್ಲಿ ಕರವೀರದ ಕೆಂಪು ಮಾಲೆ ತೊಟ್ಟು
ಹೆಗಲಲ್ಲಿ ಶೂಲ ಎದೆಯಲ್ಲಿ ಶೋಕ ತೊಟ್ಟು

ನಾನು ಸಾವಿನ ಮನೆಗೆ ಸಾಗುತಿದ್ದೇನೆ
ಬಲಿಗಂಬದೆಡೆ ನಡೆವ ಆಡಿನಂತೆ ॥ ೨೦ ॥

**ಕೊಲೆಗಡುಕ** ಮಗೂ,
ಚಂಡಾಲರ ಕುಲದಲ್ಲಿ ನಾವು ಹುಟ್ಟಿದ್ದು ಹೌದು
ಆದರೆ ನಿಜವಾಗಿ ನಾವು ಚಂಡಾಲರಲ್ಲ
ಯಾರು ಒಳ್ಳೆಯತನಕೆ ಬೆಲೆಕೊಡುವುದಿಲ್ಲವೋ
ಅಂಥವರೆ ಪಾತಕಿಗಳು
ಅವರೆ ನಿಜವಾದ ಚಂಡಾಲರು ॥ ೨೨ ॥

**ಮಗು** ಹಾಗಾದರೆ ನೀವೇಕೆ ನನ್ನ ತಂದೆಯನ್ನು ಕೊಲ್ಲುತ್ತೀರಿ?

**ಕೊಲೆಗಡುಕ** ಚಿರಂಜೀವಿ, ಇದು ರಾಜಾಜ್ಞೆಯ ಅಪರಾಧ; ನಮ್ಮದಲ್ಲ

**ಮಗು** : ನನ್ನನ್ನು ಕೊಲ್ಲಿ ತಂದೆಯನ್ನು ಬಿಟ್ಟುಬಿಡಿ

**ಕೊಲೆಗಡುಕ** ಚಿರಂಜೀವಿ, ಇಂಥ ಮಾತನ್ನೆ ಆಡುತ್ತ ಬಹುಕಾಲ ಬದುಕು ನನ್ನ ಕಂದ

**ಚಾರುದತ್ತ** (ಕಂಬನಿದುಂಬಿ, ಮಗನನ್ನು ಕೊರಳಲ್ಲಿ ಅಪ್ಪಿಹಿಡಿದು)–
ದುಡ್ಡಿದ್ದವರಿಗು ದುಡ್ಡಿರದವರಿಗು
ಸಮನಾಗಿ ಸಿಗುವಂಥ ಒಲವಿನ ನಿಧಿಯಿದು
ಚಂದನ ಬಳಿಯದೆ, ಲಾಮಂಚ ನೀಡದೆ
ಎದೆಗೆ ತಂಪೆರೆವಂಥ ಲೇಪನವಿದು ॥ ೨೩ ॥

ಕೊರಳಲ್ಲಿ ಕರವೀರದ ಕೆಂಪು ಮಾಲೆ ತೊಟ್ಟು
ಹೆಗಲಲ್ಲಿ ಶೂಲ, ಎದೆಯಲ್ಲಿ ಶೋಕ ತೊಟ್ಟು
ನಾನು ಸಾವಿನ ಮನೆಗೆ ಸಾಗುತಿದ್ದೇನೆ
ಬಲಿಗಂಬದೆಡೆ ನಡೆವ ಆಡಿನಂತೆ (೧೦/ ೨೦)

(ನೋಡಿ, ಸ್ವಗತ)

ಬಟ್ಟೆಯ ತುದಿಯಿಂದ ಮೋರೆಯನು ಮರೆ ಮಾಡಿ
ದೂರ ಸರಿಯುತಿದ್ದಾರೆ ಗೆಳೆಯರೆಲ್ಲ
ಎಲ್ಲ ಸರಿಯಿದ್ದಾಗ ಹಗೆಯವನು ಕೂಡ
ಗೆಳೆಯನಾಗುತ್ತಾನೆ
ಬಾಳು ಹದಗೆಟ್ಟವಗೆ ಗೆಳೆಯನೇ ಇಲ್ಲ (೧೦/ ೧೬)

**ವಿದೂಷಕ** ಅಯ್ಯ, ಸಜ್ಜನರೆ, ನನ್ನ ಪ್ರಿಯಮಿತ್ರ ಚಾರುದತ್ತನನ್ನು ಬಿಟ್ಟುಬಿಡಿ ಬದಲಾಗಿ ನನ್ನನ್ನು ಗಲ್ಲಿಗೇರಿಸಿ

**ಚಾರುದತ್ತ** ಶಾಂತಂ ಪಾಪಮ್ (ನೋಡಿ, ಸ್ವಗತ) ಈಗ ತಿಳಿಯಿತು

ಎಲ್ಲ ಸರಿಯಿದ್ದಾಗ
ಹಗೆಯವನು ಕೂಡ ಗೆಳೆಯನಾಗುತ್ತಾನೆ
ಬಾಳು ಹದಗೆಟ್ಟವಗೆ ಗೆಳೆಯನೇ ಇಲ್ಲ? (೧೦/ ೧೬)

(ಪ್ರಕಾಶ)–

ಮಹಡಿಯಲಿ ನಿಂತ ಈ ಮಹಿಳೆಯರು
ಕಿಟಕಿಯೆಡೆಯಲ್ಲಿ ಮೋರೆಯನು ತೂರಿ
ಚಾರುದತ್ತನೆ ಅಯ್ಯೊ ಎಂದು ನುಡಿಯುತ್ತ
ಕಣ್ಣ ನಾಲೆಗಳಿಂದ ನೀರು ಸುರಿಸುವರು! (೧೦/ ೧೧)

**ಕೊಲೆಗಡುಕ** . ಸರೀರವ್ರೋ ಸರೀರಿ
ಹಗ್ಗ ಹರಿದು ಬಾವಿಯ ನೀರಲ್ಲಿ
ಮುಳುಗುತ್ತಿರುವ ಚಿನ್ನದ ಚೊಂಬಿನಂತೆ
ಅಪವಾದಕೆಡೆಯಾಗಿ ಬದುಕುವಾಸೆ ತೊರೆದ
ಸತ್‌ಪುರುಷನನ್ನು ಏನೆಂದು ನೋಡುತಿರುವಿರಿ? ॥ ೨೪ ॥

**ಚಾರುದತ್ತ** (ದೈನ್ಯದಿಂದ)
ಬೆಳುದಿಂಗಳಂತೆ ಚೆಲುದಂತಪಂಕ್ತಿಯವಳೆ,
ಹವಳಕ್ಕೆ ಸಮನಾದ ಚೆಂದುಟಿಯ ಚೆಲುವೆ,
ನಿನ್ನ ತುಟಿಸೊದೆಯನ್ನು ಸವಿದು ಮೈಮರೆತವನು
ಹೇಗೆ ಕುಡಿಯಲಿ ಈಗ ಅಪಯಶದ ಈ ವಿಷ? (೧೦/ ೧೩)

**ಇನ್ನೊಬ್ಬ** ಅರೆ, ಇನ್ನೊಮ್ಮೆ ಘೋಷಣೆ ಮಾಡು

**ಕೊಲೆಗಡುಕ** ಕೇಳಿರಯ್ಯಾ ಕೇಳಿರಿ ಈತ ವ್ಯಾಪಾರಿ ವಿನಯದತ್ತನ ಮೊಮ್ಮಗ; ಸಾಗರದತ್ತನ ಮಗ; ಆರ್ಯಚಾರುದತ್ತ ಎಂದು ಹೆಸರು ಈತ ಮಾಡಬಾರದ ಕೆಲಸ ಮಾಡಿದ ಕೇವಲ ಹಣದ ಆಸೆಗಾಗಿ ವೇಶ್ಯೆ ವಸಂತಸೇನೆಯನ್ನು ಹಳ್ಳಿಯ ಹೂದೋಟ ಪುಷ್ಪಕರಂಡಕಕ್ಕೆ ಕರೆದೊಯ್ದು ಕುತ್ತಿಗೆ ಹಿಚುಕಿ ಕೊಲೆಮಾಡಿದ ಕದ್ದ ಮಾಲಿನ ಜತೆಗೆ ಈತನನ್ನು ಸೆರೆಹಿಡಿಯಲಾಯಿತು. ಮತ್ತು ಈತನೇ ತನ್ನ ತಪ್ಪನ್ನು ಒಪ್ಪಿಕೊಂಡಿದ್ದಾನೆ ಆದರಿಂದ ಪಾಲಕಮಹಾರಾಜರು ಈತನನ್ನು ಗಲ್ಲಿಗೇರಿಸಬೇಕೆಂದು ಆಜ್ಞೆ ಮಾಡಿದ್ದಾರೆ ಇಹಪರಗಳಿಗೆ ಸಲ್ಲದ ಇಂಥ ಕೆಟ್ಟ ಕೆಲಸವನ್ನು ಇನ್ನು ಯಾರಾದರೂ ಮಾಡಿದರೂ ಅವರಿಗೂ ಮಹಾರಾಜರು ಇಂಥದೇ ಶಿಕ್ಷೆಯನ್ನು ವಿಧಿಸುತ್ತಾರೆ ನೆನಪಿರಲಿ

**ಚಾರುದತ್ತ** ವ್ಯಸನದಲಿ ಕುಗ್ಗಿರುವ ಈ ಹಾಳು ದುರ್ದೆಸೆಗೆ
ಈಡಾದೆ ನಾನದರ ಫಲಿತಾಂಶ ಬಾಳ ಕೊನೆ
ಈ ಇವರು ಕೂಗುತಿಹ ಘೋಷಣೆಯು ನನ್ನನ್ನು

ಮತ್ತಷ್ಟು ನೋಯಿಸಿದೆ; ಕೇಳಬೇಕಾಯಿತೀ
ಕಿವಿಯಿಂದ ನಾನವಳ ಕೊಂದೆನೆಂದು! ॥ ೨೫ ॥

(ಪ್ರವೇಶ: ಉಪ್ಪರಿಗೆಯ ಮೇಲೆ ಬಂಧನದಲ್ಲಿರುವ ಸ್ಥಾವರಕ )

**ಸ್ಥಾವರಕ** : (ಘೋಷಣೆಯನ್ನು ಕೇಳಿ ಗಾಬರಿಗೊಂಡು) ಏನು? ನಿರಪರಾಧಿಯಾದ ಚಾರುದತ್ತನಿಗೆ ಮರಣದಂಡನೆಯೆ? ನನ್ನನ್ನು ನನ್ನ ದಣಿ ಸಂಕಲೆಯಿಂದ ಕಟ್ಟಿಹಾಕಿದ್ದಾನೆ ಇರಲಿ ಕೂಗಿ ಹೇಳುತ್ತೇನೆ: ಕೇಳಿ ಸ್ವಾಮಿ ಕೇಳಿ ಗಾಡಿ ಅದಲುಬದಲಾದ ನಿಮಿತ್ತ ವಸಂತಸೇನೆಯನ್ನು ಹಳೆಯ ಹೂದೋಟ ಪುಷ್ಪಕರಂಡಕಕ್ಕೆ ಕೊಂಡೊಯ್ದು ಪಾಪಿ ನಾನೆ ಅಲ್ಲಿ ನನ್ನ ದಣಿ ತನ್ನನ್ನು ಕಾಮಿಸಲಿಲ್ಲ ಎನ್ನುವುದಕ್ಕಾಗಿ ಈಕೆಯನ್ನು ಕುತ್ತಿಗೆ ಹಿಚುಕಿ ಕೊಂದದ್ದು, ಹೊರತು ಆರ್ಯಚಾರುದತ್ತ ಅಲ್ಲ ಏನು? ತುಂಬ ದೂರ ಇರುವುದರಿಂದ ಯಾರಿಗೂ ಕೇಳಿಸುತ್ತಿಲ್ಲ! ಈಗೇನು ಮಾಡಲಿ? ಕೆಳಕ್ಕೆ ಹಾರಿ ಬಿಡಲೆ? (ಆಲೋಚಿಸಿ) ಹೀಗೆ ಮಾಡಿದರೆ ಆರ್ಯಚಾರುದತ್ತ ಸಾಯೋದನ್ನು ತಪ್ಪಿಸ ಬಹುದು ಇರಲಿ ಈ ಕಿರುಮಾಳಿಗೆಯ ಕಡೆಗಟ್ಟನಿಂದ ಈ ಮುರುಕು ಕಿಟಕಿಯ ಮೂಲಕ ಕೆಳಕ್ಕೆ ಹಾರುತ್ತೇನೆ ನಾನು ಸತ್ತರೆ ಚಿಂತಿಲ್ಲ ಸಜ್ಜನರೆಂಬ ಹಕ್ಕಿಗಳಿಗೆ ವಾಸವೃಕ್ಷವಾದ ಆರ್ಯಚಾರುದತ್ತ ಮಾತ್ರ ಬದುಕಲೇಬೇಕು ಈ ಕಾರಣಕ್ಕಾಗಿ ನಾನು ಸತ್ತರೂ ಸ್ವರ್ಗ ಪಡೆದೇನು (ಎಂದು ಕೆಳಕ್ಕೆ ಹಾರಿ) ಆಶ್ಚರ್ಯ ನಾನು ಸತ್ತಿಲ್ಲ ನನ್ನನ್ನು ಬಿಗಿದಿದ್ದ ಸಂಕಲೆಯೂ ಮುರಿದು ಹೋಯಿತು ಹಾಗಾದರೆ ಕೊಲೆಗಡುಕರು ಘೋಷಣೆ ಮಾಡೋ ಜಾಗಕ್ಕೆ ಹೋಗುತ್ತೇನೆ (ನೋಡಿ, ಬಳಿ ಬಂದು) ಹೋಯ್, ಕೊಲೆಗಡುಕರೆ, ತಡೆಯಿರಿ, ತಡೆಯಿರಿ

**ಕೊಲೆಗಡುಕರು** ಯಾರು ತಡೀಲಿಕ್ಕೆ ಹೇಳ್ತಾ ಇರುವವರು?

**ಚೇಟ** ಕೇಳಿ ಸ್ವಾಮಿ ಕೇಳಿ ಗಾಡಿ ಅದಲು ಬದಲಾದ ನಿಮಿತ್ತ ವಸಂತಸೇನೆ ಯನ್ನು ಹಳೆಯ ಹೂದೋಟ ಪುಷ್ಪಕರಂಡಕಕ್ಕೆ ಕೊಂಡೊಯ್ದು ಪಾಪಿ ನಾನೆ ಅಲ್ಲಿ ನನ್ನ ದಣಿ ತನ್ನನ್ನು ಕಾಮಿಸಲಿಲ್ಲ ಎನ್ನುವುದಕ್ಕಾಗಿ ಈಕೆಯನ್ನು ಕುತ್ತಿಗೆ ಹಿಚುಕಿ ಕೊಂದದ್ದು ಹೊರತು ಆರ್ಯಚಾರುದತ್ತ ಅಲ್ಲ

**ಚಾರುದತ್ತ** : ಸಾವಿನಾ ಕುಣಿಕೆಯಲಿ ನಾನು ಸಿಕ್ಕಿರುವಂಥ
ಈ ಇಂಥ ಕಾಲದಲಿ
ಯಾರಿವನು ಬಂದವನು ಅನಿಮಿತ್ತ ಬಂಧು
ಬರಗಾಲದಲಿ ಸೊರಗಿರುವ ಸಸಿಯ ಮೇಲೆ
ಒಮ್ಮೆಲೇ ಸುರಿದಂತೆ ಸುರಿಮಳೆಯ ಧಾರೆ! ॥ ೨೬ ॥

ಕೇಳಿದಿರಾ ನೀವು?

ಸಾವಿಗೆಂದು ನಾನೆಂದು ಹೆದರಿದವನಲ್ಲ
ಬರಿದೆ ಅಪವಾದಕ್ಕೆ ನೋಯುತಿದ್ದೆ
ಅಪವಾದದಿಂದೀಗ ಬಿಡುಗಡೆಗೊಂಡೆನೋ
ಸಾಯುವುದು ಗಂಡುಮಗು ಹುಟ್ಟಿದಂತೆ ॥ ೨೭ ॥

ಅಲ್ಲದೆ-

ನಾನೆಂದು ಅವನೊಡನೆ ಹಗೆತನವ ಬೆಳೆಸಿಲ್ಲ
ಆದರೂ ತಿಳಿಗೇಡಿ ಆ ಕ್ಷುದ್ರಕೀಟ
ನಂಜುಸವರಿದ ಬಾಣದಂತೆ
ತಾನು ದೂಷಿತನಾಗಿ ನನ್ನನ್ನು ಕೆಡಿಸಿದ ॥ ೨೮ ॥

**ಕೊಲೆಗಡುಕರು** ಸ್ಥಾವರಕ, ನೀನನ್ನುವುದು ನಿಜವೆ?

**ಚೇಟ** · ನಿಜ ನಾನು ಯಾರಿಗಾದರೂ ಈ ಸಂಗತಿ ಹೇಳಿಯೇನು ಅಂತ ಹೆದರಿ ನನ್ನನ್ನು ಉಪ್ಪರಿಗೆಯಲ್ಲಿ ಬೇಡಿ ಬಿಗಿದು ಕಟ್ಟಿಹಾಕಿದ್ದ

**ಶಕಾರ** . (ಪ್ರವೇಶಿಸಿ, ಸಂತೋಷದಿಂದ)

ಮೆಣಸು ಹುಳಿ ಬೆರಶಿದ ಮಾಂಶದಡಿಗೆ
ಕಾಯಿಪಲ್ಲೆ ಮತ್ತು ಮೀನು ಹಾಕಿದ ಶೂಪು
ಮನೆಯಲ್ಲಿ ಜತೆಗೆ ಶಾಲಿಯನ್ನದ ಊಟ
ಮತ್ತೆ ಬೆಲ್ಲದ ಪರಡಿಪಾಯಶದ ಶುರಿತ ॥ ೨೯ ॥

(ಕಿವಿಗೊಟ್ಟು) ಒಡೆದ ಗಂಟೆಯಂತೆ ಗೊರಗೊರ ಶದ್ದು ಕೊಲೆಗಡುಕರ ಮಾತಿನದ್ದು ಇರಬೇಕು ಈ ಶಾವು ಡೋಲು–ನಗಾರಿಗಳ ಶದ್ದು ಕೇಳಿದರೆ ದರಿದ್ರ ಚಾರುದತ್ತನನ್ನು ಕೊಲೆದಾಣಕ್ಕೆ ಕೊಂಡೊಯ್ಯುತಿದ್ದಾರೆ ಅನ್ನೋದು ಖಚಿತ ಅದನ್ನು ನೋಡ್ಲಿಕ್ಕೆ ಹೋಗ್ತೇನೆ ಶತ್ರುವಿನ ಶಾವು ಎಂದರೆ ನನ್ನ ಅಂತರಾತ್ಮಕ್ಕೆ ಭಾರೀ ಶಂತೋಷದ ಶಂಗತಿ ಕೇಳಿದ್ದೇನೆ: ನಮ್ಮ ಹಗೆ ಶಾಯೋದನ್ನು ಕಣ್ಣಾರೆ ಕಂಡರೆ ಮುಂದಿನ ಜನ್ಮದಲ್ಲಿ ಕಣ್ಣುಬೇನೆ ಬರೋದಿಲ್ಲಾಂತೆ ವಿಷದ ಬೇರಿನ ಗಂಟಿನೊಳಗೆ ಶಿಕ್ಕಿಕೊಂಡು ಹೊರಕ್ಕೆ ಬರಲು ಎಡೆ ಹುಡುಕುತ್ತಿರುವ ಹುಳದಂತೆ ನಾನು ಒದ್ದಾಡುತ್ತಿದ್ದೆ. ಈ ದರಿದ್ರ ಚಾರುದತ್ತ ಶಮಯಕ್ಕೆ ಸರಿಯಾಗಿ ಬಲಿಪಶು ಶಿಕ್ಕಿದ ಈಗ ನನ್ನ ಉಪ್ಪರಿಗೆಯ ಕಡೆಗಟ್ಟಿನ ಮೇಲೇರಿ ನಿಂತು ನನ್ನ ಪರಾಕ್ರಮವನ್ನು ಕಣ್ಣಾರೆ ಕಾಣುತ್ತೇನೆ (ಹಾಗೆ ಮಾಡಿ ನೋಡಿ) ಹೀ ಹೀ, ಈ ದರಿದ್ರ ಚಾರುದತ್ತನನ್ನು ಕೊಲೆದಾಣಕ್ಕೆ ಕೊಂಡೊಯ್ಯುವಾಗಲೇ ಇಷ್ಟು ಜನ ಶೇರೋದಾದರೆ – ನನ್ನಂಥ ಮಹಾಶ್ರೇಷ್ಠ ಮನುಷ್ಯನನ್ನು ಕೊಲೆದಾಣಕ್ಕೆ ಕೊಂಡೊಯ್ಯುವಾಗ ಎಷ್ಟೊಂದು ಜನ ಶೇರಲಿಕ್ಕಿಲ್ಲ! (ದಿಟ್ಟಿಸಿ) ಏನು? ಹೊಶ ಗೂಳಿಯಂತೆ ಅಲಂಕೃತನಾದ ಇವನನ್ನು ತೆಂಕಣದಿಕ್ಕಿಗೆ ಕೊಂಡೊಯ್ಯುತಿದ್ದಾರೆ ಆದರೆ

ನನ್ನ ಉಪ್ಪರಿಗೆಯ ಕಡೆಗಟ್ಟಿನ ಬಳಿಯಲ್ಲಿ ಕೇಳುತ್ತಿದ್ದ ಘೋಷಣೆ ಒಮ್ಮೆಲೆ ನಿಂತು ಹೋಯಿತೇಕೆ? (ನೋಡಿ) ಏನು, ಷ್ಥಾವರಕ ಚೇಟನೂ ಇಲ್ಲಿಲ್ಲ ಅವನು ಇಲ್ಲಿಂದ ತಪ್ಪಿಸಿಕೊಂಡು ಹೋಗಿ ಗುಟ್ಟುರಟ್ಟು ಮಾಡಿರಬಹುದೋ ಹೇಗೆ? ಯಾವುದಕ್ಕು ಅವನನ್ನು ಹುಡುಕುತ್ತೇನೆ (ಎಂದು ಇಳಿದು ಬರುತ್ತಾನೆ)

**ಚೇಟ** (ನೋಡಿ) ಅಯ್ಯ ಸ್ವಾಮಿ, ನೋಡಿ, ಆತನೇ ಬಂದಿದ್ದಾನೆ

**ಕೊಲೆಗಡುಕರು** ಪಕ್ಕಕ್ಕೆ ಸರಿಯಿರಿ, ದಾರಿ ಬಿಡಿ,

ಮನೆ ಬಾಗಿಲನ್ನು ಮುಚ್ಚಿಕೊಳ್ಳಿ
ತುಟಿ ತೆರೆಯದೆ ಸುಮ್ಮನಿರಿ
ಅವಿನಯದ ಕೂಗು ಹೊತ್ತ
ಕೆಟ್ಟ ಗೂಳಿ ಬರುತಿದೆ ಇತ್ತ ॥ ೩೦ ॥

**ಶಕಾರ** · ಅರೆ ಅರೆ, ದಾರಿ ಬಿಡಿ ದಾರಿ (ಬಳಿ ಬಂದು) ಮಗು ಷ್ಥಾವರಕ ಚೇಟ ಬಾ ಹೋಗೋಣ

**ಚೇಟ** ಹಾಯ್‌ಹಾಯ್, ಅನಾರ್ಯ, ವಸಂತಸೇನೆಯನ್ನು ಕೊಂದೂ ಸಮಾಧಾನ ಆಗ್ಲಿಲ್ಲ ಈಗ ನಂಬಿದವರ ಕಲ್ಪತರು ಆರ್ಯಚಾರುದತ್ತನನ್ನೂ ಕೊಲ್ಲಹೊರಟಿದ್ದೀಯಲ್ಲ?

**ಶಕಾರ** ಮುತ್ತಿನ ಗಡಿಗೆಯಂಥ ಮನುಷ್ಯ ನಾನು ಹೆಣ್ಮಕ್ಕಳನ್ನು ಕೊಲ್ಲುವವನಲ್ಲ

**ಎಲ್ಲರೂ** : ಆಹ! ಖಂಡಿತ ನೀನೇ ಕೊಂದದ್ದು ಆರ್ಯಚಾರುದತ್ತನಲ್ಲ

**ಶಕಾರ** : ಯಾರು ಹಾಗೆ ಹೇಳುವವನು?

**ಎಲ್ಲರೂ** (ಚೇಟನನ್ನು ತೋರಿಸಿ) ಈತ, ಪಾಪ, ಹೇಳ್ತಿದಾನಲ್ಲ?

**ಶಕಾರ** : (ಸ್ವಗತ, ಹೆದರಿಕೊಂಡು) ಈ ಷ್ಥಾವರಕ ಚೇಟನನ್ನು ಬಿಗಿಯಾಗಿ ಕಟ್ಟಿ ಹಾಕದೆ ಇದ್ದದ್ದು ತೊಂದರೆಗಿಟ್ಟುಕೊಂಡಿತು ನನ್ನ ಅಕಾರ್ಯಕ್ಕೆ ಇವನೊಬ್ಬ ಶಾಕ್ಷಿ (ಆಲೋಚಿಸಿ) ಹೀಗೆ ಮಾಡೋಣ (ಪ್ರಕಾಶ) ಶುಳ್ಳು ಶ್ವಾಮಿ. ಅಯ್ಯೋ ಈ ಚೇಟ ಚಿನ್ನ ಕದ್ದಾಂತ ನಾನು ಹಿಡಿದು ಹೊಡೆದೆ, ಬಡೆದೆ, ಕಟ್ಟಿಹಾಕಿದೆ ಅದಕ್ಕಾಗಿ ಅವ ನನ್ನ ಮೇಲೆ ಹಗೆಯಿಂದ ಏನನ್ನಾದರೂ ಹೇಳಿದರೆ ಅದನ್ನು ನಿಜವೆಂದು ನಂಬೋದಾ? (ಯಾರಿಗೂ ಕಾಣಿಸದಂತೆ ಚೇಟನಿಗೆ ಚಿನ್ನದ ಕಡಗ ಕೊಟ್ಟು ಕಿವಿಯಲ್ಲಿ ಉಸುರುತ್ತಾನೆ) ಮಗೂ ಷ್ಥಾವರಕ ಚೇಟ, ಇದನ್ನು ತಗೊಂಡು ಬೇರೆ ತರ ಹೇಳು

**ಚೇಟ** : (ತಗೊಂಡು) ನೋಡಿ ನೋಡಿ ಸ್ವಾಮಿ, ಓಹ್, ನನಗೆ ಚಿನ್ನದ ಆಸೆ ಬೇರೆ ತೋರಿಸ್ತಾ ಇದಾನೆ

**ಶಕಾರ** . (ಕಡಗವನ್ನು ಕಸಿದುಕೊಂಡು) ಇದೇ ಆ ಚಿನ್ನದ ಬಳೆ ಇದಕ್ಕಾಗಿಯೆ ಇವನನ್ನು ಕಟ್ಟಿಹಾಕಿದ್ದೆ. (ಸಿಟ್ಟಿನಿಂದ) ಓಯ್, ಕೊಲೆಗಡುಕರೆ, ನಾನು

ಚಿನ್ನದ ಕೋಣೆಯ ಕೀಲಿಕೈ ಇವನ ಕೈಯಲ್ಲಿ ಕೊಟ್ಟರೆ ಇವನು ಚಿನ್ನವನ್ನೆ ಕದ್ದ ನಾನು ಕಟ್ಟಿಹಾಕಿ ಹೊಡೆದೆ, ಬಡಿದೆ ನಿಮಗೆ ನನ್ನ ಮಾತಿನಲ್ಲಿ ನಂಬಿಕೆ ಇಲ್ಲಾಂತಾದರೆ ಇವನ ಬೆನ್ನು ನೋಡಿ

**ಕೊಲೆಗಡುಕರು** (ನೋಡಿ) ಸರಿಯಾದ ಮಾತು ಪೆಟ್ಟು ತಿಂದ ಉರಿಯಲ್ಲಿ ಚೇಟ ಏನೋ ಬೊಗಳ್ತಾ ಇದಾನೆ

**ಚೇಟ** ಹಾಯ್, ಇದು ದಾಸ್ಯದ ಪರಿಣಾಮ ಸತ್ಯ ಹೇಳಿದರೂ ಯಾರೂ ನಂಬುವುದಿಲ್ಲ (ದೈನ್ಯದಿಂದ) ಆರ್ಯಚಾರುದತ್ತ, ನಾನು ಮಾಡಬಹುದಾದ್ದು ಇಷ್ಟೆ (ಎಂದು ಕಾಲಿಗೆರಗುತ್ತಾನೆ )

**ಚಾರುದತ್ತ** : (ಕರುಣೆಯಿಂದ)–

ಏಳಯ್ಯ ಎದ್ದುಕೋ ಆಪತ್ತಿಗೊಳಗಾದ
ಸಾಧುವೊಬ್ಬನ ಮೇಲೆ ದಯೆ ತೋರಿದವನೆ,
ಯಾವ ಸ್ವಾರ್ಥವು ಇರದೆ ಕೇವಲ ನೆರವಿಗೆಂದು
ಬಂದೊದಗಿದ ಬಂಧುವೆ, ಧರ್ಮಶೀಲನೆ, ಏಳು
ನನ್ನ ಬಿಡುಗಡೆಗಾಗಿ ನಿನ್ನ ಶಕ್ತಿಯ ಮೀರಿ
ಯತ್ನಿಸಿದೆ ನೀನು ಏನೇನೆಲ್ಲ ಮಾಡಿದೆ
ದೈವ ಹ್ಣೂಗುಡಲಿಲ್ಲ, ಹೋಗಲಿ ಬಿಡು ॥ ೩೧ ॥

**ಕೊಲೆಗಡುಕರು** ಅಯ್ಯಾ, ಈ ಚೇಟನನ್ನು ಹೊಡೆದು ಅತ್ತ ತೊಲಗಿಸು

**ಶಕಾರ** ಹೋಗೋ ಆಚೆ (ಎಂದು ಆಚೆ ದೂಡುತ್ತಾನೆ ) ಅರೆ ಚಂಡಾಲರೆ, ಏಕೆ ತಡಮಾಡುತ್ತೀರಿ? ಇವನನ್ನು ಮುಗಿಸಿಬಿಡಿ

**ಕೊಲೆಗಡುಕರು** · ನಿನಗೆ ಅಷ್ಟು ಅವಸರ ಆದರೆ ನೀನೇ ಕೊಂದುಬಿಡು

**ರೋಹಸೇನ** . ಅಯ್ಯಾ ಕೊಲೆಗಡುಕರೆ, ನನ್ನನ್ನು ಕೊಲ್ಲಿ ತಂದೆಯನ್ನು ಬಿಡಿ

**ಶಕಾರ** ಮಗನನ್ನೂ ತಂದೆಯನ್ನೂ ಒಟ್ಟಿಗೇ ಕೊಂದುಬಿಡಿ

**ಚಾರುದತ್ತ** ಹೋಗು ಮಗೂ, ತಾಯಿಯ ಬಳಿ ಹೋಗು

**ರೋಹಸೇನ** . ನಾನು ಹೋಗಿ ಏನು ಮಾಡೋದು?

**ಚಾರುದತ್ತ** ತಾಯಿಯ ಜತೆಗೂಡಿ ಆಶ್ರಮಕೆ ತೆರಳಿ
ತಾಪಸರ ಬಾಳನ್ನು ಬಾಳು ಮಗುವೆ
ತಂದೆ ಮಾಡಿದ ತಪ್ಪಿಗಾಗಿ ಓ ಕಂದ,
ಬರದಿರಲಿ ನಿನಗೂನು ಇಂಥ ಪಾಡು ॥ ೩೨ ॥

ಗೆಳೆಯ, ಈತನನ್ನು ಕರೆದುಕೊಂಡು ನೀನು ಹೋಗು

**ವಿದೂಷಕ** ಗೆಳೆಯ, ನಿನ್ನನ್ನು ಕಳೆದುಕೊಂಡು ನಾನು ಜೀವ ಹಿಡಿದುಕೊಂಡಿರಬಲ್ಲೆ ಎಂದು ನೀನು ತಿಳಿದಿದ್ದೀಯೇನು?

**ಚಾರುದತ್ತ** ಗೆಳೆಯ, ನಿನ್ನ ಬದುಕು ನಿನ್ನ ಕೈಯಲ್ಲೆ ಇರುವಾಗ ನೀನು ಜೀವ ಬಿಡೋದು ತರವಲ್ಲ

**ವಿದೂಷಕ** (ಸ್ವಗತ) ಇದೇನೋ ಸರಿ ಆದರೂ ಗೆಳೆಯನನ್ನು ಕಳಕೊಂಡು ಬದುಕೋದು ನನಗೆ ಸಾಧ್ಯವಿಲ್ಲ ಆದ್ದರಿಂದ ಬ್ರಾಹ್ಮಣಿಗೆ ಮಗುವನ್ನೊಪ್ಪಿಸಿ ನಾನೂ ಪ್ರಾಣ ಪರಿತ್ಯಾಗ ಮಾಡಿ ನನ್ನ ಜೀವದ ಗೆಳೆಯನನ್ನು ಅನುಸರಿಸುತ್ತೇನೆ (ಪ್ರಕಾಶ) ಓ ಗೆಳೆಯ, ಸರಿ, ಈತನನ್ನು ಈಗಲೆ ಕರೆದುಕೊಂಡುಹೋಗುತ್ತೇನೆ (ಎಂದು ಕೊರಳು ಹಿಡಿದಪ್ಪಿ ಕಾಲಿಗೆ ಬೀಳುತ್ತಾನೆ)

(ಹುಡುಗನೂ ಅಳುತ್ತ ಕಾಲಿಗೆರಗುತ್ತಾನೆ)

**ಶಕಾರ** ಅರೇ, ಹೇಳಿದ್ದು ಕೇಳಿಲ್ಲವಾ, ಮಗನನ್ನೂ ತಂದೆಯನ್ನೂ ಒಟ್ಟಿಗೆ ಕೊಂದುಬಿಡಿ ಎಂದೆನಲ್ಲ

**ಚಾರುದತ್ತ** . (ಭಯವನ್ನು ನಟಿಸುತ್ತಾನೆ)

**ಕೊಲೆಗಡುಕರು** ಚಾರುದತ್ತನ ಜತೆಗೆ ಆತನ ಮಗನನ್ನೂ ಕೊಲ್ಲಲು ನಮಗೆ ರಾಜಾಜ್ಞೆ ಇಲ್ಲ ಹೋಗು ಮಗೂ, ಹೋಗು (ಎಂದು ಕಳಿಸುತ್ತಾರೆ) ಇದು ಮೂರನೆಯ ಘೋಷಣೆಯ ಸ್ಥಾನ ನಗಾರಿ ಬಾರಿಸಿರಿ

**ಇಬ್ಬರೂ** ಕೇಳಿರಯ್ಯಾ ಕೇಳಿರಿ ಈತ ವ್ಯಾಪಾರಿ ವಿನಯದತ್ತನ ಮೊಮ್ಮಗ; ಸಾಗರದತ್ತನ ಮಗ; ಆರ್ಯಚಾರುದತ್ತ ಎಂದು ಹೆಸರು ಈತ ಮಾಡಬಾರದ ಕೆಲಸ ಮಾಡಿದ ಕೇವಲ ಹಣದ ಆಸೆಗಾಗಿ ವೇಶ್ಯೆ ವಸಂತಸೇನೆಯನ್ನು ಹಳೆಯ ಹೂದೋಟ ಪುಷ್ಪಕರಂಡಕಕ್ಕೆ ಕರೆದೊಯ್ದು ಕುತ್ತಿಗೆ ಹಿಚುಕಿ ಕೊಲೆ ಮಾಡಿದ ಕದ್ದಮಾಲಿನ ಜತೆಗೆ ಈತನನ್ನು ಸೆರೆ ಹಿಡಿಯಲಾಯಿತು ಮತ್ತು ಈತನೇ ತನ್ನ ತಪ್ಪನ್ನು ಒಪ್ಪಿಕೊಂಡಿದ್ದಾನೆ ಆದರಿಂದ ಪಾಲಕಮಹಾರಾಜರು ಈತನನ್ನು ಗಲ್ಲಿಗೇರಿಸಬೇಕೆಂದು ಆಜ್ಞೆಮಾಡಿದ್ದಾರೆ ಇಹಪರಗಳಿಗೆ ಸಲ್ಲದ ಇಂಥ ಕೆಟ್ಟಕೆಲಸವನ್ನು ಇನ್ನು ಯಾರಾದರೂ ಮಾಡಿದರೂ ಅವರಿಗೂ ಮಹಾರಾಜರು ಇಂಥದೇ ಶಿಕ್ಷೆಯನ್ನು ವಿಧಿಸುತ್ತಾರೆ ನೆನಪಿರಲಿ

**ಶಕಾರ** (ಸ್ವಗತ) ಏನು ಈ ಜನರಿಗೆ ನಂಬಿಕೆ ಆಗುತ್ತಿಲ್ಲ? (ಪ್ರಕಾಶ) ಅರೇ ಚಾರುದತ್ತ, ಹುಡುಗ, ಈ ಜನರಿಗೆ ಇನ್ನೂ ನಂಬಿಕೆಯಿಲ್ಲ. ನಿನ್ನ ಶ್ವಂತ ನಾಲಿಗೆಯಿಂದ ಬೊಗಳು– "ನಾನೇ ವಶಂತಶೇನೆಯನ್ನು ಕೊಂದದ್ದು" ಎಂದು

**ಚಾರುದತ್ತ** · (ಸುಮ್ಮಗಿರುತ್ತಾನೆ)

**ಶಕಾರ** · ಏಯ್ ಚಂಡಾಲಮನುಷ್ಯ, ಈ ಚಾರುದತ್ತ ಹುಡುಗ ಬಾಯಿ ಬಿಡೋದಿಲ್ಲ ಈ ಹಳೆಯ ಬಿದಿರ ಕೋಲಿನಿಂದ ಅವನ ಬೆನ್ನಿಗೆ ಬಾರಿಶಿ ಬಾರಿಶಿ ಅವನ ಬಾಯಿ ಬಿಡಿಶಿ

**ಕೊಲೆಗಡುಕ** (ಕೋಲನ್ನೆತ್ತಿ) ಚಾರುದತ್ತ, ಹೇಳು

**ಚಾರುದತ್ತ** (ದೈನ್ಯದಿಂದ)–

ಈ ಹಿರಿಯ ಸಂಕಟದ ಕಡಲಲ್ಲಿ ಮುಳುಗಿದರು
ನನಗೆ ಭಯವಿಲ್ಲ, ನನ್ನ ಮನದೊಳಗೆ ದುಗುಡವಿಲ್ಲ
ಸುಳ್ಳೆ ಅಪವಾದಕ್ಕೆ ಬಲಿಯಾಗಬೇಕಾಯಿತಲ್ಲ
ನಾನೆ ಆಕೆಯನು ಕೊಂದೆನೆಂದುಸುರಬೇಕಾಯಿತಲ್ಲ
ಇದು ಮಾತ್ರ ಸುಡುತಿಹುದು ಬೆಂಕಿಯಂತೆ || ೩೩ ||

**ಶಕಾರ** · ಏಯ್ ಚಾರುದತ್ತ, ಹುಡುಗ, ಈ ಜನರಿಗೆ ಇನ್ನೂ ನಂಬಿಕೆಯಿಲ್ಲ ನಿನ್ನ ಶ್ವಂತ ನಾಲಿಗೆಯಿಂದ ಬೊಗಳು: "ನಾನೇ ವಶಂತಶೇನೆಯನ್ನು ಕೊಂದದ್ದು" ಎಂದು

**ಚಾರುದತ್ತ** · ಓವ್ರೋ ನಾಗರಿಕರೆ,

ದಯೆಯಿಲ್ಲದ ನಾನು
ಪರಲೋಕದ ಭಯವಿಲ್ಲದ ನಾನು
ಮುತ್ತಿನಂಥ ಒಬ್ಬ ಹೆಣ್ಮಗಳನ್ನು
ಉಳಿದುದನು ಹೇಳುವನು ಇವನು (೯/ ೩೮)

**ಶಕಾರ** "ಕೊಂದಿದ್ದೇನೆ!"

**ಚಾರುದತ್ತ** ಹಾಗೆಯೆ ಆಗಲಿ

**ಒಂದನೆಯ ಕೊಲೆಗಡುಕ** ಅರೆ, ಈ ಬಾರಿಯ ಕೊಲೆಯ ಸರದಿ ನಿನ್ನದು

**ಎರಡನೆಯ ಕೊಲೆಗಡುಕ** · ಅಲ್ಲ, ನಿನ್ನದು

**ಮೊದಲನೆಯುವ** ತಡಿ, ಲೆಕ್ಕ ಮಾಡೋಣ (ಎಂದು ಬಹುವಿಧದಿಂದ ಲೆಕ್ಕಚಾರ ಮಾಡಿ) ಅರೆ, ಇದು ನನ್ನದೇ ಸರದಿ ಹೌದಾದರೆ ಕೊಲ್ಲೋದಕ್ಕೆ ಒಂದು ಗಳಿಗೆ ಕಾಯೋಣ

**ಎರಡನೆಯುವ** ಯಾಕೆ?

**ಮೊದಲನೆಯುವ** ಅರೆ, ತಂದೆ ಸಾಯುವಾಗ ಒಂದು ಮಾತು ಹೇಳಿದ್ದ: ಮಗೂ ವೀರಕ, ಕೊಲೆ ಮಾಡುವ ಸರದಿ ನಿನ್ನ ಪಾಲಿಗೆ ಬಂದಾಗ ಅಪರಾಧಿಯನ್ನು ಒಮ್ಮೆಲೇ ಕೊಂದುಬಿಡಬೇಡ– ಎಂದು

**ಎರಡನೆಯುವ** ಅರೆ, ಯಾಕೆ?

**ಮೊದಲನೆಯುವ** ಯಾರಾದರೂ ಪುಣ್ಯಾತ್ಮ ಆಕಸ್ಮಾತ್ತಾಗಿ ಬಂದು ದುಡ್ಡು ತೆತ್ತು ಅಪರಾಧಿಯನ್ನು ಬಿಡಿಸಿಕೊಳ್ಳಬಹುದು ಅಥವಾ ಒಮ್ಮೊಮ್ಮೆ ರಾಜನಿಗೆ ಗಂಡುಮಗು ಹುಟ್ಟಿ ಪುತ್ರೋತ್ಸವದ ಸಂಭ್ರಮದಲ್ಲಿ ಎಲ್ಲ ಅಪರಾಧಿಗಳ ಬಿಡುಗಡೆಯ ಆಜ್ಞೆ ಹೊರಡಬಹುದು ಒಮ್ಮೊಮ್ಮೆ ಆನೆ ಸಂಕಲೆ ಮುರಿದುಕೊಂಡು ದಾಳಿ ನಡೆಸಿದರೆ ಆ ಗಡಿಬಿಡಿಯಲ್ಲಿ ಬಿಡುಗಡೆ

ಯಾಗಬಹುದು ಒಮ್ಮೊಮ್ಮೆ ಅರಸೊತ್ತಿಗೆಯೆ ಪಲ್ಲಟವಾಗಿ ಎಲ್ಲ ಅಪರಾಧಿಗಳ ಬಿಡುಗಡೆಯಾಗೋದೂ ಉಂಟು

**ಶಕಾರ** ಏನು ಏನು, ಅರಶೊತ್ತಿಗೆ ಪಲ್ಲಟ ಆಗೋದಾ?

**ಕೊಲೆಗಡುಕ** ಅರೇ, ಯಾರ ಸರದೀಂತ ಲೆಕ್ಕ ಮಾಡೋಣ

**ಶಕಾರ** . ಅರೆ, ಬೇಗ ಕೊಲ್ಲಿರಯ್ಯ ಚಾರುದತ್ತನನ್ನು (ಎಂದು ಹೇಳಿ ಚೇಟನನ್ನು ಹಿಡಿದುಕೊಂಡು ಒಂದು ಮೂಲೆಯಲ್ಲಿ ನಿಲ್ಲುತ್ತಾನೆ)

**ಕೊಲೆಗಡುಕ** ಆರ್ಯಚಾರುದತ್ತ, ರಾಜಾಜ್ಞೆಯ ಅಪರಾಧ ಇದು ಇಲ್ಲಿ ನಮ್ಮದೇನೂ ತಪ್ಪಿಲ್ಲ ಆದ್ದರಿಂದ ಕೊನೆಗಾಲದಲ್ಲಿ ಸ್ಮರಿಸಬೇಕಾದ್ದನ್ನು ಸ್ಮರಿಸಿಕೋ

**ಚಾರುದತ್ತ** ಗೆದ್ದಿತು ಬಲವಂತರ ಬಾಯಿ
ಕೈಕೊಟ್ಟಿತು ನನ್ನಯ ಭಾಗ್ಯ
ಹಾಗಾಗಿ ನಾನಂತು ಕೆಟ್ಟೆ
ಆದರೂ ನಾನು
ಏನಾದರೂ ಪುಣ್ಯ
ಮಾಡಿದ್ದು ದಿಟವಾದರೆ
ಅವಳು ಸ್ವರ್ಗದಲಿರಲಿ
ಅಥವ ಬೇರೆಲ್ಲಿಯೇ ಇರಲಿ
ತೊಳೆಯಲಿ ನನ್ನೀ
ಅಪವಾದದ ಕೊಳೆ
ತನ್ನ ಸಹಜಗುಣದಿಂದ ॥ ೩೪ ॥

ಅಯ್ಯೋ, ನಾನೀಗ ಎತ್ತ ಹೋಗಬೇಕು?

**ಕೊಲೆಗಡುಕ** . (ಎದುರುಗಡೆ ತೋರಿಸಿ) ಅರೆ, ಅಲ್ಲಿ ಕಾಣುತ್ತಲ್ಲ ತೆಂಕಣಮಸಣ ಸಾವಿನ ಶಿಕ್ಷೆಗೊಳಗಾದವರು ಅದನ್ನು ಕಂಡೇ ಜೀವ ಬಿಡುವುದುಂಟು ನೋಡು ನೋಡು—

ಕೆಳಗೆ ಜೋತಾಡುತಿಹ ಹೆಣದರ್ಧಭಾಗವನು
ಮೈಯುದ್ದ ಮಾಡಿ ಮೇಲಕ್ಕೆ ಜಿಗಿದು
ಎಳೆದಾಡುತಿವೆ ಕೆಳಗೆ ನರಿಗಳು
ಇನ್ನರ್ಧಭಾಗವೋ ಶೂಲದಲಿ ಸಿಕ್ಕಿಹುದು
ಸಾವಿನಟ್ಟಹಾಸದ ಮುಸುಕಿನಂತೆ ॥ ೩೫ ॥

**ಚಾರುದತ್ತ** · ಹಾಯ್, ಅಲ್ಪಭಾಗ್ಯನಾದ ನಾನು ಕೆಟ್ಟೆ (ಎಂದು ಉದ್ವೇಗದಿಂದ ಕೂಡುತ್ತಾನೆ.)

**ಶಕಾರ** ನಾನು ಈಗ ಹೋಗೋದಿಲ್ಲ ಚಾರುದತ್ತ ಸಾಯೋದನ್ನು ಕಣ್ಣಾರೆ ನೋಡಬೇಕು (ಸುತ್ತಾಡಿ, ನೋಡಿ) ಏನು ಕೂತುಬಿಟ್ಟ!

**ಕೊಲೆಗಡುಕ** ಚಾರುದತ್ತ, ಏನು ಹೆದರಿಕೊಂಡೆಯಾ?

**ಚಾರುದತ್ತ** (ಕೂಡಲೆ ಎದ್ದು) ಮೂರ್ಖ,

ಸಾವಿಗೆಂದು ನಾನೆಂದು ಹೆದರಿದವನಲ್ಲ
ಬರಿದೆ ಅಪವಾದಕ್ಕೆ ನೋಯುತಿದ್ದೆ
ಅಪವಾದದಿಂದೀಗ ಬಿಡುಗಡೆಗೊಂಡೆನೋ
ಸಾಯುವುದು ಗಂಡುಮಗು ಹುಟ್ಟಿದಂತೆ (೧೦/ ೨೭)

**ಕೊಲೆಗಡುಕ** ಆರ್ಯಚಾರುದತ್ತ, ಆಕಾಶದಲ್ಲಿ ವಾಸಿಸುವ ಸೂರ್ಯ ಚಂದ್ರರಿಗೇ ಆಪತ್ತು ತಪ್ಪಿಲ್ಲ ಸಾವಿಗೆ ಅಂಜುವ ಮನಷ್ಯರ ಪಾಡೇನು? ಲೋಕದಲ್ಲಿ ಮೇಲೇರಿದವನು ಕೆಳಕ್ಕೆ ಬೀಳುತ್ತಾನೆ; ಕೆಳಕ್ಕೆ ಬಿದ್ದವನು ಮೇಲೇರುತ್ತಾನೆ

ಒಮ್ಮೆ ಏಳುವುದು ಒಮ್ಮೆ ಬೀಳುವುದು
ಈ ಹೆಣಕೆ ಬಟ್ಟೆತೊಟ್ಟು ಕಳಚುವುದು
ಇದನೆಲ್ಲ ಬಗೆಯಾಳದಲ್ಲಿ ಯೋಚಿಸಿಕೊಂಡು
ಸಂತೈಸಿಕೋ ನೀನು ನಿನ್ನನ್ನೆ ॥ ೩೭ ॥

(ಎರಡನೆಯ ಕೊಲೆಗಡುಕನನ್ನು ಕುರಿತು) ಇದು ನಾಲ್ಕನೆಯ ಘೋಷಣೆಯ ಸ್ಥಾನ ಆದರಿಂದ ಇಲ್ಲೊಮ್ಮೆ ಘೋಷಣೆ ಮಾಡೋಣ

**ಇಬ್ಬರೂ** ಕೇಳಿರಯ್ಯಾ ಕೇಳಿರಿ ಈತ ವ್ಯಾಪಾರಿ ವಿನಯದತ್ತನ ಮೊಮ್ಮಗ; ಸಾಗರದತ್ತನ ಮಗ; ಆರ್ಯಚಾರುದತ್ತ ಎಂದು ಹೆಸರು ಈತ ಮಾಡ ಬಾರದ ಕೆಲಸ ಮಾಡಿದ ಕೇವಲ ಹಣದ ಆಸೆಗಾಗಿ ವೇಶ್ಯೆ ವಸಂತಸೇನೆ ಯನ್ನು ಹಳೆಯ ಹೂದೋಟ ಪುಷ್ಪಕರಂಡಕಕ್ಕೆ ಕರೆದೊಯ್ದು ಕುತ್ತಿಗೆ ಹಿಚುಕಿ ಕೊಲೆ ಮಾಡಿದ ಕದ್ದ ಮಾಲಿನ ಜತೆಗೆ ಈತನನ್ನು ಸೆರೆ ಹಿಡಿಯಲಾಯಿತು, ಮತ್ತು ಈತನೇ ತನ್ನ ತಪ್ಪನ್ನು ಒಪ್ಪಿಕೊಂಡಿದ್ದಾನೆ. ಆದರಿಂದ ಪಾಲಕಮಹಾರಾಜರು ಈತನನ್ನು ಗಲ್ಲಿಗೇರಿಸಬೇಕೆಂದು ಆಜ್ಞೆ ಮಾಡಿದ್ದಾರೆ ಇಹಪರಗಳಿಗೆ ಸಲ್ಲದ ಇಂಥ ಕೆಟ್ಟ ಕೆಲಸವನ್ನು ಇನ್ನು ಯಾರಾದರೂ ಮಾಡಿದರೂ ಅವರಿಗೂ ಮಹಾರಾಜರು ಇಂಥದೇ ಶಿಕ್ಷೆಯನ್ನು ವಿಧಿಸುತ್ತಾರೆ ನೆನಪಿರಲಿ

**ಚಾರುದತ್ತ** ಹಾ ಪ್ರಿಯೆ, ವಸಂತಸೇನೆ,

ಬೆಳದಿಂಗಳಂತೆ ಚೆಲುದಂತಪಂಕ್ತಿಯವಳೆ,
ಹವಳಕ್ಕೆ ಸಮನಾದ ಚೆಂದುಟಿಯ ಚೆಲುವೆ,
ನಿನ್ನ ತುಟಿಸೊದೆಯನ್ನು ಸವಿದು ಮೈಮರೆತವನು
ಹೇಗೆ ಕುಡಿಯಲಿ ಈಗ ಅಪಯಶದ ಈ ವಿಷ? (೧೦/ ೧೩)

(ಪ್ರವೇಶ: ಸಂಭ್ರಾಂತಳಾದ ವಸಂತಸೇನೆ ಮತ್ತು ಭಿಕ್ಷು)

**ಭಿಕ್ಷು** ಆಶ್ಚರ್ಯ, ಅನ್ಯಾಯವಾಗಿ ತೊಂದರೆಗೀಡಾದ ವಸಂತಸೇನೆಯನ್ನು ಸಂತೈಸಿ ಕರೆದುಕೊಂಡುಬಂದದ್ದರಿಂದ ನನ್ನ ಈ ಸನ್ಯಾಸ ಸಾರ್ಥಕವಾಯಿತು ಉಪಾಸಿಕೆ, ನಿನ್ನನ್ನು ಎಲ್ಲಿಗೆ ಕರೆದೊಯ್ಯಲಿ?

**ವಸಂತಸೇನೆ** ಆರ್ಯಚಾರುದತ್ತನ ಮನೆಗೆ ಆತನ ದರ್ಶನದಿಂದ ಚಂದ್ರನನ್ನು ಕಂಡ ಕುಮುದದ ಬಳ್ಳಿಯಂತೆ ನನ್ನನ್ನು ಆನಂದಗೊಳಿಸು

**ಭಿಕ್ಷು** (ಸ್ವಗತ) ಯಾವ ದಾರೀಲಿ ಹೋಗೋದು? (ಆಲೋಚಿಸಿ) ಹೆದ್ದಾರಿಯಲ್ಲೆ ಹೋಗೋಣ ಉಪಾಸಿಕೆ, ಬಾ ಇದು ಹೆದ್ದಾರಿ (ಕಿವಿಗೊಟ್ಟು) ಏನಿದು ಹೆದ್ದಾರಿಯಲ್ಲಿ ಭಾರಿ ಗದ್ದಲ ಕೇಳಿಸ್ತಾ ಇದೆ?

**ವಸಂತಸೇನೆ** (ಎದುರುಗಡೆ ನೋಡಿ) ಏನಿದು ಎದುರಲ್ಲಿ ಭಾರಿ ಜನ ಸೇರಿದ್ದಾರೆ? ಅಯ್ಯಾ, ಅಲ್ಲಿ ಏನು ಗದ್ದಲ ಎಂದು ತಿಳೀತಿಯಾ? ಒಂದೇ ಬದಿಯಲ್ಲಿ ಜನ ಜಮಾಯಿಸಿ ಭಾರ ಹೆಚ್ಚಿದ್ದರಿಂದ ಉಜ್ಜಯಿನಿಯ ನೆಲ ಒಂದೆಡೆಗೇ ಬಗ್ಗಿ ಕುಗ್ಗಿದಂತಿದೆ!

**ಕೊಲೆಗಡುಕ** ಇದು ಕೊನೆಯ ಘೋಷಣೆಯ ಸ್ಥಾನ ಸಾವುಡೋಲು ಬಾರಿಸಿರಿ ಘೋಷಣೆ ಘೋಷಿಸಿರಿ

**ಇಬ್ಬರೂ** ಕೇಳಿರಯ್ಯಾ ಕೇಳಿರಿ ಈತ ವ್ಯಾಪಾರಿ ವಿನಯದತ್ತನ ಮೊಮ್ಮಗ; ಸಾಗರದತ್ತನ ಮಗ; ಆರ್ಯಚಾರುದತ್ತ ಎಂದು ಹೆಸರು ಈತ ಮಾಡಬಾರದ ಕೆಲಸ ಮಾಡಿದ ಕೇವಲ ಹಣದ ಆಸೆಗಾಗಿ ವೇಶ್ಯೆ ವಸಂತಸೇನೆಯನ್ನು ಹಳೆಯ ಹೂದೋಟ ಪುಷ್ಪಕರಂಡಕಕ್ಕೆ ಕರೆದೊಯ್ದು ಕುತ್ತಿಗೆ ಹಿಚುಕಿ ಕೊಲೆಮಾಡಿದ ಕದ್ದ ಮಾಲಿನ ಜತೆಗೆ ಈತನನ್ನು ಸೆರೆಹಿಡಿಯಲಾಯಿತು ಮತ್ತು ಈತನೇ ತನ್ನ ತಪ್ಪನ್ನು ಒಪ್ಪಿಕೊಂಡಿದ್ದಾನೆ ಆದರಿಂದ ಪಾಲಕ ಮಹಾರಾಜರು ಈತನನ್ನು ಗಲ್ಲಿಗೇರಿಸಬೇಕೆಂದು ಆಜ್ಞೆಮಾಡಿದ್ದಾರೆ ಇಹಪರಗಳಿಗೆ ಸಲ್ಲದ ಇಂಥ ಕೆಟ್ಟ ಕೆಲಸವನ್ನು ಇನ್ನು ಯಾರಾದರೂ ಮಾಡಿದರೂ ಅವರಿಗೂ ಮಹಾರಾಜರು ಇಂಥದೇ ಶಿಕ್ಷೆಯನ್ನು ವಿಧಿಸುತ್ತಾರೆ ನೆನಪಿರಲಿ

**ಕೊಲೆಗಡುಕ** ಚಾರುದತ್ತ, ಸಿದ್ಧನಾಗು ಹೆದರ್ಕೋಬೇಡ ಈಗಲೆ ನಿನ್ನ ಕೊಲೆಯಾಗುತ್ತದೆ

**ಚಾರುದತ್ತ** ಪೂಜ್ಯರಾದ ದೇವತೆಗಳೆ,

**ಭಿಕ್ಷು** · (ಕೇಳಿ, ಗಾಬರಿಯಿಂದ) ಉಪಾಸಿಕೆ, ನಿನ್ನನ್ನು ಚಾರುದತ್ತ ಕೊಲೆಮಾಡಿದ್ದಾನಂತೆ ಅದಕ್ಕಾಗಿ ಅವನನ್ನು ಕೊಲ್ಲಲಿಕ್ಕೆ ಕೊಂಡುಹೋಗಿದ್ದಾರೆ!

**ವಸಂತಸೇನೆ** (ಗಾಬರಿಯಿಂದ) ಹಾಯ್ ಹಾಯ್, ಭಾಗ್ಯಹೀನಳಾದ ನನ್ನ ಕಾರಣಕ್ಕಾಗಿ ಆರ್ಯಚಾರುದತ್ತನಿಗೆ ಸಾವಿನ ಶಿಕ್ಷೆಯೆ? ಅಯ್ಯು, ಬೇಗ ಬೇಗನೆ ಅತ್ತ ಕಡೆ ಹೋಗಲು ದಾರಿ ತೋರಿಸು

**ಭಿಕ್ಷು** ಆರ್ಯಚಾರುದತ್ತನನ್ನು ಬದುಕಿರುವಾಗಲೆ ಕಂಡು ಸಂತೈಸಲಿಕ್ಕಾಗಿ ಬೇಗ ಬಾ ಬುದ್ಧೋಪಾಸಿಕೆ ಅಯ್ಯಾ, ದಾರಿ, ದಾರಿ ಬಿಡಿ

**ವಸಂತಸೇನೆ** ದಾರಿ ದಾರಿ

**ಕೊಲೆಗಡುಕ** ರಾಜಾಜ್ಞೆಯ ಅಪರಾಧಕ್ಕೆ ಅಣಿಯಾಗಬೇಕಾಗಿದೆ ಅದರಿಂದ ಸ್ಮರಿಸಬೇಕಾದ್ದನ್ನು ಸ್ಮರಿಸಿಕೋ

**ಚಾರುದತ್ತ** : ಹೆಚ್ಚೇನು?–

ಗೆದ್ದಿತು ಬಲವಂತರ ಬಾಯಿ
ಕೈಕೊಟ್ಟಿತು ನನ್ನಯ ಭಾಗ್ಯ
ಹಾಗಾಗಿ ನಾನಂತು ಕೆಟ್ಟೆ
ಆದರೂ ನಾನು
ಏನಾದರೂ ಪುಣ್ಯ
ಮಾಡಿದ್ದು ದಿಟವಾದರೆ
ಅವಳು ಸ್ವರ್ಗದಲಿರಲಿ
ಅಥವ ಬೇರೆಲ್ಲಿಯೇ ಇರಲಿ
ತೊಳೆಯಲಿ ನನ್ನೀ
ಅಪವಾದದ ಕೊಳೆ
ತನ್ನ ಸಹಜಗುಣದಿಂದ (೧೦/ ೩೪)

**ಕೊಲೆಗಡುಕ** . (ಕತ್ತಿ ಹಿರಿದು) ಆರ್ಯಚಾರುದತ್ತ, ತಲೆ ನೆಟ್ಟಗೆ ಮಾಡಿ ಸರಿಯಾಗಿ ನಿಲ್ಲು ಒಂದೇ ಪೆಟ್ಟಿಗೆ ನಿನ್ನನ್ನು ಕೊಂದು ಸ್ವರ್ಗಕ್ಕೆ ಕಳಿಸ್ತೇವೆ

**ಚಾರುದತ್ತ** (ಹಾಗೆಯೆ ನಿಲ್ಲುತ್ತಾನೆ )

**ಕೊಲೆಗಡುಕ** (ಹೊಡೆಯಲು ಪ್ರಯತ್ನಿಸುತ್ತಾನೆ ಕತ್ತಿ ಕೈಯಿಂದ ಜಾರಿದಂತೆ ಅಭಿನಯಿಸಿ) ಅರೆ, ಏನಿದು?

ಹಿಡಿಯಲ್ಲಿ ಬಿಗಿಯಾಗಿ ಹಿಡಿದು
ಮುಷ್ಟಿ ಬಿಗಿಹಿಡಿದು
ಹಿರಿದು ಬೀಸಿದರೂನು
ಬರಸಿಡಿಲಿನಂಥ ನನ್ನ ಈ ಕೂರ್ಗತ್ತಿ
ಜಾರಿ ಬಿತ್ತೇಕೆ ನೆಲಕೆ? ॥ ೩೭ ॥

ಇದು ಹೀಗಾದದ್ದು ನೋಡಿದರೆ ನನಗೆ ಕಾಣಿಸ್ತದೆ: ಆರ್ಯಚಾರುದತ್ತ ಸಾಯೋದಿಲ್ಲ ಪಶ್ಚಿಮಗಟ್ಟದ ಮಲೆಯಲ್ಲಿ ನೆಲಸಿರುವ ತಾಯಿ ಮಾಂಕಾಳಿ,

ದಯೆದೋರು, ದಯೆದೋರು ಚಾರುದತ್ತನ ಬಿಡುಗಡೆಯಾಯಿತೆಂದರೆ ನಮ್ಮಾ ಚಂಡಾಲರ ಕುಲವನ್ನು ನೀನು ಉದ್ಧರಿಸಿದಂತಾಯಿತು ತಾಯಿ

**ಇನ್ನೊಬ್ಬ** ಆಜ್ಞೆಯಂತೆ ನಮ್ಮ ಕೆಲಸ ನಾವು ಮಾಡೋಣ

**ಮೊದಲನೆಯವ** ಆಗಲಿ, ಹಾಗೆಯೆ ಮಾಡೋಣ

(ಎಂದು ಇಬ್ಬರೂ ಚಾರುದತ್ತನನ್ನು ಶೂಲಕ್ಕೇರಿಸಲು ಪ್ರಯತ್ನಿಸುತ್ತಾರೆ )

**ಚಾರುದತ್ತ** ಗೆದ್ದಿತು ಬಲವಂತರ ಬಾಯಿ
ಕೈಕೊಟ್ಟಿತು ನನ್ನಯ ಭಾಗ್ಯ
ಹಾಗಾಗಿ ನಾನಂತು ಕೆಟ್ಟೆ
ಆದರೂ ನಾನು
ಏನಾದರೂ ಪುಣ್ಯ
ಮಾಡಿದ್ದು ದಿಟವಾದರೆ
ಅವಳು ಸ್ವರ್ಗದಲಿರಲಿ
ಅಥವ ಬೇರೆಲ್ಲಿಯೇ ಇರಲಿ
ತೊಳೆಯಲಿ ನನ್ನೀ
ಅಪವಾದದ ಕೊಳೆ
ತನ್ನ ಸಹಜಗುಣದಿಂದ (೧೦/ ೩೪)

**ಭಿಕ್ಷು ಮತ್ತು ವಸಂತಸೇನೆ** (ನೋಡಿ) ಅಯ್ಯಾ, ತಡೆಯಿರಿ, ತಡೆಯಿರಿ

**ವಸಂತಸೇನೆ** ಅಯ್ಯಾ, ಯಾರಿಗಾಗಿ ಆತನನ್ನು ಕೊಲ್ಲಹೊರಟಿದ್ದೀರಿ ಆ ಮಂದಭಾಗ್ಯೆ ನಾನು ಇಲ್ಲಿದ್ದೇನೆ

**ಕೊಲೆಗಡುಕ** (ನೋಡಿ)–
ಯಾರಿವಳು ಓಡೋಡಿ ಬರುತಿಹಳು
ತಡೆಯಿರಿ ತಡೆಯಿರೀ ಎಂದು ಕೈಯೆತ್ತಿ ಕೂಗುತ್ತ
ಕೆದರಿದ ತಲೆಮುಡಿಯನು ಗಾಳಿಗೆ ಚೆಲ್ಲುತ್ತ ॥ ೩೮ ॥

**ವಸಂತಸೇನೆ** ಆರ್ಯಚಾರುದತ್ತ ಏನಿದು? (ಎಂದು ಎದೆಯ ಮೇಲೊರಗುವಳು )

**ಭಿಕ್ಷು** · ಆರ್ಯಚಾರುದತ್ತ, ಏನಿದು? (ಎಂದು ಕಾಲಿಗೆರಗುವನು )

**ಕೊಲೆಗಡುಕ** · (ಭಯಗೊಂಡು, ಬಳಿಬಂದು) ಏನು ವಸಂತಸೇನೆಯಾ! ಪುಣ್ಯಕ್ಕೆ ನಾವು ನಿರಪರಾಧಿಯನ್ನು ಶೂಲಕ್ಕೇರಿಸಲಿಲ್ಲ

**ಭಿಕ್ಷು** . (ಎದ್ದು) ಓಹ್, ಚಾರುದತ್ತ ಬದುಕಿದ್ದಾನೆ!

**ಕೊಲೆಗಡುಕ** ನೂರುವರ್ಷ ಬದುಕಿರುತ್ತಾನೆ

**ವಸಂತಸೇನೆ** (ಸಂತಸದಿಂದ) ನನ್ನ ಜೀವ ಮರಳಿಬಂತು

**ಕೊಲೆಗಡುಕ** ಯಾವುದಕ್ಕೂ ಈ ಸುದ್ದಿಯನ್ನು ಯಜ್ಞಶಾಲೆಯತ್ತ ತೆರಳಿದ ಮಹಾರಾಜರಿಗೆ ತಿಳಿಸೋಣ (ಎಂದು ಇಬ್ಬರೂ ಹೋಗುತ್ತಾರೆ.)

**ಶಕಾರ** (ವಸಂತಸೇನೆತಯನ್ನು ಕಂಡು, ಕಳವಳದಿಂದ) ಆಶ್ಚರ್ಯ! ಈ ತೊತ್ತಿನ ಹೆಣ್ಣನ್ನು ಯಾರು ಮತ್ತೆ ಬದುಕಿಸಿದರು ಇವಳನ್ನು ಕಂಡು ನನ್ನ ಪ್ರಾಣ ಹಾರ್‍ತಾ ಇದೆ ಇರಲಿ ಇಲ್ಲಿಂದ ಕಾಲುಕೀಳ್ತೇನೆ (ಎಂದು ಓಡುತ್ತಾನೆ )

**ಕೊಲೆಗಡುಕ** · (ಮರಳಿ ಬಂದು) ಅರೆ, ನಮಗೆ ರಾಜಾಜ್ಞೆಯಾದದ್ದು– 'ಯಾರು ಆಕೆಯನ್ನು ಹೊಡೆದುರುಳಿಸಿದರೋ ಅವರನ್ನು ಕೊಲ್ಲಿ,– ಎಂದಲ್ಲವೆ? ಅದರಿಂದ ರಾಜರ ಭಾವನೆಂಟನನ್ನೆ ಬೆನ್ನು ಹತ್ತೋಣ (ಎಂದು ಇಬ್ಬರೂ ಹೋಗುತ್ತಾರೆ )

**ಚಾರುದತ್ತ** (ವಿಸ್ಮಿತನಾಗಿ)

ಕತ್ತಿ ತೊನೆದಾಗ ತಲೆಯ ಮೇಲೆ
ಸಾವು ನಿಂತಾಗ ಬಾಯಿ ತೆರೆದು
ಯಾರಿವಳು ಬಂದವಳು
ಬರಗಾಲದಲ್ಲಿ ಸೊರಗಿರುವ ಸಸಿಯ ಮೇಲೆ
ಒಮ್ಮೆಲೇ ಸುರಿದಂತೆ ಸುರಿಮಳೆಯ ಧಾರೆ ॥ ೩೯ ॥

(ದಿಟ್ಟಿಸಿ ನೋಡಿ)

ಇವಳು ಬೇರೆಯೇ ವಸಂತಸೇನೆಯೆ?
ಅಥವ ಅವಳೇ ಸ್ವರ್ಗದಿಂದಿಳಿದು ಬಂದಳೆ?
ನನ್ನ ಹುಚ್ಚು ಮನಸು ಕನಸು ಕಾಣುತಿದೆಯೆ
ಅಥವ, ನಿಜವಾಗಿ ಅವಳು ಸಾಯಲೇ ಇಲ್ಲವೆ? ॥ ೪೦ ॥

ಅಥವಾ–

ನನ್ನ ಬದುಕಿಸಲೆಂದು ಇಳಿದು ಬಂದಳೆ ಅವಳು
ಮರಳಿ ತಾನೇ ಸ್ವರ್ಗಲೋಕದಿಂದ
ಅಥವ ಆಕೃತಿಯಲ್ಲಿ ಅವಳನ್ನೆ ಹೋಲುತಿಹ
ಬೇರೊಬ್ಬಳೇ ಇವಳು ಬಂದಳೇ ಇತ್ತ ॥ ೪೧ ॥

**ವಸಂತಸೇನೆ** (ಕಂಬನಿಗರೆಯುತ್ತ ಎದ್ದು, ಕಾಲುಗಳ ಮೇಲೆ ಬಿದ್ದು) ಆರ್ಯ ಚಾರುದತ್ತ, ಯಾರಿಂದಾಗಿ ನಿನಗೆ ಇಂಥ ಪಡಬಾರದ ಪಾಡು ಬಂತೊ ಅಂಥ ಪಾಪಿ ನಾನೇ

(ತೆರೆಯ ಮರೆಯಲ್ಲಿ)

ಆಶ್ಚರ್ಯ, ಆಶ್ಚರ್ಯ, ವಸಂತಸೇನೆ ಬದುಕಿದ್ದಾಳೆ. (ಎಂದು ಎಲ್ಲರೂ ಉದ್ಗರಿಸುತ್ತಾರೆ )

**ಚಾರುದತ್ತ** (ಆಲಿಸಿ, ಥಕ್ಕನೆ ಎದ್ದು, ಸ್ಪರ್ಶಸುಖವನ್ನನುಭವಿಸಿ, ಕಣ್ಣು ಮುಚ್ಚಿಕೊಂಡೆ ಸಂತಸದಿಂದ ಗದ್ಗದನಾಗಿ) ಪ್ರಿಯೆ, ನೀನು ವಸಂತಸೇನೆ?

**ವಸಂತಸೇನೆ** ನಾನೇ ಆ ಭಾಗ್ಯಹೀನಳು

**ಚಾರುದತ್ತ** . (ಕಣ್ಣಿಟ್ಟು ನೋಡಿ ಉಲ್ಲಸಿತನಾಗಿ) ಏನು, ವಸಂತಸೇನೆಯೆ! (ಆನಂದದಿಂದ)–

ಸಿಕ್ಕಿ ಬಿದ್ದಿರಲು ನಾನು ಸಾವಿನ ದವಡೆಯಲ್ಲಿ
ಸದ್‌ವಿದ್ಯೆಯಂತೆ ನೀನೆಂತು ಒದಗಿಬಂದೆ?
ಮೊಲೆಗಳನು ಮಿಾಯಿಸುತ ಕಣ್ಣೀರ ಧಾರೆಯಿಂದ ॥ ೪೨ ॥

ಪ್ರಿಯೆ ವಸಂತಸೇನೆ,

ನಿನ್ನ ಕಾರಣಕಾಗಿ ಸಾಯಬೇಕಾಗಿದ್ದ
ಈ ದೇಹ ನಿನ್ನಿಂದ ಮತ್ತೆ ಪಾರಾಯಿತು
ಓ! ಎನಿತು ಶಕ್ತಿ ಪ್ರಿಯಸಂಗಮಕ್ಕೆ
ಇಲ್ಲವಾದರೆ ಹೀಗೆ
ಸತ್ತವರು ಕೂಡ ಮರಳಿ ಬರುವುದುಂಟೆ? ॥ ೪೩ ॥

ಅಲ್ಲದೆ ಪ್ರಿಯೆ, ನೋಡು–

ಅದೆ ಕೆಂಪು ಬಟ್ಟೆ, ಅದೆ ಕೆಂಪು ಮಾಲೆ
ನೀನೀಗ ಬಂದಾಗ
ಆಯಿತದು ಮದುಮಗನಲಂಕಾರ
ಹಾಗೆಯೆ ಈ ಸಾವುಡೋಲಿನ ಸದ್ದು ಕೂಡ
ಮದುಮನೆಯ ವಾದ್ಯಕ್ಕೆ ಸಮನಾಯಿತು ॥ ೪೪ ॥

**ವಸಂತಸೇನೆ** ಆರ್ಯ, ಈ ಅತಿಸೌಜನ್ಯದಿಂದ ಏನು ಮಾಡಿಬಿಟ್ಟೆ?

**ಚಾರುದತ್ತ** ಪ್ರಿಯೆ, ನಿನ್ನನ್ನು ನಾನು ಕೊಂದಿದ್ದೇನೆ ಎಂದು–

ಅಧಿಕಾರ ಬಲದಿಂದ ಹಳೆಯ ಯಾವುದೋ ಹಗೆಗೆ
ಸೇಡುತೀರಿಸಹೊರಟನವನು
ತಾನು ನರಕದಲಿ ಬೀಳುವುದಕೆ ಮುನ್ನ
ನನ್ನನೂ ಒಂದಿಷ್ಟು ನರಕಕ್ಕೆ ತಳ್ಳಿದ ॥ ೪೫ ॥

**ವಸಂತಸೇನೆ** : (ಕಿವಿಮುಚ್ಚಿಕೊಂಡು) ಶಾಂತಂ ಪಾಪಂ ಅವನೇ ರಾಜನ ಭಾವನಂಟ ನನ್ನನ್ನು ಹೊಡೆದು ಬೀಳಿಸಿದವ

**ಚಾರುದತ್ತ** . (ಭಿಕ್ಷುವನ್ನು ಕಂಡು) ಈತ ಯಾರು?

**ವಸಂತಸೇನೆ** : ಆತ ನನ್ನನ್ನು ಹೊಡೆದುರುಳಿಸಿದ ದುರ್ಜನ ಆದರೆ ಈತ ನನಗೆ ಜೀವದಾನ ಮಾಡಿದ ಸಜ್ಜನ

**ಚಾರುದತ್ತ** ಯಾರಪ್ಪಾ ನೀನು ಅನಿಮಿತ್ತ ಬಂಧು?

**ಭಿಕ್ಷು** ಆರ್ಯನಿಗೆ ನನ್ನ ಗುರುತು ಹತ್ತಲಿಲ್ಲವಾ? ನಾನು ನಿಮ್ಮ ಕಾಲು ತಿಕ್ಕುತ್ತಿದ್ದ ನವರ್ಕಳಿಯ ಸಂವಾಹಕ ಅಲ್ಲವಾ? ನನ್ನನ್ನು ಜೂಜುಕೋರರು ಹಿಡಿದುಕೊಂಡಾಗ ನಿಮ್ಮವ ಅಂತ ತಿಳಿದು ಈ ಉಪಾಸಿಕೆ ತನ್ನ ಚಿನ್ನ ಕೊಟ್ಟು ನನ್ನನ್ನು ಬಿಡಿಸಿದಳು ಅಂದಿನಿಂದ ಜೂಜಿನ ಮೇಲೆಯೆ ವೈರಾಗ್ಯ ಬಂದು ಬುದ್ಧಸನ್ಯಾಸಿ ಆದೆ ಈಕೆ ಗಾಡಿ ಬದಲಾಗಿ ಹಳೆಯ ಹೂದೋಟ ಪುಷ್ಪಕರಂಡಕಕ್ಕೆ ಹೋಗಿದ್ದಳು ಅಲ್ಲಿ ಆ ಅನಾರ್ಯ "ಈಕೆಗೆ ತನ್ನ ಮೇಲೆ ಮನಸು ಇಲ್ಲ" ಎಂದು ತಿಳಿದು ಈಕೆಯ ಕುತ್ತಿಗೆ ಹಿಚುಕಿ ಕೆಡವಿದ ನಾನು ಹೋಗಿ ನೋಡಿದೆ

(ತೆರೆಯ ಮರೆಯಲ್ಲಿ ಕಲಕಲ)

ಜಯವಾಗಲಿ ಜಯವಾಗಲಿ
ದಕ್ಷಯಜ್ಞವಿಧ್ವಂಸಕಾರಿಗೆ
ಶಿವನಿಗೆ ನಂದಿಯೇರಿದವನಿಗೆ
ಜಯವಾಗಲಿ ಜಯವಾಗಲಿ
ಕ್ರೌಂಚಗಿರಿಯನು ಮುರಿದವಗೆ
ಆರು ಮೋರೆಯವಗೆ
ಜಯವಾಗಲಿ ಜಯವಾಗಲಿ
ಕೈಲಾಸಧ್ವಜವೇರಿಸಿದವಗೆ
ಇಡಿಯ ಭೂಮಿಯನು ಗೆದ್ದವಗೆ
ಹಿರಿಯ ಹಗೆಯನ್ನು ಗೆದ್ದವಗೆ
ಮಹಾರಾಜ ಆರ್ಯಕನಿಗೆ ॥ ೪೬ ॥

**ಶರ್ವಿಲಕ** (ಒಡನೆ ಪ್ರವೇಶಿಸಿ)–
ಆ ಕೆಟ್ಟ ಅರಸು ಪಾಲಕನ ಕೊಂದು
ಅವನ ರಾಜ್ಯದಲೊಡನೆ ಆರ್ಯಕನ ನಿಲಿಸಿ
ಮಾಡಿ ಆತನಿಗೆ ಪಟ್ಟಾಭಿಷೇಕ
ಅವನ ಆಣತಿಯ ತಲೆಯಲ್ಲಿ ನಾನು
ಭಗವತ್ಪ್ರಸಾದದಂತೆ ಹೊತ್ತು
ಆಪತ್ತಿಗೊಳಗಾದ ಶ್ರೀ ಚಾರುದತ್ತನನು
ಬಿಡಿಸಹೊರಟಿರುವೆನೀಗ ॥ ೪೭ ॥

ಸೈನಿಕರು ಮಂತ್ರಿಗಳು ಕೈಕೊಟ್ಟ
ಆ ಶತ್ರುವನ್ನೀಗ ಕೊಂದು

ಪುರದ ಜನತೆಗೆ ಸಮಾಧಾನ ತಂದು
ಸಗ್ಗಿಗರ ಸಾಮ್ರಾಜ್ಯದಂತಿರುವ
ಆ ಶತ್ರುವಿನ ರಾಜ್ಯ, ಭೂಮಿಯೊಡೆತನವೆಲ್ಲ
ನಮ್ಮ ಕೈಯೊಳಗೆ ಬಂತು ॥ ೪೮ ॥

(ಎದುರುಗಡೆ ನೋಡಿ) ಇರಲಿ ಜನರ ನೂಕು ನುಗ್ಗಲು ನೋಡಿದರೆ ಇಲ್ಲೆ ಅವನು ಇರಬೇಕು ಮಹಾರಾಜ ಆರ್ಯಕನ ಈ ಉದ್ಯಮ ಆರ್ಯ ಚಾರುದತ್ತನ ಉಳಿವಿನ ಮೂಲಕ ಸಾರ್ಥಕವಾದೀತೆ ಹೇಗೆ? (ಅವಸರದಿಂದ ಧಾವಿಸಿಬಂದು) ತೊಲಗಿರಿ ಮೂರ್ಖರೆ, (ನೋಡಿ, ಆನಂದದಿಂದ) ವಸಂತಸೇನೆ ಮತ್ತು ಚಾರುದತ್ತ ಬದುಕಿದ್ದಾರೆಯೆ? ನಮ್ಮೊಡೆಯನ ಮನೋರಥಗಳು ಈಡೇರಿದವು

ಶೀಲವತಿ ಪ್ರಿಯತಮೆಯ
ಸೌಜನ್ಯದ ಹಡಗಿನಿಂದ
ದಡ ಕಾಣದ ಆಪತ್ತಿನ
ಕಡಲು ದಾಟಿದವನನ್ನು
ಬಹಳ ಕಾಲದ ಮೇಲೆ
ಕಾಣುತಿರುವೆನಹೋ
ಗ್ರಹಣ ಕಳೆದ ಮೇಲೆ
ಬೆಳದಿಂಗಳೊಡನೆ
ಸೊಗಯಿಸುವ ಚಂದ್ರನಂತೆ ॥ ೪೯ ॥

(ಸ್ವಗತ) ಆದರೆ ಈತನಿಗೆ ಮಹಾಪರಾಧ ಮಾಡಿದ ನಾನು ಈಗ ಹೇಗೆ ಎದುರು ಹೋಗಿ ಮೋರೆ ತೋರಿಸಲಿ? ಅಥವ ನೇರ ನಡತೆ ಎಲ್ಲೆಡೆಯು ಚೆನ್ನು (ಬಳಿ ಬಂದು, ಕೈಮುಗಿದು, ಪ್ರಕಾಶ) ಆರ್ಯಚಾರುದತ್ತ

**ಚಾರುದತ್ತ** . ಯಾರಪ್ಪಾ ನೀನು?

**ಶರ್ವಿಲಕ** · ನಿನ್ನ ಮನೆಗೆ ಕನ್ನ ಕೊರೆದು ಚಿನ್ನ ಕದ್ದವ
ಆಗಿ ಹೋದ ಪಾತಕಕ್ಕೆ ಪರಿಮಾರ್ಜನೆಯೆಂದು
ಈಗ ಬಂದು ನಿನ್ನನ್ನೆ ಶರಣು ಹೊಂದುತಿರುವೆ ॥ ೫೦ ॥

**ಚಾರುದತ್ತ** : ಗೆಳೆಯ, ಆ ಮಾತು ಬೇಡ ಅದು ನೀನು ನನ್ನ ಮೇಲೆ ತೋರಿದ ವಿಶ್ವಾಸ (ಎಂದು ಕೊರಳಲ್ಲಿ ಹಿಡಿದು ಅಪ್ಪುತ್ತಾನೆ)

**ಶರ್ವಿಲಕ** : ಅಲ್ಲದೆ–
ನ್ಯಾಯಮಾರ್ಗವ ಹಿಡಿದ ಆರ್ಯಕನು ತಾನು
ಕುಲವನ್ನು ಮಾನವನ್ನುಳಿಸಲೆಂದು
ಯಜ್ಞಗೃಹದಲ್ಲಿದ್ದ ಕೆಟ್ಟ ಪಾಲಕನನ್ನು

ಯಜ್ಞದಲಿ ಪಶುವನ್ನು ಹೇಗೆ ಹಾಗೆ
ಬಲಿತೆಗೆದುಕೊಂಡನೀಗ ॥ ೫೧ ॥

**ಚಾರುದತ್ತ** . ಏನು?

**ಶರ್ವಿಲಕ** ನಿನ್ನ ಗಾಡಿಯನೇರಿ ಬಂದು
ನಿನಗೆ ಶರಣಾದನಲ್ಲ ಅಂದು
ಅವನು ಯಜ್ಞದಲಿ ಪಶುವನ್ನು ಎಂತಂತೆ
ಕೊಂದು ಪಾಲಕನನ್ನು ಬಲಿ ತೆಗೆದುಕೊಂಡ ॥ ೫೨ ॥

**ಚಾರುದತ್ತ** ಶರ್ವಿಲಕ, ಪಾಲಕ ಗೊಲ್ಲರ ಕೇರಿಯಿಂದ ಹಿಡಿದು ತಂದು ಅಕಾರಣವಾಗಿ ಸೆರೆಯಲ್ಲಿಟ್ಟಿದ್ದನಲ್ಲ ಆರ್ಯಕನೆಂಬವನನ್ನು; ಮತ್ತೆ ನೀನು ಬಿಡಿಸಿದೆಯಲ್ಲ; ಆತನೆ ಏನು?

**ಶರ್ವಿಲಕ** ನಿನ್ನ ಊಹೆ ಸರಿ

**ಚಾರುದತ್ತ** ಸಂತೋಷ ಸಂತೋಷ

**ಶರ್ವಿಲಕ** ನಿನ್ನ ಗೆಳೆಯ ಆರ್ಯಕ ರಾಜ್ಯದ ಪೀಠವನ್ನೇರಿದ ಕ್ಷಣದಲ್ಲಿ ಉಜ್ಜಯಿನಿಯ ವೇಣಾನದಿಯ ತಡಿಯಲ್ಲಿರುವ ಕುಶಾವತಿಯನ್ನು ನಿನಗೆ ಒಪ್ಪಿಸಿದ್ದಾನೆ ಸ್ನೇಹದ ಈ ಮೊದಲ ಕೊಡುಗೆಯನ್ನು ಸ್ವೀಕರಿಸಬೇಕು (ತಿರುಗಿ) ಅರೇ, ಆ ಪಾತಕಿ ರಾಜನ ಭಾವನೆಂಟನನ್ನು ಹಿಡಿದು ತನ್ನಿರೋ

(ತೆರೆಯ ಮರೆಯಲ್ಲಿ)

ಶರ್ವಿಲಕನ ಅಪ್ಪಣೆಯಂತೆ ಆಗಲಿ

**ಶರ್ವಿಲಕ** · ಆರ್ಯ, ಮಹಾರಾಜ ಆರ್ಯಕ ವಿಜ್ಞಾಪಿಸುತಿದ್ದಾನೆ: ನಿಮ್ಮ ಗುಣವಂತಿಕೆಯಿಂದ ದೊರಕಿದ ರಾಜ್ಯ ಇದು ಇದನ್ನು ಹೇಗೆ ಬೇಕು ಹಾಗೆ ಉಪಯೋಗಿಸಬಹುದು

**ಚಾರುದತ್ತ** ನಮ್ಮ ಗುಣವಂತಿಕೆಯಿಂದ ದೊರಕಿದ ರಾಜ್ಯ!

(ತೆರೆಯ ಮರೆಯಲ್ಲಿ)

ಏಯ್ ರಾಜನ ಭಾವನೆಂಟ, ಬಾ ಬಾ ನೀನು ಮಾಡಿದ ಅನ್ಯಾಯದ ಫಲವನ್ನನುಭವಿಸು

(ಪ್ರವೇಶ: ಕೈಯನ್ನು ಹಿಂದಕ್ಕೆ ಕಟ್ಟಿದ ಶಕಾರ; ಅವನನ್ನು ಹಿಡಿದು ತರುತ್ತಿರುವ ಜನರು )

**ಶಕಾರ** ಓ ಮಾತಾಯಿ,
ದೂರದೂರಕೆ ನಾನು ಓಡಿದರು ಕೂಡ
ಒಳ್ಳೆ ಕೊಬ್ಬಿದ ಕತ್ತೆಯಂತೆ–

ಇವರು ನನ್ನನು ಕಟ್ಟಿತಂದರು
ಹಾದಿಗೆಟ್ಟ ನಾಯಿಯಂತೆ ॥ ೫೩ ॥

(ಸುತ್ತಲೂ ನೋಡಿ) ಶುತ್ತಲೂ ರಾಜನ ಶೆರೆ ಶುತ್ತುವರಿದಿದೆ ಅನಾಥನಾದ ನಾನು ಈಗ ಯಾರ ಮೊರೆ ಹೋಗಲಿ? (ಆಲೋಚಿಸಿ) ಇರಲಿ ಅಡ್ಡಬಿದ್ದವರ ಕೈಬಿಡದ ಅವನನ್ನೇ ಶರಣಾಗುತ್ತೇನೆ (ಎಂದು ಬಳಿ ಬಂದು) ಆರ್ಯಚಾರುದತ್ತ, ಕಾಪಾಡು ಕಾಪಾಡು (ಎಂದು ಕಾಲಿಗೆ ಬೀಳುತ್ತಾನೆ )

(ತೆರೆಯ ಮರೆಯಲ್ಲಿ)

ಆರ್ಯಚಾರುದತ್ತ, ಬಿಡುಬಿಡು, ಈತನನ್ನು ನಾವು ಕೊಲ್ಲುತ್ತೇವೆ

**ಶಕಾರ** (ಚಾರುದತ್ತನನ್ನು ಕುರಿತು) ಓ ಅನಾಥ ರಕ್ಷಕ, ಕಾಪಾಡು

**ಚಾರುದತ್ತ** (ದಯೆಯಿಂದ) ಅಹಹ, ಶರಣು ಬಂದವನಿಗೆ ಅಭಯ, ಅಭಯ

**ಶರ್ವಿಲಕ** (ಆಕ್ರೋಶದಿಂದ) ಆಹ್, ಇವನನ್ನು ಚಾರುದತ್ತನ ಬಳಿಯಿಂದ ಅತ್ತ ತೊಲಗಿಸಿರಿ (ಚಾರುದತ್ತನನ್ನು ಕುರಿತು) ಈ ಪಾಪಿಗೆ ಏನು ಶಿಕ್ಷೆ ವಿಧಿಸ ಬೇಕು– ಹೇಳಬೇಕು

ಕೈಕಾಲು ಕಟ್ಟಿ ಎಳೆದೊಯ್ಯಲೇನು
ಇಲ್ಲ, ನಾಯಿಗಳಿಗೆ ಉಣಬಡಿಸಲೇನು
ಅಥವ ಶೂಲದ ಮೇಲೆ ಕುಕ್ಕಿ ನಿಲ್ಲಿಸಲೇನು
ಇಲ್ಲ, ಗರಗಸದಿಂದ ಸೀಳಿಬಿಡಲೆ? ॥ ೫೪ ॥

**ಚಾರುದತ್ತ** ಏನು, ನಾನು ಹೇಗೆ ಹೇಳಿದರೆ ಹಾಗೆ ಮಾಡುವುದು ನಿಜವಾ?

**ಶರ್ವಿಲಕ** ಅದರಲ್ಲಿ ಸಂದೇಹವೇಕೆ?

**ಶಕಾರ** . ಅಯ್ಯಾ ಚಾರುದತ್ತ, ದಮ್ಮಯ್ಯ, ಕಾಲಿಗೆ ಅಡ್ಡಬಿದ್ದೆ ಕಾಪಾಡು ಕಾಪಾಡು ನಿನ್ನ ಹಿರಿಮೆಗೆ ಒಪ್ಪುವಂತೆ ಮಾಡು, ಇನ್ನೊಮ್ಮೆ ಹೀಗೆ ಮಾಡೋದಿಲ್ಲ

(ತೆರೆಯ ಮರೆಯಲ್ಲಿ)

ನಾಗರಿಕರೆ, ಕೊಲ್ಲಿರಿ ಏಕೆ ಆ ಪಾಪಿ ಇನ್ನೂ ಬದುಕಿ ಉಳಿದಿದ್ದಾನೆ?

**ವಸಂತಸೇನೆ** . (ವಧ್ಯಮಾಲೆಯನ್ನು ಚಾರುದತ್ತನ ಕೊರಳಿನಿಂದ ತೆಗೆದು ಶಕಾರನ ಕೊರಳಿಗೆ ಹಾಕುತ್ತಾಳೆ )

**ಶಕಾರ** ತೊತ್ತಿನ ಮಗಳೆ, ದಯಮಾಡು ದಯಮಾಡು ಇನ್ನು ನಿನ್ನನ್ನು ಕೊಲ್ಲೋದಿಲ್ಲ ಒಮ್ಮೆಗೆ ನನ್ನನ್ನು ಬಚಾವು ಮಾಡು

**ಶರ್ವಿಲಕ** ಅರೆ, ಕೊಂಡೊಯ್ಯಿರೋ ಆರ್ಯಚಾರುದತ್ತ, ಅಪ್ಪಣೆಯಾಗಲಿ: ಈ ಪಾಪಿಗೆ ಏನು ಶಿಕ್ಷೆ ವಿಧಿಸಲಿ?

**ಚಾರುದತ್ತ** ಏನು, ನಾನು ಹೇಗೆ ಹೇಳಿದರೆ ಹಾಗೆ ಮಾಡುವುದು ನಿಜವಾ?

**ಶರ್ವಿಲಕ** ಅದರಲ್ಲಿ ಸಂದೇಹವೇಕೆ?

**ಚಾರುದತ್ತ** ನಿಜವಾಗಿ?

**ಶರ್ವಿಲಕ** ನಿಜವಾಗಿ

**ಚಾರುದತ್ತ** ಹಾಗಾದರೆ ಇವನನ್ನು ಕೂಡಲೇ–

**ಶರ್ವಿಲಕ** ಏನು ಕೊಂದುಬಿಡಲೆ?

**ಚಾರುದತ್ತ** ಅಲ್ಲ ಅಲ್ಲ, ಬಿಟ್ಟುಬಿಡಿ

**ಶರ್ವಿಲಕ** ಏಕೆ?

**ಚಾರುದತ್ತ** ಅಪರಾಧವೆಸಗಿರುವ ಶತ್ರುವಾದರು ಕೂಡ
ಶರಣಾಗತನಾಗಿ ಕಾಲಿಗೆರಗಿದಾಗ
ಶಸ್ತ್ರದಿಂದವನನ್ನು ಕೊಲ್ಲುವುದು ತರವಲ್ಲ

**ಶರ್ವಿಲಕ** ಸರಿ, ಹಾಗಾದರೆ ನಾಯಿಗಳಿಗೆ ಅವುತಣ ಮಾಡಿಸೋಣ

**ಚಾರುದತ್ತ** ಅಲ್ಲ–
ಉಪಕಾರದಿಂದಲೇ ಆತನನು ಕೊಲಬೇಕು || ೫೫ ||

**ಶರ್ವಿಲಕ** ಓಹ್! ಆಶ್ಚರ್ಯ! ನಾನೇನು ಮಾಡಬೇಕು? ಆರ್ಯ ಹೇಳಬೇಕು

**ಚಾರುದತ್ತ** ಬಿಟ್ಟುಬಿಡು

**ಶರ್ವಿಲಕ** ಬಿಟ್ಟೆ

**ಶಕಾರ** ಅಮ್ಮಯ್ಯ, ಒಮ್ಮೆಗೆ ಬದುಕಿದೆ (ಎಂದು ಜನರ ಗುಂಪಿನೊಡನೆ ಹೋಗುತ್ತಾನೆ )

(ತೆರೆಯ ಮರೆಯಲ್ಲಿ ಕಲಕಲ )

(ಪುನಃ ತೆರೆಯ ಮರೆಯಲ್ಲಿ)

ಈಕೆ, ಆರ್ಯಚಾರುದತ್ತನ ಧರ್ಮಪತ್ನಿ ಧೂತಾಂಬೆ, ಸೆರಗಿನಂಚಿಗೆ ಗಂಟುಬಿದ್ದು ಕಾಲಿಗಡ್ಡಾಗುತ್ತಿರುವ ಮಗನನ್ನು ಪಕ್ಕಕ್ಕೆ ತಳ್ಳುತ್ತ, ಕಂಬನಿ ಸುರಿಸುತ್ತಿರುವ ಜನರು ಬೇಡ ಬೇಡ ಎಂದು ತಡೆಯುತಿದ್ದಂತೆಯೆ ಉರಿಯುವ ಬೆಂಕಿಗೆ ಹಾರುತಿದ್ದಾಳೆ

**ಶರ್ವಿಲಕ** (ಆಲಿಸಿ, ತೆರೆಯ ಒಳಗಡೆ ದಿಟ್ಟಿಸಿ) ಏನು, ಚಂದನಕ! ಚಂದನಕ, ಏನಿದು?

**ಚಂದನಕ** : (ಪ್ರವೇಶಿಸಿ) ಆರ್ಯ, ಕಾಣಿಸುತ್ತಿಲ್ಲವೇನು? ಅರಮನೆಯ ಬಲಗಡೆ ಭಾರಿ ಜನಸಮ್ಮರ್ದ ನೆರೆದಿದೆ ಈಕೆ ಆರ್ಯಚಾರುದತ್ತನ ಧರ್ಮಪತ್ನಿ ಧೂತಾಂಬೆ, ಸೆರಗಿನಂಚಿಗೆ ಗಂಟುಬಿದ್ದು ಕಾಲಿಗಡ್ಡಾಗುತ್ತಿರುವ ಮಗನನ್ನು

ಪಕ್ಕಕ್ಕೆ ತಳ್ಳುತ್ತ, ಕಂಬನಿ ಸುರಿಸುತ್ತಿರುವ ಜನರು ಬೇಡ ಬೇಡ ಎಂದು ತಡೆಯುತಿದ್ದಂತೆಯೆ ಉರಿಯುವ ಬೆಂಕಿಗೆ ಹಾರುತಿದ್ದಾಳೆ ನಾನು ಆಕೆಗೆ ಹೇಳಿದೆ: ತಾಯಿ, ದುಡುಕಬೇಡ ಆರ್ಯಚಾರುದತ್ತ ಬದುಕಿದ್ದಾನೆ ಎಂದು ಆದರೆ ದುಃಖದ ಒತ್ತಡದಲ್ಲಿ ಯಾರು ಕೇಳೋದು, ಯಾರು ನಂಬೋದು ಹೇಳು

**ಚಾರುದತ್ತ** (ಉದ್ವೇಗದಿಂದ) ಹಾಯ್, ಪ್ರಿಯೆ, ನಾನು ಬದುಕಿರುವಾಗಲೆ ಏನು ಮಾಡಹೊರಟಿರುವೆ? (ಮೇಲೆ ನೋಡಿ, ನಿಟ್ಟುಸಿರುಗರೆದು)–

ಓ ಚೆಲುನಡತೆಯ ಹೆಣ್ಣೆ
ಈ ಹಾಳು ನೆಲಕ್ಕೆ ಹೇಳಿಸಿದ್ದಲ್ಲ
ನಿನ್ನ ಚಾರಿತ್ರ ಎನ್ನುವುದು ನಿಜ
ಆದರೂ ಪತಿವ್ರತೆಯಾದ ನೀನು
ನಿನ್ನ ಗಂಡನನು ಇಲ್ಲೆ ಬಿಟ್ಟು
ಒಬ್ಬಳೇ ಸ್ವರ್ಗಸುಖ ಬಯಸುವುದು ತರವಲ್ಲ || ೫೬ ||

(ಎಂದು ಮೂರ್ಛೆ ಹೋಗುತ್ತಾನೆ )

**ಶರ್ವಿಲಕ** ಹಾಯ್, ಪ್ರಮಾದವಾಯಿತು
ಅತ್ತ ಕಡೆ ಕೂಡಲೇ ಹೋಗಬೇಕಾದಾಗ
ಆರ್ಯ ಬಿದ್ದಿಹನಿಲ್ಲಿ ಮೋಹಗೊಂಡು
ಎಲ್ಲ ಕಡೆಯಿಂದಲೂ ನಮ್ಮ ಯತ್ನಕ್ಕೆ
ಅಡ್ಡಿಬಂದೊದಗುತಿದೆಯಲ್ಲ ಅಯ್ಯೋ! || ೫೭ ||

**ವಸಂತಸೇನೆ** ಸಮಾಧಾನ ಆರ್ಯ ಅತ್ತಹೋಗಿ ಆರ್ಯೆಯನ್ನು ಬದುಕಿಸು ಇಲ್ಲವಾದರೆ ಅವಸರದಲ್ಲಿ ಅನರ್ಥವಾಗಿಬಿಟ್ಟೀತು

**ಚಾರುದತ್ತ** (ಸಾವರಿಸಿಕೊಂಡು, ಒಡನೆ ಎದ್ದುನಿಂತು) ಹಾ ಪ್ರಿಯೆ, ಎಲ್ಲಿರುವೆ? ನನಗೆ ಮಾರುತ್ತರ ಕೊಡುವುದಿಲ್ಲವೆ?

**ಚಂದನಕ** : ಇತ್ತ ಬಾ ಆರ್ಯ, ಇತ್ತ ಬಾ (ಎಂದು ಎಲ್ಲರೂ ನಡೆದು ಹೋಗುತ್ತಾರೆ )

(ಪ್ರವೇಶ: ಹಿಂದೆ ಹೇಳಿದ ಸ್ಥಿತಿಯಲ್ಲಿರುವ ಧೂತಾದೇವಿ, ಆಕೆಯ ಬಟ್ಟೆಯ ತುದಿಯನ್ನೆಳೆಯುತ್ತಿರುವ ರೋಹಸೇನ, ಜತೆಗೆ ವಿದೂಷಕ ಮತ್ತು ರದನಿಕೆ )

**ಧೂತಾದೇವಿ** · (ಕಂಬನಿ ಸುರಿಸುತ್ತ) ಮಗೂ, ನನ್ನನ್ನು ಬಿಡು ತಡೆಯಬೇಡ ಆರ್ಯಪುತ್ರನ ಬಗೆಗೆ ಅಮಂಗಲದ ಸುದ್ದಿಯನ್ನು ಕೇಳಲು ನನಗೆ ಭಯ ವಾಗುತ್ತಿದೆ (ಎಂದು ಎದ್ದುನಿಂತು ಬಟ್ಟೆಯಂಚನ್ನು ಎಳೆದುಕೊಂಡು, ಬೆಂಕಿಯೆಡೆಗೆ ತೆರಳುತ್ತಾಳೆ )

**ರೋಹಸೇನ** : ಅಮ್ಮಾ, ನಾನೂ ಬರ್ತೇನೆ ನೀನಿಲ್ಲದೆ ನಾನು ಹೇಗೆ ಬದು ಕೋದು? (ಎಂದು ಸರ್ರನೆ ಹೋಗಿ ಪುನಃ ಬಟ್ಟೆಯಂಚನ್ನು ಹಿಡಿದುಕೊಳ್ಳುತ್ತಾನೆ )

**ವಿದೂಷಕ** ಬ್ರಾಹ್ಮಣಿಯಾದ ನೀನು ಪ್ರತ್ಯೇಕವಾಗಿ ಚಿತೆಯೇರುವುದು ತರವಲ್ಲ ಎಂದು ಋಷಿಗಳು ಹೇಳುತ್ತಾರೆ

**ಧೂತಾದೇವಿ** · ತಪ್ಪಾದರೆ ತಪ್ಪು ಆರ್ಯಪುತ್ರನ ಬಗೆಗೆ ಅಮಂಗಲದ ಸುದ್ದಿಯನ್ನು ನಾನು ಕೇಳಲಾರೆ

**ಶರ್ವಿಲಕ** : (ಎದುರುಗಡೆ ನೋಡಿ) ಆರ್ಯೆ ಬೆಂಕಿಗೆ ಹಾರಲು ಅಣಿಯಾಗಿದ್ದಾಳೆ ಬೇಗ ಬೇಗ ಹೋಗೋಣ

**ಚಾರುದತ್ತ** (ಬೇಗಬೇಗನೆ ನಡೆದು ಬರುತ್ತಾನೆ )

**ಧೂತಾದೇವಿ** ರದನಿಕೆ, ಮಗುವನ್ನು ಹಿಡಿದುಕೋ ಅಷ್ಟರಲ್ಲಿ ನಾನು ನನ್ನ ಇಚ್ಛೆಯನ್ನು ಈಡೇರಿಸಿಕೊಳ್ಳುತ್ತೇನೆ

**ಚೇಟಿ** (ದುಃಖದಿಂದ) ನಾನೂ ಒಡತಿಯ ದಾರಿಯನ್ನೆ ಹಿಡಿಯಬೇಕೆಂದು ನಿರ್ಧರಿಸಿದ್ದೇನೆ

**ಧೂತಾದೇವಿ** (ವಿದೂಷಕನನ್ನು ನೋಡಿ) ಆರ್ಯ, ನೀನಾದರೂ ಹಿಡಿದುಕೋ ಮಗುವನ್ನು

**ವಿದೂಷಕ** (ಉದ್ವೇಗದಿಂದ) ಇಷ್ಟಸಿದ್ಧಿಯಾಗಬೇಕಾದರೆ ಬ್ರಾಹ್ಮಣನನ್ನು ಮುಂದಿಟ್ಟುಕೊಂಡು ಹೋಗಬೇಕು ಆದರಿಂದ ನಾನೇ ಮೊದಲು ಹಾರಿಬಿಡ್ತೇನೆ

**ಧೂತಾದೇವಿ** . ಏನು! ಇಬ್ಬರೂ ತಿರಸ್ಕರಿಸಿಬಿಟ್ಟರಲ್ಲ! (ಬಾಲಕನನ್ನು ಅಪ್ಪಿ ಹಿಡಿದು) ಗಟ್ಟಿಮನಸ್ಸು ಮಾಡಿಕೋ ಮಗೂ ನಮಗೆ ಎಳ್ಳುನೀರು ಕೊಡೋದಕ್ಕಾಗಿ ನೀನು ಬದುಕಲೇಬೇಕು ಎಲ್ಲ ಮುಗಿದಮೇಲೆ ಹಾರಯಿಸಿ ಫಲವೇನು? (ನಿಟ್ಟುಸಿರುಗರೆದು) ಇನ್ನೆಂದೂ ಆರ್ಯಪುತ್ರ ಬಂದು ನಿನ್ನನ್ನು ಸಂತೈಸುವಂತಿಲ್ಲ

**ಚಾರುದತ್ತ** (ಆಲಿಸಿ, ಕೂಡಲೆ ಬಂದು) ನಾನೇ ಸಂತೈಸುತ್ತೇನೆ ಈ ಹುಡುಗನನ್ನು (ಎಂದು ತೋಳುಗಳಿಂದ ಹುಡುಗನನ್ನೆತ್ತಿ ಎದೆಗೆ ಒತ್ತಿಕೊಳ್ಳುತ್ತಾನೆ )

**ಧೂತಾದೇವಿ** · (ನೋಡಿ) ಆಶ್ಚರ್ಯ, ಆರ್ಯಪುತ್ರನದೇ ದನಿ (ಪುನಃ ಚೆನ್ನಾಗಿ ದಿಟ್ಟಿಸಿ ಸಂತಸದಿಂದ) ಅಬ್ಬ, ಆರ್ಯಪುತ್ರನೇ ಹೌದು. ಓಹ್, ಎಂಥ ಸಂತಸದ ಸಂಗತಿ

**ಹುಡುಗ** : (ನೋಡಿ ಸಂತಸದಿಂದ) ಆಶ್ಚರ್ಯ, ನನ್ನಪ್ಪ ನನ್ನನ್ನಪ್ಪಿಕೊಳ್ತಿದ್ದಾರೆ. (ಧೂತಾದೇವಿಯನ್ನು ಕುರಿತು) ಅಮ್ಮಾ, ಗೆದ್ದೆ. ತಂದೆಯೆ ನನ್ನನ್ನು ಸಂತೈಸುತಿದ್ದಾರೆ (ಎಂದು ತಂದೆಯನ್ನು ಅಪ್ಪುತ್ತಾನೆ )

**ಚಾರುದತ್ತ** . (ಧೂತಾದೇವಿಯನ್ನು ಕುರಿತು)–

ಓ ಪ್ರಿಯೇ, ನಿನ್ನನಿಯ ಬದುಕಿ ಇರುವಾಗಲೇ
ಏಕಿಂಥ ಕಠಿಣ ನಿರ್ಧಾರ ಗೈದೆ?

ಸೂರ್ಯಮುಳುಗಲಿಕೆ ಮುನ್ನ ತಾವರೆ ಬಳ್ಳಿ
ಕಣ್ಣುಮುಚ್ಚುವುದುಂಟೆ ಎಲ್ಲಾದರೂ? || ೫೮ ||

**ಧೂತಾದೇವಿ** ಆರ್ಯಪುತ್ರ, ಅದಕ್ಕೇ ಅದನ್ನು ಜಡ ಅನ್ನೋದು

**ವಿದೂಷಕ** (ಕಂಡು ಆನಂದದಿಂದ) ಹೀಹೀ, ಇದೇ ಕಣ್ಣುಗಳಿಂದ ಪ್ರಿಯ ಮಿತ್ರನನ್ನು ಕಾಣ್ತಾ ಇದ್ದೇನೆ ಪತಿವ್ರತೆಯ ಪ್ರಭಾವ ಅಂಥದು ಬೆಂಕಿಗೆ ಹಾರುವ ನಿರ್ಧಾರದಿಂದಲೆ ಗಂಡನ ಸಮಾಗಮ ದೊರಕಿತು (ಚಾರುದತ್ತನನ್ನು ಕುರಿತು) ಪ್ರಿಯಮಿತ್ರನಿಗೆ ಗೆಲುವಾಗಲಿ

**ಚಾರುದತ್ತ** · ಬಾ ಮೈತ್ರೇಯ (ಎಂದು ಅಪ್ಪಿಕೊಳ್ಳುತ್ತಾನೆ )

**ಚೇಟಿ** ಎಂಥ ಅಪೂರ್ವ ಸಂಯೋಜನೆ! ಆರ್ಯ ನಮಸ್ಕರಿಸುತಿದ್ದೇನೆ (ಎಂದು ಚಾರುದತ್ತನ ಕಾಲಿಗೆರಗುತ್ತಾಳೆ )

**ಚಾರುದತ್ತ** (ಬೆನ್ನ ಮೇಲೆ ಕೈಯಿಟ್ಟು) ರದನಿಕೆ, ಏಳು (ಎಂದು ಎಬ್ಬಿಸುತ್ತಾನೆ )

**ಧೂತಾದೇವಿ** (ವಸಂತಸೇನೆಯನ್ನು ಕಂಡು) ಓಹ್, ನನ್ನ ತಂಗಿ ಕೂಡ ಕ್ಷೇಮವಾಗಿದ್ದಾಳೆ

**ವಸಂತಸೇನೆ** ಈಗಷ್ಟೆ ಕ್ಷೇಮವಾದಂತಾಯಿತು (ಎಂದು ಪರಸ್ಪರ ಆಲಿಂಗಿಸಿ ಕೊಳ್ಳುತ್ತಾರೆ )

**ಶರ್ವಿಲಕ** · ಆರ್ಯನ ಎಲ್ಲ ನೇಹಿಗರೂ ಬದುಕಿದ್ದಾರೆ ಸಂತೋಷ

**ಚಾರುದತ್ತ** ನಿಮ್ಮೆಲ್ಲರ ಹರಕೆಯಿಂದ

**ಶರ್ವಿಲಕ** ಆರ್ಯೆ ವಸಂತಸೇನೆ, ಪರಿತುಷ್ಟನಾದ ಮಹಾರಾಜ ನಿನ್ನನ್ನು ಚಾರುದತ್ತನ ಅರ್ಧಾಂಗಿ ಎಂದು ಕರೆದು ಗೌರವಿಸಿದ್ದಾನೆ

**ವಸಂತಸೇನೆ** : ಆರ್ಯ, ಕೃತಾರ್ಥಳಾದೆ

**ಶರ್ವಿಲಕ** (ವಸಂತಸೇನೆಗೆ ಬುರುಕಿಯನ್ನು ಹೊದೆಸಿ ಚಾರುದತ್ತನನ್ನು ಕುರಿತು) ಆರ್ಯ, ಈ ಭಿಕ್ಷುವಿಗೆ ಏನು ಕೊಡಮಾಡಲಿ?

**ಚಾರುದತ್ತ** ಭಿಕ್ಷು, ನಿನಗೆ ಯಾವುದು ಪ್ರಿಯ?

**ಭಿಕ್ಷು** . ಈ ಇಂಥ ಬಾಳಿನ ನಶ್ವರತೆಯನ್ನು ಕಂಡು ನನಗೆ ಸನ್ಯಾಸದಲ್ಲಿ ಪ್ರೀತಿ ಹೆಚ್ಚಿದೆ

**ಚಾರುದತ್ತ** ಗೆಳೆಯ, ಈತನ ನಿರ್ಧಾರ ದೃಢವಾದದ್ದು ಅದರಿಂದ ಭೂಮಿಯ ಎಲ್ಲ ಬುದ್ಧವಿಹಾರಗಳಲ್ಲು ಈತ ಕುಲಪತಿಯಾಗಲಿ

**ಶರ್ವಿಲಕ** ಆರ್ಯ ಹೇಳಿದಂತೆಯೆ ಆಗಲಿ

**ಭಿಕ್ಷು** . ತುಂಬ ಸಂತೋಷ

**ವಸಂತಸೇನೆ** ಜೀವ ಮರಳಿ ಬಂದಂತಾಯಿತು

**ಶರ್ವಿಲಕ** ಸ್ಥಾವರಕನಿಗೆ ಏನು ಮಾಡಲಿ?

**ಚಾರುದತ್ತ** ಒಳ್ಳೆಯ ನಡತೆಯ ನಿಮಿತ್ತ ಅವನಿಗೆ ದಾಸ್ಯದಿಂದ ಬಿಡುಗಡೆಯಾಗಲಿ ಆ ಚಂಡಾಲರು ಚಂಡಾಲರ ಕುಲಕ್ಕೆಯೆ ನಾಯಕರಾಗಲಿ ಚಂದನಕ ಭೂಮಿಯ ದಂಡನಾಯಕನಾಗಲಿ ಆ ರಾಜನ ಭಾವನೆಂಟ ಮೊದಲು ಯಾವ ಕೆಲಸದಲ್ಲಿದ್ದನೋ ಈಗಲೂ ಹಾಗೆಯೆ ಇರಲಿ

**ಶರ್ವಿಲಕ** ಆರ್ಯ ಹೇಳಿದಂತೆಯೆ ಆಗಲಿ ಆದರೆ ಇವನೊಬ್ಬನನ್ನು ಬಿಟ್ಟುಬಿಡು ಆತನನ್ನು ಕೊಲ್ಲುವುದೇ ಸರಿ

**ಚಾರುದತ್ತ** : ಶರಣು ಬಂದವನಿಗೆ ಅಭಯವುಂಟು
ಅಪರಾಧವೆಸಗಿರುವ ಶತ್ರುವಾದರು ಕೂಡ
ಶರಣಾಗತನಾಗಿ ಕಾಲಿಗೆರಗಿದಾಗ
ಶಸ್ತ್ರದಿಂದವನನ್ನು ಕೊಲ್ಲುವುದು ತರವಲ್ಲ
ಉಪಕಾರದಿಂದಲೇ ಆತನನು ಕೊಲಬೇಕು (೧೦/ ೫೫)

**ಶರ್ವಿಲಕ** · ಹೇಳಬೇಕು: ಇನ್ನೇನು ನಿನಗೆ ಪ್ರಿಯವಾದದ್ದು ಮಾಡಬೇಕು!

**ಚಾರುದತ್ತ** ಇದಕ್ಕಿಂತಲು ಪ್ರಿಯವಾದದ್ದು ಏನುಂಟು?
ತೊಡೆದುಹೋಯಿತು ನನ್ನ ಬಾಳಿಗೆ ಬಳಿದ ಕಳಂಕ
ಕಾಲಿಗೆರಗಿದ ಹಗೆಯು ಬಿಡುಗಡೆಯ ಕಂಡ
ಹಗೆಯ ಬೇರನೆ ಕಿತ್ತು ನನ್ನ ನೆಚ್ಚಿನ ಗೆಳೆಯ
ಆರ್ಯಕನು ಅರಸಾಗಿ ರಾಜ್ಯ ಪಡೆದ
ನನ್ನ ಪ್ರಿಯೆ ದೊರಕಿದಳು ನನಗೆ ಮರಳಿ
ಜತೆಗೂಡಿದಿರಿ ಮತ್ತೆ ಎಲ್ಲ ನಲ್ಗೆಳೆಯರು
ನೀನು ಮತ್ತಾರ್ಯಕನು, ಇನ್ನು ಬೇರೇನುಂಟು?
ಪಡೆಯಬೇಕಾದದ್ದು? ನಾನೇನ ಕೇಳಲಿ? ॥ ೫೯ ॥

ಬಾವಿಗಿಳಿಬಿಟ್ಟ ಹಗ್ಗಕ್ಕೆ ಬಿಗಿದಂಥ
ಕೊಡದಂತೆ ಕುಣಿಸುವುದು ನಮ್ಮನು ವಿಧಿ
ಕೆಲವರನು ತುಂಬಿಸುತ, ಮಾಡಿ ಕೆಲವರ ಬರಿದು,
ಕೆಲವರನು ಮೇಲೆತ್ತಿ, ತಳ್ಳಿ ಕೆಲವರ ಕೆಳಗೆ,
ಕೆಲವರನು ಗಲಿಬಿಲಿಯ ಜಾಲದಲಿ ಹಾಕಿ
ಈ ದ್ವಂದ್ವಗಳ ತಾಕಲಾಟದಾಟಗಳಿಂದ
ಈ ಜಗದ ಪಾಡನ್ನು ಎತ್ತಿ ತೋರಿಸುತಿದೆ ॥ ೬೦ ॥

ಆದರೂ ಈ ಒಂದು ಬಯಕೆ ಉಂಟು: (ಭರತವಾಕ್ಯ)

ಹಸನಾಗಿ ಹಾಲನ್ನು ಕೊಡುತಿರಲಿ ಹಸುಗಳು
ನೆಲ ತಂಬ ತುಂಬಿರಲಿ ಸಸ್ಯಸಂಪತ್ತು

ಕಾಲಕಾಲಕೆ ಮೋಡ ಸುರಿಸಲಿ ಮಳೆ
ಎಲ್ಲರಿಗು ಸುಖವುಣಿಸಿ ತಂಗಾಳಿ ಬೀಸಲಿ
ಇರಲಿ ಮನೆಮನೆಯಲ್ಲಿ ಸಂತಸದ ಚಿಲುಮೆ
ಬೆಲೆಯಿರಲಿ ಬ್ರಾಹ್ಮಣರ ಸಜ್ಜನಿಕೆಗೆ
ಹಗೆಗಳನು ತರಿದು ಸಿರಿವಂತರಾದರಸರು
ಧರ್ಮದಲಿ ಪಾಲಿಸಲಿ ಭೂಮಿಯನ್ನು ॥ ೬೧ ॥

(ಎಂದು ಎಲ್ಲರೂ ಹೋಗುತ್ತಾರೆ)

**"ಮುಗಿತಾಯ" ಎಂಬ**

**ಹತ್ತನೆಯ ಅಂಕ**

**ಮುಗಿಯಿತು**

= Ψ =

'ಮೃಚ್ಛಕಟಿಕ'!
ಅರ್ಥವಾಗದಿದ್ದರೂ ಕಿವಿಯಲ್ಲಿ ಗುನುಗುನುವ ರೋಚಕ
ವಾದ ಹೆಸರು
ನಾಟಕದಂತೆಯೆ ಹೆಸರಿನಲ್ಲು ಹೊಸತನದ ಛಾಪು
'ಮೃತ್' ಎಂದರೆ ಮಣ್ಣು; ಆವೆಯ ಮಣ್ಣು.
'ಶಕಟಿಕಾ' ಎಂದರೆ ಆಟದ ಬಂಡಿ. 'ಮೃತ್+ಶಕಟಿಕಾ'
ವನ್ನು ಕುರಿತ ಕೃತಿ 'ಮೃಚ್ಛಕಟಿಕಮ್' ಕನ್ನಡದಲ್ಲಿ
'ಆವೆಯ ಮಣ್ಣಿನ ಆಟದ ಬಂಡಿ'.



ವೇಶ್ಯೆ ವಸಂತಸೇನೆ ಮತ್ತು ಕೊಡುಗೈತನದಿಂದ
ಸಿರಿಯನ್ನೆಲ್ಲ ಕಳಕೊಂಡ ಚಾರುದತ್ತ ಇವರಿಬ್ಬರ
ಬೆರಗಾದ ಪ್ರೇಮವೇ ಕಥೆಯ ಮೂಲದ್ರವ್ಯ. ಅದರ
ಸುತ್ತ ಸಮಕಾಲೀನ ಸಾಮಾಜಿಕ ಜೀವನದ ಎಲ್ಲ
ಓರೆಕೋರೆಗಳನ್ನು ಪೋಣಿಸಿ ಕಥೆಯನ್ನು ಹೆಣೆದ
ಕವಿಯ ಚಾತುರ್ಯ ಅಚ್ಚರಿಪಡಿಸುವಂಥದು.
ಅದೂ ಒಬ್ಬ ರಾಜ ಇಂಥ ನಾಟಕವನ್ನು ಬರೆದ
ಎನ್ನುವುದು ಇಲ್ಲಿ ತುಂಬ ಮುಖ್ಯವಾಗುತ್ತದೆ.

— ಬನ್ನಂಜೆ ಗೋವಿಂದಾಚಾರ್ಯ